ಜನೇವರಿ, ೧೯೫೭

ಬೆಲೆ : ೧೨ ಆಣೆ



# ಕಸ್ತೂರಿ

ಜ್ಞಾನ ಮತ್ತು ಮನೋರಂಜನ

# ನಿರುದ್ಯೋಗವನ್ನು ನಿವಾರಿಸಲು ಸಹಾಯ ಮಾಡಿರಿ



ಅಂಬರಚರಕ : ಇದರಿಂದ ರಾಟಿಗಿಂತ ನಾಲ್ಕುಪಟ್ಟು ಹೆಚ್ಚಿಗೆ ನೂಲು ತೆಗೆಯಬಹುದು.

ಕೈ-ಕಾಗದ : ಕೈಯಿಂದ ತಯಾರಾದ ಸುಂದರ ಹಾಗೂ ಶ್ರೇಷ್ಠ ಕಾಗದಗಳು.





ಗಾಣ : ಈ ಗಾಣದಿಂದ ಹೆಚ್ಚು ಎಣ್ಣೆ ತೆಗೆಯಲು ಬರುವದು.

ಸಬಕಾರ : ಕಡಿಮೆ ಬೆಲೆಯಲ್ಲಿ ದೊರೆಯುವ ಶುದ್ಧ ಹಾಗೂ ಶ್ರೇಷ್ಠ ಸಾಬೂನು.






ಕಡ್ಡಿಪೆಟ್ಟಿಗೆ : ಹೆಚ್ಚು ಹೊತ್ತು ಉರಿಯುವ ದೀಪದ ಕಡ್ಡಿಗಳು.

ಚಾಪೆ : ಹೊಸ ಪದ್ಧತಿಯಿಂದ ಹೆಣೆದ ಸುಂದರ ಚಾಪೆಗಳು.





ಬಡಿಗತನ : ಹೊಸ ಪದ್ಧತಿಯ ಶಿಕ್ಷಣ ಕೊಡಲಾಗುತ್ತಿದೆ.

## ಆದರ್ಶ ಗ್ರಾಮೋದ್ಯೋಗ ಕೇಂದ್ರ

ರಾಮತೀರ್ಥ ( ಜಮಖಂಡಿ )

# ಕಸ್ತೂರಿ

ಕನ್ನಡ ಡೈಜೆಸ್ಟ್

ಪ್ರತಿತಿಂಗಳ ೧ನೆ.ದಿನಾಂಕ ಪ್ರಕಟವಾಗುವದು.


ಮುಖ್ಯ ಸಂಪಾದಕರು :
ಮೊಹರೆ ಹನುಮಂತರಾಯರು

ಪ್ರಕಾಶಕರು :
ಲೋಕಶಿಕ್ಷಣ ಟ್ರಸ್ಟ್-ಹುಬ್ಬಳ್ಳಿ

ಕಚೇರಿ :
ಸಂಯುಕ್ತ ಕರ್ನಾಟಕ ಕಾರ್ಯಾಲಯ
ಹುಬ್ಬಳ್ಳಿ

ಮುದ್ರಕರು :
ಸಂಯುಕ್ತ ಕರ್ನಾಟಕ ಮುದ್ರಣಾಲಯ
ಹುಬ್ಬಳ್ಳಿ

ಚಿತ್ರಕಾರರು :
ಸದಾಶಿವ
ಮಾರ್ಶಲ್ ಡಿಸೋಜ
ಪಿ. ಜಿ. ಪ್ರಭು

ಮುಖಪುಟ ಚಿತ್ರ :
ಕೆ. ಎಸ್. ಪೋತದಾರ

ಚಂದಾ ದರ :
ವಾರ್ಷಿಕ (ಅಂಚೆಸೇರಿ) ರೂ. ೮-೦-೦
ಬಿಡಿ ಸಂಚಿಕೆ — ರೂ. ೦-೧೨-೦


## ಲೇಖಕರಿಗೆ ಸೂಚನೆ

ಕಸ್ತೂರಿಯಲ್ಲಿ ಪ್ರಕಟನೆಗಾಗಿ ಲೇಖ, ಪ್ರಬಂಧ, ಕಥೆ ಮೊದಲಾದವನ್ನು ಸ್ವೀಕರಿಸಲಾಗುವದು. ಕಾಗದದ ಒಂದೇ ಮಗ್ಗಲಿಗೆ ವಿರಳವಾಗಿ ಬರೆದು ಕಳಿಸಬೇಕು. ಲೇಖಕರು ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ತಿಳಿಸಬೇಕಲ್ಲದೆ, ಅನುವಾದ, ರೂಪಾಂತರ ಇಲ್ಲವೆ ಸಾಧಾರ ಲೇಖಗಳಾದರೆ ಅವುಗಳ ಮೂಲ ಲೇಖಕ ಹಾಗು ಪ್ರಕಾಶಕರ ಹೆಸರು ವಿಳಾಸಗಳನ್ನೂ ಒದಗಿಸಬೇಕು. ಅಸ್ವೀಕೃತ ಲೇಖಗಳು ತಿರುಗಿ ಬೇಕಾಗಿದ್ದರೆ **ಲೇಖಗಳ ಸಂಗಡವೇ** ತಿರುಗಿ ಕಳಿಸಲು ಅವಶ್ಯಬೀಳುವಷ್ಟು ಅಂಚೆ ತಿಕೀಟುಗಳನ್ನೂ ಕಳಿಸಿರಬೇಕು. ಲೇಖ ಸ್ವೀಕೃತವಾದರೆ ಯಥಾವಕಾಶ ಪ್ರಕಟಿಸಲಾಗುವದು; ಆದರೂ ಸಾಮಾನ್ಯವಾಗಿ ಸ್ವೀಕೃತ ಲೇಖಗಳ ಸ್ವೀಕಾರದ ಸುದ್ದಿಯನ್ನು ಲೇಖ ತಲುಪಿದ ನಾಲ್ಕು ವಾರದೊಳಗಾಗಿ ಲೇಖಕರಿಗೆ ತಿಳಿಸಲಾಗುವದು. ಲೇಖಕರು ತಮ್ಮ ಲೇಖಗಳ ಸ್ಥಳಪ್ರತಿಗಳನ್ನುಕಾಯ್ದಿಟ್ಟುಕೊಳ್ಳುವದೊಳಿತು.

ಲೇಖ ಪ್ರಕಟವಾದರೆ "ಕಸ್ತೂರಿ" ಯು ಆಗಿಂದಾಗ್ಗೆ ಗೊತ್ತುಪಡಿಸಿಕೊಂಡ ಕ್ರಮದಲ್ಲಿ ಪ್ರತಿಫಲವನ್ನು ಆದಷ್ಟು ಬೇಗ ಕೊಡಲಾಗುವದು. ಲೇಖಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ.

## ಚಂದಾದಾರರಿಗೆ ಸೂಚನೆ

ಪ್ರತಿತಿಂಗಳ "ಕಸ್ತೂರಿ" ಆಯಾ ತಿಂಗಳ ೧ನೇ ದಿನಾಂಕದೊಳಗೇ ಪ್ರಕಟವಾಗುವುದು. ಅದು ಚಂದಾದಾರರಿಗೆ ಆಯಾ ತಿಂಗಳ ೫ ನೇ ದಿನಾಂಕದೊಳಗೆ ತಲಪುವದು. ಹಾಗೆ ಬಾರದಿದ್ದರೆ ಚಂದಾದಾರರು ತಮ್ಮ ಟಪಾಲು ಕಟ್ಟೆಯಲ್ಲಿ ಮೊದಲು ವಿಚಾರಿಸಿ ನಮಗೆ ತಿಳಿಸಬೇಕು. ಚಂದಾದಾರರು ಕಾರ್ಯಾಲಯದೊಡನೆ ಪತ್ರ ವ್ಯವಹಾರ ಮಾಡುವಾಗ್ಗೆ ತಮ್ಮ ಚಂದಾ ನಂಬರು ಕಾಣಿಸಲು ಮರೆಯಬಾರದು.

# ಈ ಸಂಚಿಕೆಯಲ್ಲಿ








ವರ್ಷ ೧ ಜನೇವರಿ ೧೯೫೭ ಸಂಚಿಕೆ ೫

**ಗಾಯತ್ರಿ ಮಂತ್ರ ನಮಗೆ ವಿಶ್ವದ ಐಕ್ಯವನ್ನು ಬೋಧಿಸುತ್ತದೆ ; ಅದೇ ಆ ಮಂತ್ರದ ಹಿರಿಮೆ.**

# ಓಂ ಭೂಃ ಭುವಃ ಸ್ವಃ

**ರವೀಂದ್ರನಾಥ ಠಾಕೂರ**

ಭಾರತವರ್ಷದ ಉದ್ಬೋಧಕ ಮಂತ್ರವು ಅತ್ಯಂತ ಸರಳವಾಗಿದೆ. ಅದನ್ನು ಒಂದೇ ಉಸಿರಿಗೆ ಹೇಳಿ ಮುಗಿಸಬಹುದು. ಅದು ಗಾಯತ್ರೀ ಮಂತ್ರ.

"ಓಂ ಭೂಃ ಭುವಃ ಸ್ವಃ" – ಎಂಬುದು ಗಾಯತ್ರೀಮಂತ್ರದ ಪ್ರಥಮ ಅಂಶ. ಈ ಅಂಶದ ಹೆಸರು "ವ್ಯಾಹೃತಿ" ಯೆಂದು. ನಾಲ್ಕೂನಿಟ್ಟಿನಿಂದ ಒಂದುಗೂಡಿಸಿ ತರುವುದು ಎಂದು ವ್ಯಾಹೃತಿಯ ಅರ್ಥ. ಮೊದಲು ಭೂ, ಭುವಃ, ಸ್ವರ್ಲೋಕಗಳನ್ನು ವ್ಯಾಹರಣೆಯ ಮೂಲಕ ಮನಸ್ಸಿಗೆ ತಂದುಕೊಳ್ಳಬೇಕು.

ಈ ವ್ಯಾಹೃತಿಯನ್ನು ಮನಸಿನಲ್ಲಿ ಧ್ಯಾನಿಸಿದರೆ ನಮಗೆ ವಿಶ್ವೈಕ್ಯದ ಅನುಭವ ಬರುತ್ತದೆ: "ನಾನು ಯಾವುದೇ ವಿಶಿಷ್ಟ ದೇಶವಾಸಿಯಲ್ಲ; ವಿಶ್ವವೇ ನನ್ನ ಮನೆ. ನನಗೆ ವಾಸಕ್ಕೆ ದೊರೆತ ಈ ವಿಶ್ವ ಮಂದಿರದಲ್ಲಿರುವ ಲೋಕಲೋಕಾಂತರಗಳು ಒಂದೊಂದು ಗೋಡೆಗಳು ಮಾತ್ರ" ಎಂದು ಅನಿಸುತ್ತದೆ.

ನಿಜವಾದ ಆರ್ಯರು ಪ್ರತಿದಿನ ಕನಿಷ್ಠ ಒಮ್ಮೆಯಾದರೂ ಇಂಥ ಅನುಭವ ಹೊಂದಿ ತಮ್ಮನ್ನು ಸೂರ್ಯ-ಚಂದ್ರ-ನಕ್ಷತ್ರ ಮಂಡಲದ ಮಧ್ಯದಲ್ಲಿರುವಂತೆ ಕಂಡು ಮಹಾವಿಶ್ವದಲ್ಲಿ ತಮ್ಮ ಸಂಪರ್ಕ ಸಂಬಂಧಗಳು ಸ್ಥಿರಗೊಳ್ಳುವುದನ್ನು ಅನುಭವಿಸುವರು. ಆರೋಗ್ಯವನ್ನು ಬಯಸುವಾತ ತನ್ನ ಕತ್ತಲೆ ಮುಸುಕಿದ ಕೋಣೆಯೊಳಗಿಂದ ಹೊರಬಿದ್ದು ಹೊಸ ಗಾಳಿಯ ಸೇವನೆಗೆಂದು ನಡೆವಂತೆ ಆರ್ಯನಾದವನು ಪ್ರತಿದಿನ ಆ ಸರ್ವದಲ್ಲಿ ತನ್ನ ಮನಸನ್ನು ವಿಹರಿಸಗೊಡುವನು.

ಅಸಂಖ್ಯ ತಾರಾಗ್ರಥಿತವಾದ ಈ ಜಗತ್ತಿನಲ್ಲಿ ನಿಂತು ಅವರಾವ ಮಂತ್ರವನ್ನು ಉಚ್ಚರಿಸುತ್ತಿದ್ದರು?

ಅದಕ್ಕೆ ಉತ್ತರ ಗಾಯತ್ರಿಯ ಮುಂದಿನ ಭಾಗದಲ್ಲಿದೆ:

"ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ"—ಆ ವಿಶ್ವಲೋಕ ಕಾರಣನಾದ ದೇವನಲ್ಲಿರುವ ವರಿಷ್ಠಶಕ್ತಿಯ ಧ್ಯಾನವನ್ನು ನಾವು ಮಾಡುವೆವು. ಈ ಪೂರ್ಣ ಜಗತ್ತಿನಲ್ಲಿ ಸರ್ವಲೋಕೇಶ್ವರನಾದ ಭಗವಂತನ ಯಾವ ಶಕ್ತಿಯು ಪ್ರತ್ಯಕ್ಷವಾಗಿದೆಯೋ ಅದನ್ನೇ ನಾವು ಧ್ಯಾನಿಸುವೆವು. ಏಕೆಂದರೆ ಈ ಜಗತ್ತು ಪ್ರತಿನಿಮಿಷವೂ ಅದೇ ಶಕ್ತಿಯಿಂದ ನಿರಂತರವಾಗಿ ವಿಕಾಸವಾಗುತ್ತ ನಡೆದಿದೆ- ನಮ್ಮ ನೋಟ ಅಥವಾ ಜ್ಞಾನದಿಂದ ನಾವು ಯಾವ ಜಗತ್ತಿನ ಕೊನೆಯನ್ನು ಕಾಣಲಾರೆವೋ ಅದು ಸಂಘಟಿತವಾಗಿ ಯಾವಾಗಲೂ ಆ ಶಕ್ತಿಯಿಂದಲೇ ಪ್ರಚೋದಿಸಲ್ಪಡುತ್ತದೆ.

"ಧಿಯೋ ಯೋ ನಃ ಪ್ರಚೋದಯಾತ್" ನಮ್ಮ ಸಕಲ ಹಾಗೂ ಸಮಸ್ತ ಬುದ್ಧಿಜೀವನಕ್ಕೆ ಪ್ರೇರಣೆ ಕೊಡುವ ಭಗವಂತನನ್ನು ಅದೇ ಬುದ್ಧಿಸೂತ್ರದ ಸಹಾಯದಿಂದ ತಿಳಿದು ಧ್ಯಾನ ಮಾಡೋಣ.

ನಾವು ಸೂರ್ಯನ ಪ್ರತ್ಯಕ್ಷ ರೂಪವನ್ನು ಹೇಗೆ ನೋಡುವೆವು? ಸೂರ್ಯ ತಾನಾಗಿ ನಮ್ಮ ಕಡೆಗೆ ಕಳಿಸಿದ ಕಿರಣಗಳ ಸಹಾಯದಿಂದ. ಎಂದರೆ ಸರ್ವಜಗನ್ನಿಯಾಮಕ ದೇವನು ನಮ್ಮೊಳಗಿದ್ದು ರಾತ್ರಿ-ಹಗಲು ಬುದ್ಧಿಶಕ್ತಿಗೆ ಚಾಲನೆ ಕೊಡುತ್ತಿರುತ್ತಾನೆ. ಆತನ ಇರುವಿಕೆಯಿಂದ ಮಾತ್ರ ನಾವು ನಮ್ಮನ್ನೂ ಇತರ ಜಗತ್ತಿನ ಕೆಲಸಕಾರ್ಯಗಳನ್ನೂ ಗುರುತಿಸಬಲ್ಲೆವು. ಆ ಬುದ್ಧಿಶಕ್ತಿಯು ಆ ದೇವನ ಶಕ್ತಿಯೇ ಸರಿ. ಆ ಮೂಲಕವೇ ಅವನ ದಿವ್ಯ ಶಕ್ತಿಯನ್ನು ಪ್ರತ್ಯಕ್ಷವಾಗಿ ತನ್ನ ಅಂತರ-ಅಂತರತಮ ರೂಪದಲ್ಲಿ ಅನುಭವಿಸಲು ನಮಗೆ ಸಾಧ್ಯವಿದೆ.

ಹೊರಜಗತ್ತು ಮತ್ತು ನಮ್ಮೊಳಗಿನ ಬುದ್ಧಿ ಎರಡೂ ಒಂದೇ ಶಕ್ತಿಯ ವಿಕಾಸ ಎಂದು ತಿಳಿದು ನಾವು ಜಗತ್ತಿನೊಡನೆ ಸಚ್ಚಿದಾನಂದನಾದ ಭಗವಂತನ ಸ್ಥಿರ ಯೋಗವನ್ನು ತಿಳಿದು ವಿಕ್ಷಿಪ್ತತೆ, ಸ್ವಾರ್ಥ, ಭಯ, ವಿಷಾದ ಇವುಗಳಿಂದ ದೂರವಾಗುತ್ತೇವೆ. ಹೀಗೆ ನಾವು ಗಾಯತ್ರೀ ಮಂತ್ರದಲ್ಲಿ ಹೊರಗಿನ ಜೊತೆಗೆ ಒಳಗಿನ ಮತ್ತು ಅದರ ಜೊತೆಗೆ ಅಂತರತಮ ಭಗವಂತನ ಬೆಸುಗೆಯನ್ನು ಸಾಧಿಸುವೆವು.

ವಿರಾಟ್ ಬ್ರಹ್ಮನ ಧ್ಯಾನ ಮಾಡಲು ಈ ಪ್ರಾಚೀನ ವೈದಿಕ ಪದ್ಧತಿಯು ಎಷ್ಟು ಮಹತ್ತರವಾದುದೋ ಅಷ್ಟೇ ಉದಾರವೂ ಸರಳವೂ ಆದುದು. ಇದರಲ್ಲಿ ವ್ಯರ್ಥತೆ ಅಥವಾ ಕೃತ್ರಿಮತೆಯು ತಿಲಮಾತ್ರವೂ ಇಲ್ಲ. ಹೊರಜಗತ್ತು ಮತ್ತು ಒಳಬುದ್ಧಿ ಇವೆರಡನ್ನು ಅರಸಲು ನಾವು ಹೊರಗೆಲ್ಲೂ ಹೋಗಬೇಕಾಗುವುದಿಲ್ಲ.

ಈ ಜಗತ್ತು ಮತ್ತು ಬುದ್ಧಿಯನ್ನು ಭಗವಂತನು ತನ್ನ ಅನೂನ ಶಕ್ತಿಯಿಂದ ಪ್ರತಿದಿನ ಪ್ರೇರಿಸುತ್ತಾನೆಂದು ತಿಳಿಯುವುದರಿಂದ ಆ ದೇವನೊಡನಿರುವ ನಮ್ಮ ಸಂಬಂಧವನ್ನು ಎಷ್ಟು ಗಂಭೀರವಾಗಿ, ಸಂಪೂರ್ಣವಾಗಿ, ಮತ್ತು ಏಕಾಂತಭಾವದಿಂದ ಚಿರಸ್ಥಿರವಾಗಿಸಲು ಸಾಧ್ಯವೋ ಅಷ್ಟು ಸರಿಯಾಗಿ ಯಾವುದೇ ಕಲಾಸಾಮಗ್ರಿ, ಕೃತ್ರಿಮ ಸಾಧನ ಅಥವಾ ಮಾನಸಿಕ ವಿಚಾರೋದ್ವೇಗದಿಂದ ಅದು ಸಾಧ್ಯವೆಂದು ನನಗೆ ತೋರುವುದಿಲ್ಲ.

ಭಾರತದ ಈ ಜಾಗೃತಿ ಮಂತ್ರದಲ್ಲಿ ಯಾವ ರೀತಿಯ ಲೌಕಿಕ ಊಹಾಪೋಹ, ಧಾರ್ಮಿಕ ಮತಭೇದ ಇಲ್ಲವೆ ಯಾವುದೇ ಬೇರೆ ಗೊಂದಲದ ಗುಂಜಾರವವಿಲ್ಲ. ಹಾಗೂ ಇದರಲ್ಲಿ ಯಾವುದೇ ವ್ಯಕ್ತಿಗತ ಮೇರೆಯಾಗಲಿ ತೊಡಕುಗಳಾಗಲಿ ಇಲ್ಲ.



ಗಾಂಧೀಜಿಗೆ ಮಕ್ಕಳೆಂದರೆ ಎಷ್ಟು ಪ್ರೀತಿಯೆಂದು ಅವರ ಕೈಯಲ್ಲೇ ಬೆಳೆದವರಿಂದ ಕೇಳಿರಿ.

# ಮಕ್ಕಳ ಗಾಂಧಿ

ನಾರಾಯಣ ಮಹಾದೇವ ದೇಸಾಯಿ

ಸಣ್ಣವನಿದ್ದಾಗ ಗಾಂಧೀಜಿಯನ್ನು ನಾನು "ಅಜ್ಜ" ಎಂದು ಕರೆಯುತ್ತಿದ್ದೆ. ಹೀಗೆ ಬೇರೆಯವರಿಗಿಂತ ಭಿನ್ನವಾದ ಹೆಸರಿಂದ ಅವರನ್ನು ಕರೆಯಲು ನನಗೆ ಹೆಮ್ಮೆಯಾಗುತ್ತಿತ್ತು. ಅವರು ನಮ್ಮನ್ನು ಬಹಳ ಪ್ರೀತಿಸುತ್ತಿದ್ದರು ಎಂದಷ್ಟೇ ಆ ಮೊದಲ ದಿನಗಳ ಕುರಿತು ಇಂದು ನನಗೆ ನೆನಪುಳಿದಿದೆ.

ಅವರು ತಿರುಗಾಡಲು ಹೊರಡುತ್ತಿದ್ದರು. ಆಗ ನಾವೆಲ್ಲ ಅವರ ಊರೆಗೋಲಾಗಲು ಸ್ಪರ್ಧೆ ನಡೆಸುತ್ತಿದ್ದೆವು. ಆದರೆ ಕೊನೆಗೆ ಕೋಲಾಗುವ ಸೌಭಾಗ್ಯ ದೊರೆಯುತ್ತಿದ್ದುದು ನಮ್ಮಿಬ್ಬರಿಗೇ (ನಾರಾಯಣ ಹಾಗು ಅವನ ತಂಗಿಗೇ). ತಿರುಗಾಡುವ ಹೊತ್ತಿನಲ್ಲಿ ಗಾಂಧೀಜಿ ಬಹಳ ವೇಗವಾಗಿ ನಡೆಯುತ್ತಿದ್ದರು. ಅವರೊಡನೆ ನಡೆದು ನಡೆದು ನಮಗೆ ಸಾಕಾಗಿ ಬಿಡುತ್ತಿತ್ತು. ಆದರೂ ನಮಗೆ ಅದರಿಂದ ಅಪರಿಮಿತ ಸಂತೋಷವಾಗುತ್ತಿತ್ತು. ಯಾಕೆಂದರೆ ಗಾಂಧೀಜಿಯವರಿಂದ ನಮಗೆ ದೊರೆಯುವಂಥ ವಿಷಯಗಳನ್ನು ಎಷ್ಟೋ ದೊಡ್ಡ ಮನುಷ್ಯರು ಕೂಡ ಪಡೆಯಲು ಶಕ್ತರಾಗಿರಲಿಲ್ಲ.

ಪ್ರಾರ್ಥನೆಯ ಸಮಯದಲ್ಲಿ ಕೂಡ ಹೀಗೇ ಆಗುತ್ತಿತ್ತು. ಉಳಿದವರೆಲ್ಲರೂ ಗಾಂಧೀಜಿಯ ಎದುರುಗಡೆ ಸಾಲಾಗಿ ಕುಳಿತುಕೊಳ್ಳುತ್ತಿದ್ದರು. ನಾವು-ಮಕ್ಕಳು ಮಾತ್ರ ಗಾಂಧೀಜಿಯ ಹತ್ತಿರವೇ ಸಾಲಾಗಿ ಕುಳಿತುಕೊಳ್ಳುತ್ತಿದ್ದೆವು. ಎಷ್ಟು ಹೆಮ್ಮೆಯ ಮಾತಿದು! ಪ್ರಾರ್ಥನೆಯ ಹೊತ್ತಿನಲ್ಲಿ ಶಾಂತರಾಗಿ ಕುಳಿತುಕೊಂಡ ನಾವು ಅನಂತರ ಗಲಭೆ ಎಬ್ಬಿಸುತ್ತಿದ್ದೆವು. ನಾವಿಬ್ಬರೂ ಒಮ್ಮೆಲೇ ಅವರ ತೊಡೆಯ ಮೇಲೆ ಏರಿಹೋಗಿ ಸ್ವಲ್ಪ ಮೊದಲು ಸುಮ್ಮನಿದ್ದ ಸೇಡು ತೀರಿಸಿಬಿಡುತ್ತಿದ್ದೆವು.

ಕೆಲವು ದಿನಗಳ ಬಳಿಕ ಒಮ್ಮೆ ನಮಗೆ ಗಾಂಧೀಜಿಯ ಮೇಲೆ ತುಂಬಾ ಸಿಟ್ಟುಬಂತು. ಶ್ರೀ ಶಾಂತಿಕುಮಾರರು ಮುಂಬಯಿಯಿಂದ ನಮಗಾಗಿ ಬೊಂಬೆಗಳನ್ನು ಕಳಿಸಿಕೊಟ್ಟಿದ್ದರು. ಒಂದು ದಿನ ಆ ಬೊಂಬೆಗಳು ಗಾಂಧೀಜಿಯ ಕೋಣೆಗಳಲ್ಲಿರುವವೆಂದು ನಮಗೆ ಗೊತ್ತಾಯಿತು. ಈ ಗೊಂಬೆಗಳ 'ಯಜಮಾನ'ರಾಗುವ ಆಸೆ ನಮಗೆಲ್ಲ ಅತಿಯಾಯಿತು. ಆದರೆ ಗೊಂಬೆಗಳನ್ನು ಗಾಂಧೀಜಿ ನಮಗೆ ಕೊಡುವುದಿಲ್ಲವೆಂದು ಅನಂತರ ತಿಳಿಯಿತು.

ಇದನ್ನು ತಿಳಿದೊಡನೆಯೇ ನಾವು ಗಾಂಧೀಜಿಯ ಮೇಲೆ "ಯುದ್ಧ ಸಾರಲು" ಹೊರಟೆವು.

"ಬಾಪೂಜೀ, ನಮ್ಮ ಗೊಂಬೆಗಳನ್ನು ನಮಗೆ

---

ನಾರಾಯಣ ದೇಸಾಯಿಯವರು ಗಾಂಧೀಜಿಯ ಪ್ರಸಿದ್ಧ ಕಾರ್ಯದರ್ಶಿ ಹಾಗು ಶಿಷ್ಯರಾದ ದಿ. ಮಹಾದೇವಭಾಯಿಯವರ ಪುತ್ರ. ಪ್ರಸ್ತುತ ಲೇಖ ಅವರು "ಸಮಾಜ ಕಲ್ಯಾಣ"ದಲ್ಲಿ ಬರೆದ ಲೇಖದಿಂದ ಉದ್ಧೃತವಾದದ್ದು.

ಕೊಟ್ಟುಬಿಡಿರಿ. ಅವುಗಳ ಮೇಲೆ ನಮಗೆ ಹಕ್ಕಿದೆ" ಎಂದು ನಮ್ಮಲ್ಲಿ ಸ್ವಲ್ಪ ದೊಡ್ಡವನು ಹೇಳಿದ.

"ಇಲ್ಲ."

"ಯಾಕೆ?"

"ನೀವಾ ಗೊಂಬೆಗಳನ್ನು ಏನು ಮಾಡುವಿರಿ?"

"ಆಡುವೆವು."

"ಇಂಥ ಗೊಂಬೆಗಳೂ ನಮ್ಮ ಆಟಕ್ಕೆ ಬರುತ್ತವೆಯೇ?"

ಗಾಂಧೀಜಿಯವರು 'ನಮ್ಮ' ಪದವನ್ನು ಸೇರಿಸಿದ್ದರಿಂದ ನಮ್ಮ ಏರಾಟ ಕುಂದಿತು. ಆದರೂ ನಾವು ತರ್ಕ ಹೂಡಿದೆವು.

"ಏನಾಗಿದೆ? ಅದರಿಂದ ತಪ್ಪೇನು?"

"ಅವು ವಿದೇಶೀಗೊಂಬೆಗಳು. ಇಂಥ ಗೊಂಬೆಗಳಿಂದ ನಾವು ಆಡುವುದು ಹೇಗೆ? ನಾವು ಸ್ವದೇಶೀ ಗೊಂಬೆಗಳಿಂದಲೇ ಆಡಬೇಕು."

ವಿದೇಶೀ ಗೊಂಬೆಗಳಲ್ಲಿ ಖಂಡಿತ ಕೆಡುಕಿರಬೇಕು ಎಂದು ತಿಳಿದು ನಮ್ಮ ಸೇನೆ ಬಂದ ದಾರಿಗೆ ಸುಂಕವಿಲ್ಲೆಂದು ಹಿಂತಿರುಗಿತು. ಆಶ್ರಮದಿಂದ ಆ ಗೊಂಬೆಗಳು ಹೊರಟು ಹೋಗುವವರೆಗೂ ನಮ್ಮಲ್ಲಿ ಕೆಲವರಿಗೆ ಅವುಗಳೊಡನೆ ಆಡುವುದಾಗಲಿಲ್ಲವಲ್ಲ ಎಂಬ ಪಶ್ಚಾತ್ತಾಪವಾಗುತ್ತಲೇ ಇತ್ತು.

ಕೆಲವು ದಿನ ಗಾಂಧೀಜಿಯವರು ಯರವಡಾ ಜೈಲಿನಲ್ಲಿದ್ದಾಗಲೇ ನಮಗೆ ಅವರೊಡನೆ ಸರಿಯಾದ ಗೆಳೆತನವಾದದ್ದು. ವಾರಕ್ಕೊಮ್ಮೆ ಅವರು ತಮ್ಮ "ಪ್ರೀತಿಯ ಹಕ್ಕಿಗಳಿಗೆ" ಪತ್ರ ಬರೆಯದೆ ಇರುತ್ತಿರಲಿಲ್ಲ. ನಮಗೆ ಪತ್ರಬರೆಯಲು ಬರುತ್ತಿರಲಿಲ್ಲ. ನಮ್ಮ ಪರವಾಗಿ ನಮ್ಮ ಸಂಗೀತ ಶಿಕ್ಷಕರೇ ಪತ್ರ ಬರೆಯುತ್ತಿದ್ದರು. ಅದರಲ್ಲಿ ಪ್ರಶ್ನೆಗಳ ಸುರಿಮಳೆಯೇ ಇರುತ್ತಿತ್ತು. ನಮ್ಮ ಪ್ರಶ್ನೆಗಳಿಗೆ ಬಾಪೂಜಿಯವರು ಸಂಕ್ಷಿಪ್ತವಾಗಿ ಉತ್ತರ ಬರೆಯುತ್ತಿದ್ದರು. ಇದು ನಮಗೆ ಸರಿಬರುತ್ತಿರಲಿಲ್ಲ.

ಅದಕ್ಕೆಂದು ಒಂದು ಪತ್ರದಲ್ಲಿ ನಾನು "ಬಾಪೂಜೀ, ಗೀತೆಯಲ್ಲಿ ಅರ್ಜುನ ಒಂದು ಶ್ಲೋಕದಲ್ಲಿ ಪ್ರಶ್ನೆ ಕೇಳಿದರೆ ಕೃಷ್ಣನು ಅದಕ್ಕೆ ಹಲವಾರು ಶ್ಲೋಕಗಳಿಂದ ಉತ್ತರ ಕೊಡುತ್ತಿದ್ದ. ಆದರೆ ನಾವು ನಿಮಗೆ ದೊಡ್ಡ ಪತ್ರ ಬರೆದು ಪ್ರಶ್ನೆ ಕೇಳಿದರೆ ನೀವು ಒಂದು ಸಾಲಿನಲ್ಲಿ ಮುಗಿಸಿಬಿಡುತ್ತೀರಿ ಯಾಕೆ?" ಎಂದು ಬರೆಸಿದೆ.

ಇಷ್ಟು ಬರೆಸಿ ಗಾಂಧೀಜಿಯವರಿಗೆ ಒಂದು ದೊಡ್ಡ ಪ್ರಶ್ನೆಯನ್ನೇ ಕೇಳಿಬಿಟ್ಟೆವೆಂದುಕೊಂಡೆವು. ನಾವೆಲ್ಲರೂ ಈ ಪತ್ರಕ್ಕೆ ಬರುವ ಉತ್ತರವನ್ನೇ ಕಾಯುತ್ತಿದ್ದೆವು.

ಹೇಗೋ ಎಂಟು ದಿನಗಳು ಕಳೆದುವು. ಗಾಂಧೀಜಿಯವರ ಪತ್ರ ಬಂತು. ಈ ಬಾರಿ ನನಗೆ ಪ್ರತ್ಯೇಕವಾಗಿ ಒಂದು ಪತ್ರವಿದ್ದಿತು. ಅದರಲ್ಲಿ "ನಿನ್ನ ಪ್ರಶ್ನೆ ಸರಿ, ಆದರೆ ಕೃಷ್ಣ ಭಗವಂತನಿಗೆ ಒಬ್ಬನೇ ಅರ್ಜುನನಿದ್ದ. ನನ್ನ ಹತ್ತಿರ ಹೆಚ್ಚು ಮಂದಿ ಅರ್ಜುನರಿದ್ದಾರೆ, ಏನು ಮಾಡಲಿ?"

ಎಷ್ಟೋ ಬಾರಿ ಶಿಕ್ಷಕರ ಮೇಲೆ ದೂರು ಹೇಳಲೂ ಈ ಪತ್ರಗಳನ್ನುಪಯೋಗಿಸುತ್ತಿದ್ದೆವು. ಆಗ ಮಳೆಗಾಲ ಮುಗಿಯಬಂದಿತ್ತು. ಆದರೂ ಅಂಗಳದಲ್ಲಿನ ಹೊಂಡಗಳು ತುಂಬಿಯೇ ಇದ್ದವು. ಉದ್ಯೋಗಮಂದಿರಕ್ಕೆ ಹೋಗುವ ಹೊತ್ತಾಗಿದ್ದರೂ ನಾನು ಅಲ್ಲಿಯೇ ಹೊಂಡದ ಬಳಿಯಲ್ಲಿ ಕುಳಿತು ನೀರಿನಲ್ಲಿ ಮುಳುಗಿಹೋಗುತ್ತಿರುವ ಪಾತರಗಿತ್ತಿಗಳನ್ನು ರಕ್ಷಿಸುವ ಪ್ರಯತ್ನ ನಡೆಸಿದ್ದೆ. ಅಷ್ಟರಲ್ಲಿ ಶಿಕ್ಷಿಕೆ ನನ್ನನ್ನು ಹುಡುಕುತ್ತ ಅಲ್ಲಿಗೆ ಬಂದಳು. ಕಿವಿ ಹಿಡಿದು ನನ್ನನ್ನು ಉದ್ಯೋಗಮಂದಿರಕ್ಕೆ ಎಳೆದೊಯ್ದಳು. ಈ ವಿಷಯವೆಲ್ಲವನ್ನು ನಾನು ಬಾಪೂಜಿಗೆ ಬರೆದು ತಿಳಿಸಿದೆ. ಪತ್ರ ಓದಿ ಅವರಿಗೆ ದುಃಖವಾಯಿತು. ಮತ್ತು ಅದಕ್ಕಾಗಿ ಅವರು ಶಿಕ್ಷಿಕೆಗೆ ಪತ್ರ ಬರೆದರು. ಅಂದಿನಿಂದ ನಾವು ಪೆಟ್ಟು ತಿನ್ನುವುದು ತಪ್ಪಿತು.

ಸುಮಾರು ಐದು ವರ್ಷಗಳ ಮೇಲೆ ನನ್ನನ್ನು ವರ್ಧಾದ ಮಾರವಾಡೀ ಹಾಯಸ್ಕೂಲಿಗೆ (ಈಗ ನವಭಾರತ ವಿದ್ಯಾಲಯ) ಸೇರಿಸಿದರು. ಇದಕ್ಕೆ ಮೊದಲು ನಾನು ಗುಜರಾತೀ ವಿದ್ಯಾಪೀಠದ ವಿನಯಮಂದಿರದಲ್ಲಿದ್ದೆ. ಇದರಿಂದ ನನಗೆ ಪಾಠಶಾಲೆ ಮತ್ತು ವಿದ್ಯಾಪೀಠ ಇವುಗಳೊಳಗಿನ ವ್ಯತ್ಯಾಸ ತಿಳಿಯಿತು. ಅಲ್ಲಿನ ಶಿಕ್ಷಕರು ಕಲಿಸು

ತ್ತಿದ್ದ ರೀತಿ, ಅವಾಚ್ಯಭಾಷೆ ಅವರ ಗಿರಣಿ ಬಟ್ಟೆ ಇವು ನನಗೆ ಹಿಡಿಸಲಿಲ್ಲ. ಮನೆಗೆ ಬಂದವನೇ ಎಲ್ಲ ವಿಷಯಗಳನ್ನು ನಾನು ಸ್ಪಷ್ಟವಾಗಿ ತಂದೆಯವರಿಗೆ ತಿಳಿಸಿ, "ನಾನು ಈ ಪಾಠಶಾಲೆಯಲ್ಲಿ ಓದಲಾರೆ," ಎಂದೆ.

"ಮತ್ತೇನು ಮಾಡುವೆ?"

"ನಿಮ್ಮ ಬಳಿಯೇ ಓದುವೆ."

"ನನಗೆ ಸಮಯವೆಲ್ಲಿದೆ?"

"ಅದೇನೋ ನನಗೆ ಗೊತ್ತಿಲ್ಲ; ಆದರೆ ಏನೇ ಆಗಲಿ ನಾಳೆಯಿಂದ ನಾನು ಆ ಶಾಲೆಗೆ ಹೋಗುವುದಿಲ್ಲ."

ನಾವಾಗ ಮಗನವಾಡಿಯಲ್ಲಿ ವಾಸಿಸುತ್ತಿದ್ದರೆ ಬಾಪೂಜಿ ಸೇವಾಗ್ರಾಮದಲ್ಲಿದ್ದರು. ನನ್ನ ನಿರ್ಣಯವನ್ನು ಗಾಂಧೀಜಿಯವರಿಗೆ ಬರೆದು ತಿಳಿಸಲು ತಂದೆಯವರು ಹೇಳಿದರು. ನಾನು ಅವರಿಗೆ ಪತ್ರ ಬರೆದು ನನ್ನ 'ಕೇಸ'ನ್ನು ವಿವರಿಸಿದೆ.

ಮಾರವಾಡಿ ಹಾಯಸ್ಕೂಲಿನ ಆಚಾರ್ಯರಾಗಿ ಆಗ ಆರ್ಯನಾಯಕಂ ಇದ್ದರು. ಅವರು ನಾನು ಹಾಯಸ್ಕೂಲು ಬಿಡಬಾರದೆಂದರು. ಮರುದಿನ ಗಾಂಧೀಜಿ ನಮ್ಮನ್ನು ಸೇವಾಗ್ರಾಮಕ್ಕೆ ಕರೆಸಿದರು.

ಸೇವಾಗ್ರಾಮದಲ್ಲಿನ ಉದಯಾಸ್ತವು ಮನೋಹರವಾಗಿತ್ತು. ಬೆಳಗಿನ ಸೂರ್ಯಕಿರಣಗಳು ಗಾಂಧೀಜಿಯ ಮೇಲೆ ಬೀಳುತ್ತಿದ್ದವು. ನಗುನಗುತ್ತ ಅವರು ತಿರುಗಾಡುವಾಗ ಅವರು ನಮ್ಮನ್ನು ಜೊತೆಯಲ್ಲಿ ಕರೆದೊಯ್ದರು.

ಆರ್ಯನಾಯಕಂ ಹೇಳಿದರು: "ಇವನ ಓದುಬರಹದ ವ್ಯವಸ್ಥೆ ಸರಿಯಾಗಿ ಮಾಡದಿದ್ದರೆ ಅಭ್ಯಾಸವೆಲ್ಲ ಕೆಟ್ಟುಹೋಗುವುದು."

ಗಾಂಧೀಜಿ ಹೇಳಿದರು:

"ಇಂಥ ಶಾಲೆಗಳಲ್ಲಿ ವ್ಯವಸ್ಥಿತ ಕಲಿಕೆಯಾದರೂ ಹೇಗೆ ಸಾಧ್ಯ? ಅದಕ್ಕೆಂದೇ ನಾನು ಮನೆಯಲ್ಲಿಯೇ ಪ್ರಯೋಗಮಾಡಬಯಸುತ್ತೇನೆ. ಮನೆಯಲ್ಲಿದ್ದು ಕೆಲಸದ ಮೂಲಕ ಕಲಿತ ವಿದ್ಯೆ ವಿಶ್ವವಿದ್ಯಾಲಯ ವಿದ್ಯೆಗಿಂತ ಚೆನ್ನಾಗಿರಬಾರದೇಕೊ?"

ಆರ್ಯನಾಯಕಂ ಎರಡನೆ ವಾದ ತೆಗೆದರು: "ಇವನು ಇನ್ನೂ ಎಳೆಯವನು. ಶಾಲೆಯಲ್ಲಿ ಓದದಿದ್ದರೆ ಪಶ್ಚಾತ್ತಾಪಪಡಬೇಕಾದೀತು."

"ಇವನು ದೊಡ್ಡವನಾದಾಗ ವ್ಯಸನಪಡಲು ಯಾವ ಕಾರಣವನ್ನೂ ನಾನು ಉಳಿಸುವುದಿಲ್ಲ. ಮುಂದೆ ವಿಶ್ವವಿದ್ಯಾಲಯಕ್ಕೆ ಹೋಗಬೇಕೆಂದು ಅವನಿಗೆ ಆಸೆಯಾದರೂ ಚಿಂತೆಯಿಲ್ಲ. ಇವನೀಗಲೇ ತಿಳಿದು ಪಾಠಶಾಲೆಗೆ ಹೋಗುವುದನ್ನು ತಿರಸ್ಕರಿಸಿದಾಗ್ಗೆ ಅವನನ್ನು ಅಲ್ಲಿಗೆ ಕಳಿಸಿದರೆ ಅದು ಅತ್ಯಾಚಾರವೇ ಸರಿ."

ಎಷ್ಟು ವಾದ ನಡೆದರೂ ಪರಿಣಾಮ ಒಂದೇ. ಗಾಂಧೀಜಿಯ ವಿಚಾರವನ್ನು ಆರ್ಯನಾಯಕಂ ಒಪ್ಪಲೇಬೇಕಾಯಿತು. ಅನಂತರ ಅವರು ನನ್ನ ಕಡೆ ತಿರುಗಿ-

"ನೀನು ಯಾರ ಮಾತಿಗೂ ಕಿವಿಕೊಡಬೇಡ, ನಾನು ನಿನ್ನ ವಕೀಲ." ಈ ತನಕ ಅವರು ನನ್ನ ವಕೀಲರಾಗಿದ್ದಾರೆ. ಆದರೆ ಈಗ ಈ ಮಾತೇಕೆ? ಅಂದಿನ ಅನುಭವದ ಬೆಳಗಿನ ಮೊದಲ ಕಿರಣಗಳಲ್ಲಿ ಮೀವ ಆನಂದ ಸ್ಮರಣೆಗೆ ಇದು ಸಮಯವಾಗಿದೆ.

*** ಪ್ರತಿಯೊಂದು ಮಗುವಿನ ಕೈ, ಮಿದುಳು ಮತ್ತು ಆತ್ಮ ಇವು ವಿಕಾಸ ಹೊಂದಲಿಕ್ಕೆ ಬೇಕು. ದುರ್ದೈವದಿಂದ ಈಗ ಕೈಗಳು ಕಟ್ಟಿಬಿಟ್ಟಂತಾಗಿವೆ; ಆತ್ಮದತ್ತ ಯಾರ ಲಕ್ಷ್ಯವೂ ಇಲ್ಲ.**

*** ವಿವಿಧ ವಿಜ್ಞಾನಗಳ ಶಿಕ್ಷಣವು ಬೆಲೆಯುಳ್ಳದ್ದೆಂಬುದನ್ನು ನಾನು ನಂಬುವೆನು. ಭೌತಿಕ ಹಾಗೂ ರಸಾಯನ ಶಾಸ್ತ್ರಗಳನ್ನು ಎಷ್ಟು ಕಲಿತರೂ ಸಾಲದು.**

—ಮಹಾತ್ಮಾ ಗಾಂಧೀಜಿ

ಈ ಪುಸ್ತಕ ಸಾವಿರಾರು ವರ್ಷಗಳ ನಂತರವೂ ಉಪಯುಕ್ತವಾಗಿ ಉಳಿದಿದೆ.



# ದೊಡ್ಡವರು ಮೆಚ್ಚಿದ ಸಣ್ಣ ಪುಸ್ತಕ

ಪ್ರೊ. ಸಿ. ಎಸ್. ಕುಲಕರ್ಣಿ

ನಾನು ಒಮ್ಮೆ ನನ್ನ ಗೆಳೆಯನ ಮನೆಗೆ ಹೋದಾಗ ಅವನು ತನ್ನ ಓದುವ ಕೋಣೆಯಲ್ಲಿ ಕುಳಿತಿದ್ದ. ಅಲ್ಲಿ ಮೇಜಿನ ಮೇಲೆ ರೆ. ಕಿಟೆಲ್‌ರವರ ಕನ್ನಡ–ಇಂಗ್ಲೀಷ ಶಬ್ದ ಕೋಶವಿತ್ತು. ಅದರ ಮೇಲೆ ಸಣ್ಣ ಕಡ್ಡಿಯ ಪೆಟ್ಟಿಗೆಯಷ್ಟು ಗಾತ್ರವುಳ್ಳ ಒಂದು ಚಿಕ್ಕ ಪುಸ್ತಕ ಕಂಡಿತು. ನನಗೆ ಅದು ಪುಸ್ತಕವೋ ಕಡ್ಡಿಯಪೆಟ್ಟಿಗೆಯೋ ಎಂದು ಸ್ವಲ್ಪ ಸಂಶಯ ಬಂದು "ಅದು ಏನು? ಪುಸ್ತಕವೋ ಕಡ್ಡಿಯಪೆಟ್ಟಿಗೆಯೋ?" ಎಂದು ಗೆಳೆಯನನ್ನು ಕೇಳಿದೆ. "ಏಕೆ? ನಿನಗೆ ಅದು ಏನೆಂದು ತಿಳಿಯಲಿಲ್ಲವೇ?" ಎಂದು ಅವನು ನನ್ನನ್ನು ಕೇಳಿ "ಅದು ಪುಸ್ತಕ" ಎಂದು ಹೇಳಿದ.

"ಎಷ್ಟು ಸಣ್ಣದಿದೆಯಲ್ಲ!" ನಾನು ಉದ್ಗರಿಸಿದೆ. ಅದಕ್ಕೆ ಅವನು ಹೇಳಿದ: "ಹೌದು. ಅದು ದೊಡ್ಡವರು ಮೆಚ್ಚಿದ ಸಣ್ಣ ಪುಸ್ತಕ." ಆಗ ನಾನು "ಇದೇನೋ ನನಗೆ ತೆನ್ನಾಲಿ ರಾಮಕೃಷ್ಣನ ತಿಲಕಾಷ್ಠ ಮಹಿಷಬಂಧನವೆಂಬಂತೆ ಕಾಣುತ್ತದೆ" ಎಂದು ಕುತೂಹಲದಿಂದ ಅದನ್ನು ಕೈಯಲ್ಲಿ ತೆಗೆದುಕೊಂಡು ನೋಡಿದೆ. ಅದು ಇನ್ನಾವದಾದರೂ ಗ್ರಂಥವಾಗಿರದೇ ಶ್ರೀಮದ್ಭಗವದ್ಗೀತೆಯಾಗಿತ್ತು. ನಾನು ಇಷ್ಟು ಚಿಕ್ಕಗಾತ್ರದ ಭಗವದ್ಗೀತೆಯನ್ನು ನೋಡಿರಲಿಲ್ಲ. ಕೆಲವು ಪುಟಗಳನ್ನು ತಿರುವಿನೋಡಿದೆ. ಸುಂದರವಾದ ಅಸ್ಪಲಿತವಾದ ದೇವನಾಗರಿಲಿಪಿಯಲ್ಲಿ ಅದು ಅಚ್ಚಾಗಿತ್ತು. ಅದನ್ನು ಕಿಸೆಯಲ್ಲಿಟ್ಟುಕೊಂಡು ಹೋಗಲು ಉಪಯೋಗವಾಗಬೇಕೆಂದು ಅಷ್ಟು ಚಿಕ್ಕದಾಗಿ ಮಾಡಿದ್ದರು.

ನಾನು ಅದನ್ನು ಕೆಳಗಿಟ್ಟಮೇಲೆ ನನ್ನ ಗೆಳೆಯ ಕೇಳಿದ. "ನಾನು ಕೊಟ್ಟ ಹೆಸರು ಅದಕ್ಕೆ ಸಾರ್ಥಕವಾಗುವದಿಲ್ಲವೇ?" "ಹೌದು" ಎಂದಿಷ್ಟೇ ಹೇಳಿ ನಾನು ವಿಚಾರಮಗ್ನನಾದೆ. ನನ್ನ ಗೆಳೆಯ ಅರ್ಧ ಬರೆದ ತನ್ನ ಪತ್ರವನ್ನು ಮುಗಿಸುವದರಲ್ಲಿ ತೊಡಗಿದ.

"ದೊಡ್ಡವರು ಮೆಚ್ಚಿದ ಸಣ್ಣ ಪುಸ್ತಕ" ಎಷ್ಟು ಅರ್ಥಪೂರ್ಣವಾದ ಹೆಸರು! ಭಗವದ್ಗೀತೆ ಜಗತ್ತಿನಲ್ಲಿಯೇ ಅತ್ಯಂತ ಶ್ರೇಷ್ಠವೂ ಲಲಿತವೂ ಎನಿಸಿದ ಒಂದು ಧಾರ್ಮಿಕ ಗ್ರಂಥವಾಗಿದೆ. ಬಹುತರವಾಗಿ ಇಷ್ಟು ಚಿಕ್ಕದಾದರೂ ಇಷ್ಟು ಸಮಗ್ರವಾದ ಸುಂದರವಾದ ಕಾವ್ಯಮಯವಾದ ಬೇರೊಂದು ಧಾರ್ಮಿಕ ಗ್ರಂಥವು ದೊರೆಯಲಿಕ್ಕಿಲ್ಲ. ಮಹಾಭಾರತದ ಭೀಷ್ಮಪರ್ವದ ಭಾಗವಾದ ಈ ಗ್ರಂಥವು ೧೮ ಅಧ್ಯಾಯಗಳಿಂದಲೂ ೭೦೦ ಶ್ಲೋಕಗಳಿಂದಲೂ ಕೂಡಿದೆ. ಈ ತತ್ತ್ವಜ್ಞಾನದ ಗ್ರಂಥವು ರಣರಂಗದಲ್ಲಿ ಜನ್ಮತಾಳಿದ್ದು ಅದರದೊಂದು ವೈಶಿಷ್ಟ್ಯ.

ರಣರಂಗದಲ್ಲಿ ಈ ಗ್ರಂಥ ಜನಿಸಿದ್ದರೂ ಇದರ ಅಭ್ಯಾಸವನ್ನು ಮಾಡಿ ಇದರ ಅರ್ಥ ವಿವರಣೆ ಮಾಡಿದವರು ರಣರಂಗದಲ್ಲಿ ಕಾಲಿಡದ, ಲೋಕಸಂಗ್ರಹದಲ್ಲಿ ಮಗ್ನರಾದ ಧಾರ್ಮಿಕ ಮಹಾಪುರುಷರು. ಇಂದು ಈ ಗ್ರಂಥವನ್ನು ಓದುವವರು

ಹೆಚ್ಚಾಗಿ ಸಂಸಾರವಮಾಡಿಕೊಂಡು ಊರಲ್ಲಿದ್ದ ಗೃಹಸ್ಥರೇ ಹೊರತು ರಣಭೂಮಿಯ ಮೇಲಿದ್ದ ಸೈನಿಕರಲ್ಲ.

ಈ ಗ್ರಂಥವು ಭಾರತದಲ್ಲಿ ಮೊಟ್ಟಮೊದಲು ಕ್ರಿ. ಶ. ೧೯೦೮ ರಲ್ಲಿ ಕಲಕತ್ತೆಯಲ್ಲಿ ಮುದ್ರಿತವಾಯಿತು. ಅಂದಿನಿಂದ ಪ್ರತಿವರುಷ ಒಂದಿಲ್ಲೊಂದು ಭಾಷೆಯಲ್ಲಿ ಇದು ಅಚ್ಚಾಗುತ್ತಲೇ ಇದೆ ಎಂದು ಹೇಳಬಹುದು. ಯುರೋಪಖಂಡದಲ್ಲಿ ಮೊಟ್ಟಮೊದಲು ಇದು ಇಂಗ್ಲೀಷ ಭಾಷೆಯಲ್ಲಿ ಪ್ರಸಿದ್ಧಿಸಲ್ಪಟ್ಟಿತು. ಚಾರ್ಲಸ ವಿಲ್ಕಿನ್ಸನ್ ಎಂಬವರು ಕ್ರಿ. ಶ. ೧೭೮೭ ರಲ್ಲಿ ಲಂಡನ್‌ದಲ್ಲಿ ಇದನ್ನು ಪ್ರಸಿದ್ಧಿಸಿದರು. ಅಂದಿನಿಂದ ಗ್ರೀಕ, ಲ್ಯಾಟಿನ್, ಫ್ರೆಂಚ್, ಜರ್ಮನ್ ಮೊದಲಾದ ಅನೇಕ ಐರೋಪ್ಯ ಭಾಷೆಗಳಲ್ಲಿ ಇದರ ಭಾಷಾಂತರಗಳೂ ಆವೃತ್ತಿಗಳೂ ಅಚ್ಚಾಗಿವೆ. ಭಾರತದ ಎಲ್ಲ ಪ್ರಮುಖ ಭಾಷೆಗಳಲ್ಲಿಯೂ ಇದು ಅಚ್ಚಾಗಿದೆ.

ಇದು ಜಗತ್ತಿನ ಮಹಾಮೇಧಾವಿಗಳೂ ತತ್ತ್ವಜ್ಞಾನಿಗಳೂ ಮೆಚ್ಚಿದ ಗ್ರಂಥವಾಗಿದೆ. ಶ್ರೀ ಶಂಕರಾಚಾರ್ಯರನ್ನು ಮೊದಲುಗೊಂಡು ಶ್ರೀ ಅರವಿಂದರವರೆಗೆ ಜಗತ್ತಿನಲ್ಲಿಯ ಹಲವು ಭಾಷೆಗಳ ಹಲವು ಧರ್ಮಗಳ ಹಲವು ಪಂಥಗಳ ವಿದ್ವಾಂಸರು ಇದರಮೇಲೆ ಭಾಷ್ಯಗಳನ್ನೂ ಟೀಕೆ ಟಿಪ್ಪಣೆಗಳನ್ನೂ ಬರೆದಿದ್ದಾರೆ. ಈ ಚಿಕ್ಕ ಪುಸ್ತಕದ ಬಗ್ಗೆ ಹಲವು ಮಹಾಗ್ರಂಥಗಳು ನಿರ್ಮಾಣವಾಗಿ ಅದೊಂದು ದೊಡ್ಡ ಸಾಹಿತ್ಯವೇ ಆಗಿದೆ. ಶ್ರೀಶಂಕರಾಚಾರ್ಯರಿಗಿಂತಲೂ ಪೂರ್ವದಲ್ಲಿ ಗೀತೆಯ ಮೇಲೆ ಭಾಷ್ಯಗಳು ಬರೆಯಲ್ಪಟ್ಟಿದ್ದವೆಂದು ತಿಳಿದುಬಂದರೂ ಇಲ್ಲಿಯ ವರೆಗೆ ದೊರೆತ ಭಾಷ್ಯಗಳಲ್ಲೆಲ್ಲ ಶ್ರೀಶಂಕರಾಚಾರ್ಯ ಭಾಷ್ಯವೇ ಅತ್ಯಂತ ಪ್ರಾಚೀನವಾಗಿದೆ.

ಭಗವದ್ಗೀತೆಯು ಹಿಂದೂ ಧರ್ಮದ ಯಾವದೊಂದು ವಿಶಿಷ್ಟ ವಿಚಾರಪ್ರಣಾಲಿಯನ್ನು ಪ್ರತಿಪಾದಿಸದೇ ಸಮಗ್ರ ಹಿಂದೂ ಧರ್ಮವನ್ನು ತನ್ನಲ್ಲಿ ಸಮನ್ವಯಿಸಿಕೊಂಡಿದೆ. ಡಾ. ರಾಧಾಕೃಷ್ಣನ್‌ರು ಹೇಳುವಂತೆ—ಇದು ವೇದಗಳ ಯಜ್ಞತತ್ತ್ವವನ್ನೂ ಉಪನಿಷತ್ತುಗಳ ಬ್ರಹ್ಮಜ್ಞಾನವನ್ನೂ ಭಾಗವತ ಧರ್ಮದ ಈಶ್ವರಭಕ್ತಿಯನ್ನೂ ಸಾಂಖ್ಯಶಾಸ್ತ್ರದ ಪ್ರಕೃತಿ ಪುರುಷಭೇದವನ್ನೂ ಯೋಗ ಶಾಸ್ತ್ರದ ಧ್ಯಾನಸಮಾಧಿಗಳನ್ನೂ ಒಳಗೊಂಡಿದೆ. ಹೀಗೆ ಕರ್ಮ ಭಕ್ತಿ ಜ್ಞಾನಗಳಿಂದ ಕೂಡಿದ ಈ ಗ್ರಂಥವು ಹಿಂದೂ ಧರ್ಮಕ್ಕೆ ಮೂಲಭೂತವಾಗಿರುವ ಮೂರು ಆಧಾರ ಗ್ರಂಥಗಳಲ್ಲಿ ಒಂದಾಗಿದೆ. ಹಿಂದೂ ಧರ್ಮದ ಇನ್ನುಳಿದ ಎರಡು ಆಧಾರ ಗ್ರಂಥಗಳೆಂದರೆ ಉಪನಿಷತ್ತುಗಳು ಮತ್ತು ವೇದಾಂತ ಸೂತ್ರಗಳು.

ಇಂದು ಭಗವದ್ಗೀತೆಯು ಬರೀ ಹಿಂದುಗಳ, ಹಿಂದೂ ಧರ್ಮದ ಸೊತ್ತಾಗಿ ಮಾತ್ರ ಉಳಿದಿಲ್ಲ. ಅದು ಇಂದು ಅಖಿಲ ಮಾನವ ಜನಾಂಗದ ಸೊತ್ತಾಗಿದೆ. ಅದನ್ನು ಎಲ್ಲ ಧರ್ಮದ ಜನರೂ ಓದಿ ಮೆಚ್ಚಿದ್ದಾರೆ. ಈ ವಿಷಯದಲ್ಲಿ ಆಲ್ಡಸ್ ಹಕ್ಸ್ಲೆ ಎಂಬ ಶ್ರೇಷ್ಠ ವಿಚಾರವಂತರು ಹೇಳುವ ಮಾತುಗಳು ಬಹಳ ಗಮನಾರ್ಹವಾಗಿವೆ. ಭಗವದ್ಗೀತೆಯ ಬಗ್ಗೆ ಅವರು ಹೀಗೆ ಹೇಳುತ್ತಾರೆ: "ಅನಂತ ತತ್ತ್ವಜ್ಞಾನದ ಸಾರಸಂಗ್ರಹಗಳಲ್ಲಿ ಭಗವದ್ಗೀತೆಯೇ ಬಹಳ ಸ್ಪಷ್ಟವೂ ಸಮಗ್ರವೂ ಆದ ಗ್ರಂಥವಾಗಿದೆ. ಆದುದರಿಂದ ಅದು ಬರಿ ಭಾರತೀಯರಿಗಷ್ಟೇ ಅಲ್ಲದೇ ಇಡೀ ಮಾನವ ಜನಾಂಗಕ್ಕೆಲ್ಲ ಶಾಶ್ವತವಾದ ಮಹತ್ವವುಳ್ಳ ಗ್ರಂಥವಾಗಿದೆ."

ಹೀಗೆ ಭಗವದ್ಗೀತೆಯು ಇಡೀ ಮಾನವ ಜನಾಂಗಕ್ಕೆಲ್ಲ ಮಹತ್ವದ ಗ್ರಂಥವೆನಿಸಲು ಅದರಲ್ಲಿ ಚರ್ಚಿಸಲ್ಪಟ್ಟ ಸಮಸ್ಯೆಗಳು ವಿಶ್ವವ್ಯಾಪಕವಾಗಿರುವದೇ ಕಾರಣವಾಗಿದೆ. ಅರ್ಜುನನಿಗೆ ಕುರುಕ್ಷೇತ್ರದಲ್ಲಿ ಕಾಣಿಸಿಕೊಂಡ ವಿಶಿಷ್ಟ ಸಂಶಯ ಹಾಗೂ ಸಮಸ್ಯೆಗಳ ನಿವಾರಣೆಗೆ ಮಾತ್ರವೇ ಶ್ರೀಕೃಷ್ಣನು ಗೀತೆಯನ್ನು ಹೇಳಿಲ್ಲ. ಹಾಗಿದ್ದರೆ ಕುರುಕ್ಷೇತ್ರದ ಯುದ್ಧ ಮುಗಿದ ನಂತರ ಗೀತೆಯ ಮಹತ್ವ ಉಳಿಯುತ್ತಿರಲಿಲ್ಲ. ಗೀತೆಯ ಮಹತ್ವವನ್ನು ತಿಳಿಯಬೇಕಾದರೆ ಅದರಲ್ಲಿ ಅಡಗಿದ ರೂಪಕಾರ್ಥವನ್ನು ತಿಳಿದಿರಬೇಕಾಗುತ್ತದೆ. ಈ ರೂಪಕಾರ್ಥವನ್ನು ಶ್ರೀ ಅರವಿಂದರು ತಮ್ಮ "ಗೀತಾ ಪ್ರಬಂಧ"ಗಳಲ್ಲಿ ಬಹಳ ಚನ್ನಾಗಿ ವಿವರಿಸಿದ್ದಾರೆ. ಅವರು ಹೇಳುವಂತೆ

## ಗೀತೆಯ ಭರವಸೆ

* ಅನನ್ಯಭಾವದಿಂದ ಯಾರು ನನ್ನನ್ನು ಆರಾಧಿಸುವರೋ ಅಂತಹ ಸಜ್ಜನರ ಯೋಗಕ್ಷೇಮವನ್ನು ನಾನೇ ನೋಡಿಕೊಳ್ಳುವೆನು.
* ಎಲ್ಲ ಧರ್ಮಗಳನ್ನು ಬಿಟ್ಟು ನನ್ನ ಮರೆಹೊಗು; ಹೆದರ ಬೇಡ, ನಾನು ನಿನ್ನನ್ನು ಎಲ್ಲ ಪಾಪಗಳಿಂದಲೂ ಮುಕ್ತಗೊಳಿಸುವೆ.
* ಎಲ್ಲರ ಹೃದಯದಲ್ಲಿ ನಾನಿರುವೆನು. ನನ್ನಿಂದಲೇ ನೆನಪು ಅರಿವು, ಮರೆವು ಇವೆಲ್ಲವೂ; ಎಲ್ಲ ವೇದಗಳೂ ನನಗೇ ಅನ್ವಯಿಸುತ್ತವೆ; ವೇದಾಂತವು ನನ್ನಿಂದಲೇ ಆಯಿತು; ನಾನೇ ವೇದಬಲ್ಲವ.
* ಸುಖದುಃಖಗಳನ್ನು ಲಾಭಾಲಾಭಗಳನ್ನು ಜಯಾಜಯಗಳನ್ನು ಸಮವಾಗಿ ತಿಳಿದು ಹೋರಾಡಿದರೆ ನೀನು ಪಾಪ ಹೊಂದಲಾರೆ.

ದೇವರೇ ಕೃಷ್ಣನ ರೂಪದಲ್ಲಿ ಗುರುವಾಗಿ ಅಲ್ಲಿ ಉಪದೇಶಮಾಡುತ್ತಿದ್ದಾನೆ. ಮಾನವನೇ ಅರ್ಜುನನ ರೂಪದಲ್ಲಿ ಶಿಷ್ಯನಾಗಿ ತನ್ನ ಸಂಶಯಗಳನ್ನು ಮುಂದಿಟ್ಟು ಅವುಗಳ ನಿವಾರಣೆ ಮಾಡಿಕೊಳ್ಳುತ್ತಿದ್ದಾನೆ. ಅಲ್ಲಿ ಮಾನವ ಜೀವನದ ಹೋರಾಟವೇ ಕುರುಕ್ಷೇತ್ರದಯುದ್ಧವೆನಿಸಿದೆ. ಈ ರೂಪಕವನ್ನು ನಾವು ತಿಳಿದರೆ ಭಗವದ್ಗೀತೆಯ ಅವಶ್ಯಕತೆ ಪ್ರತಿಯೊಬ್ಬ ಮನುಷ್ಯನಿಗೂ ಎಷ್ಟಿದೆ ಎಂದು ಗೊತ್ತಾಗುತ್ತದೆ. ನಮ್ಮ ಜೀವನವೇ ಕುರುಕ್ಷೇತ್ರ, ನಾವೇ ಅರ್ಜುನ ಎಂದು ತಿಳಿದಾಗ ಭಗವದ್ಗೀತೆ ನಮ್ಮ ನಿತ್ಯ ಹೋರಾಟದ ಸಮಸ್ಯೆ-ಗಳನ್ನು ಬಿಡಿಸಲು ಉಪಯುಕ್ತವಾದ ಗ್ರಂಥ ಎಂಬ ಸಂಗತಿ ಮನದಟ್ಟಾಗುತ್ತದೆ. ನಾವು ಯಾವುದೇ ಒಂದು ಮತದ ಸಮರ್ಥನೆಗಾಗಿ ಅಲ್ಲದಿದ್ದರೂ ನಮ್ಮ ಜೀವನದಲ್ಲಿ ಬರುವ ಸಂದಿಗ್ಧ ಸಮಯಗಳನ್ನು ಎದುರಿಸುವದಕ್ಕಾಗಿಯಾದರೂ ಭಗವದ್ಗೀತೆಯನ್ನು ಓದುವದು ಅವಶ್ಯವಾಗಿದೆ. ಆದುದರಿಂದ ದೊಡ್ಡವರು ಮೆಚ್ಚಿದ ಈ ಚಿಕ್ಕ ಗ್ರಂಥಕ್ಕೆ ಸಾಮಾನ್ಯ ಮಾನವನ ಜೀವನದಲ್ಲಿಯೂ ಒಂದು ಉಪಯುಕ್ತವಾದ ಸ್ಥಾನ-ವಿದೆ ಎಂದು ಹೇಳಬಹುದು.

ಮಹಾಭಾರತ-ಕಾಲದಲ್ಲಿ ಬರೆಯಲ್ಪಟ್ಟ ಈ ಗ್ರಂಥವು ಅಣುವಿಜ್ಞಾನಯುಗದ ಮಾನವನ ಸಮಸ್ಯೆಗಳನ್ನು ಬಿಡಿಸಲು ಹೇಗೆ ಸಮರ್ಥವಾಗಬಹುದು? ಎಂದು ಯಾರಾದರೂ ಸಂಶಯಪಡಬಹುದು. ಆದರೆ ಗೀತೆಯಲ್ಲಿ ಮಾನವನ ಎಲ್ಲಾ ಯುಗಗಳ ಸಮಸ್ಯೆಗಳನ್ನು ಬಿಡಿಸುವ ಒಂದು ವಿಶಿಷ್ಟ ಶಕ್ತಿ ಇದ್ದುದರಿಂದಲೇ ಅದು ಇಲ್ಲಿಯವರೆಗೂ ಜನಪ್ರಿಯವಾಗಿ ಉಳಿದಿದೆ. ಈ ವಿಷಯದಲ್ಲಿ ಪಂಡಿತ ಜವಾಹರಲಾಲ ನೆಹರು ಅವರು ಹೇಳುವ ಮಾತುಗಳು ಬಹಳ ಉಪಯುಕ್ತವಾಗಿವೆ. ಪಂಡಿತ ನೆಹರು ಅವರು ತಮ್ಮ "ಭಾರತ ದರ್ಶನ" ಎಂಬ ಪುಸ್ತಕದಲ್ಲಿ ಭಗವದ್ಗೀತೆಯ ಬಗ್ಗೆ ಬರೆಯುತ್ತ ಹೀಗೆ ಅಭಿಪ್ರಾಯಪಡುತ್ತಾರೆ:

"ಸಂಕಟಕಾಲದದಲ್ಲಿ ಮಾನವನ ಮನಸ್ಸು ಸಂಶಯಗಳಿಂದ ಪೀಡಿಸಲ್ಪಟ್ಟಾಗ, ಪರಸ್ಪರ ವಿರೋಧಿ ಕರ್ತವ್ಯಗಳನ್ನು ಹೇಗೆ ನೆರವೇರಿಸಬೇಕು ಎಂದು ಗಾಸಿಗೊಂಡಾಗ ಬೆಳಕಿಗಾಗಿ ಹಾಗೂ ಮಾರ್ಗದರ್ಶನಕ್ಕಾಗಿ ಅದು ಹೆಚ್ಚು ಹೆಚ್ಚಾಗಿ ಗೀತೆಯ ಕಡೆಗೇ ಹೊರಳಿದೆ.... ಗೀತೆಯಲ್ಲಿ ಸತತವಾಗಿ ನವ್ಯತೆಯನ್ನು ಪಡೆಯಬಲ್ಲ ಮತ್ತು ಕಾಲಗತಿಗೆ ಸಿಕ್ಕು ನಶಿಸಿಹೋಗದಿರುವ ಒಂದು ಗುಣವಿದೆ...." ಇಂಥ ಗುಣವುಳ್ಳ ಗೀತೆಯನ್ನು ಒಮ್ಮೆಯಾದರೂ ನಾವು ಓದದಿರುವದು ಒಂದು ದೊಡ್ಡ ನಷ್ಟವಲ್ಲದೇ ಮತ್ತೇನು? *




**೨೮ ವರ್ಷ ಕಾಲ ಭಾರತವು ಜಾಗತಿಕ ಹಾಕಿಯಲ್ಲಿ ವಿಜಯಿಯಾಗಿದೆ. ಮುಂದೆ ಆ ವಿಜಯ ಉಳಿದೀತೆ ?**

# ಭಾರತದ 'ಹಾಕೀ' ಸಾಧನೆ

—ಕುಲಮರ್ವ ಬಾಲಕೃಷ್ಣ

೧೯೨೮ರ ಮಾರ್ಚ ೧೦; ಮುಂಬಯಿಯಿಂದ ಕೈಸರ್--ಇ–ಹಿಂದ ಹಡಗ ಆಮ್‌ಸ್ಟರ್‌ಡ್ಯಾಮಿಗೆ ಹೊರಟಿತ್ತು. ಅದರಲ್ಲಿ ಭಾರತದ ೧೨ ಜನ ಆಟಗಾರರಿದ್ದರು. ಅವರು ಆಮ್‌ಸ್ಟರ್‌ ಡ್ಯಾಮಿನ ಜಾಗತಿಕ ಒಲಿಂಪಿಕ್ ಪಂದ್ಯದಲ್ಲಿ ಹಾಕಿ ಆಡಲು ಹೊರಟಿದ್ದರು.

೪೦ ಕೋಟಿ ಭಾರತೀಯರ ಪರವಾಗಿ ಮೊಟ್ಟ ಮೊದಲನೇ ಸಲ ಒಲಿಂಪಿಕ ಪಂದ್ಯಗಳಲ್ಲಿ ಹಾಕಿ ಆಡಿ ವಿಜಯಧ್ವಜ ಹಾರಿಸಲು ಹೊರಟ ಈ ಆಟಗಾರರಿಗೆ ಭಾರತವು ಕೊಟ್ಟ ಬೀಳ್ಕೊಡಿಗೆ ನಿಜವಾಗಿ ಅಪೂರ್ವವಾಗಿತ್ತು. "ನಮ್ಮನ್ನು ಬೀಳ್ಕೊಡಲು ಹಡಗುಕಟ್ಟೆಗ ಬಂದವರು ಎಣಿಸಿ ಮೂರು ಜನ. ಅವರೂ ಭಾರತೀಯ ಹಾಕಿ ಸಂಘದ ಪ್ರಮುಖರು. ಭಾರತವು ಆರಿಸಿದ ಪ್ರತಿನಿಧಿಗಳಿಗೆ, ಪ್ರಪಂಚದಲ್ಲಿ ಭಾರತದ ಗೌರವ ಉಳಿಸಬೇಕಾಗಿದ್ದ ನಮಗೆ ಎಂಥ ಸ್ಫೂರ್ತಿದಾಯಕ ವಿದಾಯ ದೊರಕಿತ್ತು !" ಎಂದು ಆ ೧೩ರಲ್ಲೊಬ್ಬನಾದ ಮತ್ತು ಮುಂದೆ ಪ್ರಸಿದ್ಧ ಹಾಕಿ ಪಟುವಾದ ಧ್ಯಾನಚಂದ ತನ್ನ ಆತ್ಮಕಥೆಯಲ್ಲಿ ಬರೆದಿದ್ದಾನೆ.

ಈಗ ೨೮ ವರ್ಷಗಳಿಂದ ಹಾಕಿ ಪಟ್ಟವನ್ನು ನಿರಂತರವಾಗಿ ಆರು ಸಲ ಒಲಿಂಪಿಕ ಪಂದ್ಯ

ಗಳಲ್ಲಿ ಸಂಪಾದಿಸಿಕೊಂಡ ಭಾರತದ ಜನತೆ ಹಾಕಿಯಲ್ಲಿ ಮೊದಲು ತೋರಿಸಿದ ಆಸ್ಥೆಗೆ ಮೇಲಿನ ಘಟನೆ ಸಾಕ್ಷಿಯಾಗಿದೆ. ಇಷ್ಟು ಅಸಡ್ಡೆಯಿಂದ ಕಳಿಸಿದರೂ ಭಾರತದ ಟೀಮು ಆಮ್‌ಸ್ಟರಡ್ಯಾಮಿನಲ್ಲಿ ಜಗತ್ತನ್ನು ಚಕಿತಗೊಳಿಸುವಂತೆ ಜಯಭೇರಿ ಹೊಡೆಯಿತು. ಒಲಿಂಪಿಕ್ಸಿನಲ್ಲಿ ಅದು ತನ್ನೊಡನೆ ಸ್ಪರ್ಧಿಸಿದ ಎಲ್ಲ ಐದು ದೇಶಗಳನ್ನು ಸೋಲಿಸಿ ಒಟ್ಟು ೨೯ ಗೋಲು ಹೊಡೆದರೂ ಅದಕ್ಕೆ ಒಂದೇ ಒಂದು ಗೋಲಾಗಲಿಲ್ಲ.

ತನ್ನ ಆಟಗಾರರ ಈ ಅದ್ಭುತ ಸಾಹಸವು "ನಿದ್ರಿತ ಭಾರತ" ವನ್ನು ಕೂಡ ಎಚ್ಚರಿಸದಿರಲಿಲ್ಲ. ಒಲಿಂಪಿಕ್ ಹಾಕಿ ವೀರರು ಮರಳಿ ಬಂದಾಗ ಮುಂಬಯಿಯ ಧಕ್ಕೆಯಲ್ಲಿ ಅವರಿಗೆ ದೊರೆತ ಸ್ವಾಗತ ಹಿಂದಿನ ಎಲ್ಲ ಅಸಡ್ಡೆಯನ್ನು ಮರೆಸುವಂತಿತ್ತು. ಮುಂಬಯಿಯ ಮೇಯರರಾಗಿದ್ದ ಡಾ. ದೇಶಮುಖರು ಸ್ವತಃ ಹಾಜರಿದ್ದರು. ತಲೆಗಳ ಸಮುದ್ರವೇ ವೀರರ ದರ್ಶನಕ್ಕಾಗಿ ಕಾದು ನಿಂತಿತ್ತು.

ಅಂದಿನಿಂದ ಇಂದಿನ ವರೆಗೆ ಭಾರತವು ಹಾಕಿ ಆಟದಲ್ಲಿ ಜಗತ್ತಿನಲ್ಲಿ ಅಜೇಯವಾಗಿಯೇ ಉಳಿದಿದೆ. ೧೯೩೨ರಲ್ಲಿ ಒಲಿಂಪಿಕ್ ಹಾಕಿ ಪಂದ್ಯದಲ್ಲಿ ಮತ್ತೆ ಜಯಶೀಲರಾಗಿ ಬಂದ ಆಟಗಾರರಲ್ಲೊಬ್ಬನಾದ ಧ್ಯಾನಚಂದ ಮತ್ತು ಅವನ ತಮ್ಮ ರೂಪಸಿಂಗನನ್ನು ಅವರ ತವರೂರಾದ ಝಾನ್ಸಿಯಲ್ಲಿ ಸ್ವಾಗತಿಸಿದ ರೀತಿ ನಿಜಕ್ಕೂ ಮನಮುಟ್ಟುವಂಥದಿತ್ತೆಂದು ಧ್ಯಾನಚಂದ ನೆನೆದಿದ್ದಾನೆ. ರೇಲು ನಿಲ್ದಾಣವನ್ನೆಲ್ಲ ಹಾಕಿ ಕಟ್ಟಿಗೆಗಳ ತೋರಣದಿಂದಲೇ ಸಿಂಗರಿಸಲಾಗಿತ್ತು. ತಮ್ಮೂರಿನವರಾದ ಜಗಜ್ಜೇತೃ ಭಟರ ಗೌರವಾರ್ಥವಾಗಿ ಝಾನ್ಸಿಯ ಮ್ಯಾಕ್‌ಡೊನಲ್ ಹೈಸ್ಕೂಲಿಗೆ ರಜೆ ಕೊಡಲಾಗಿತ್ತು.

ಹಾಕಿ ಆಟದ ಚರಿತ್ರೆ ಬಹಳ ಹಳೆಯದು. ಕ್ರಿಸ್ತಪೂರ್ವ ಶತಮಾನಗಳಲ್ಲಿ ಪರ್ಶಿಯನ್ನರು ಆಡುತ್ತಿದ್ದ ಹಾಕಿ ಗ್ರೀಸಿಗೆ ತೆರಳಿ ಅಲ್ಲಿಂದ ರೋಮನರಿಗೆ ಪರಿಚಿತವಾಗಿ ಯುರೋಪಿನಲ್ಲೆಲ್ಲ ಪಸರಿಸಿ ಭಾರತಕ್ಕೆ ಬಂದಾಗ ಕಳೆದ ಶತಮಾನದಲ್ಲಿ ಬಹುಶಃ ಎಂಟು ದಶಕಗಳು ಸಂಪೂರ್ಣ ಕಳೆದುಹೋಗಿದ್ದವು. ಆಗಿನ್ನೂ ಆಧುನಿಕ ಹಾಕಿ ರೂಪಿತವಾಗಿರಲಿಲ್ಲ.

೧೮೮೬ ಜನವರಿ ಹದಿನೆಂಟರಲ್ಲಿ ಬ್ರಿಟನ್ನಿನ ಕೇಂದ್ರ ಹಾಕಿಸಂಸ್ಥೆಯು ಹೊಸ ನಿಯಮನಿಬಂಧನೆಗಳನ್ನು ತಯಾರಿಸಿ ಆಧುನಿಕ ಹಾಕಿಯ ಪ್ರಾಣಪ್ರತಿಷ್ಠೆ ಮಾಡಿತು. ಅದಕ್ಕೆ ಮೊದಲು ಹಾಕಿಯು ಪೂರ್ವದೇಶಗಳಲ್ಲಿ ಆಯಾ ದೇಶೀಯ ಪದ್ಧತಿಯಿಂದಲೇ ಆಡಲ್ಪಡುತ್ತಿತ್ತು. ಆ ಹಾಕಿ "ಖಿಡ್ಡೋ-ಖುಂಡಿ" ಯಾಗಿ ಭಾರತದ ಪಂಜಾಬಿನಲ್ಲಿಯೂ ಪ್ರಚಾರದಲ್ಲಿತ್ತು.

ಬ್ರಿಟನ್ನಿನಲ್ಲಿ ಆಧುನಿಕ ಹಾಕಿಯ ಪ್ರಾಣಪ್ರತಿಷ್ಠೆ ನಡೆದರೂ ಜಾಗತಿಕ ಒಲಿಂಪಿಕ್ ಪಂದ್ಯಗಳಲ್ಲಿ ಸೇರಿಸಲಾಗಿದ್ದ ಅದನ್ನು ಅಪಾಯಕಾರಿ ಆಟವೆಂದು ತೆಗೆದು ಹಾಕಲಾಯಿತು. ಅನಂತರ ಹಾಕೀ ಪ್ರಿಯರು ಆಟದ ಸೊಗಸು ಹೆಚ್ಚುವಂತೆ, ಅಪಾಯ ಸಂಭವ ಕಡಮೆಯಾಗುವಂತೆ, ಹಲವು ಹೊಸ ಸುಧಾರಣೆಗಳನ್ನು ಮಾಡಿ ಒಲಿಂಪಿಕ್ ಪಂದ್ಯಗಳಲ್ಲಿ ಮತ್ತೆ ಹಾಕಿಗೆ ಸ್ಥಾನ ದೊರೆಯುವಂತೆ ಮಾಡಿದರು.

ಲಂಡನ್ನಿನಲ್ಲಿ ೧೯೦೮ ರಲ್ಲಿ ಮೊದಲ ಜಾಗತಿಕ ಒಲಿಂಪಿಕ್ ಪಂದ್ಯ ನಡೆದಾಗಲಾಗಲಿ ೧೯೨೦ ರಲ್ಲಿ ಆಂಟ್‌ವರ್ಪಿನಲ್ಲಿ ನಡೆದ ಜಾಗತಿಕ ಹಾಕೀ ಪಂದ್ಯದಲ್ಲಿಯಾಗಲಿ ಭಾರತವು ಭಾಗವಹಿಸಿರಲಿಲ್ಲ. ಆಗಿನ್ನೂ ಭಾರತದಲ್ಲಿ ಪಂದ್ಯಾಟಗಳ ಅಭಿರುಚಿ ಬೆಳೆಯುತ್ತಿತ್ತು ಅಷ್ಟೆ.

೧೮೯೫ ರಲ್ಲಿ ಭಾರತದ ಬೇಟನ್ ಕಪ್ ಗಳಿಸುವದು ಹಾಕೀ ಪಂದ್ಯಾಟದ ಮಹತ್ವದ ವಿಕ್ರಮವೆನಿಸಿತ್ತು. ಆ ಹೊತ್ತಿಗೆ ಬಂಗಾಲದ ಎಸ್. ಆರ್. ಭಟ್ಟಾಚಾರ್ಜಿ, ಬ್ರಿಟಿಶಸೇನಾಧಿಕಾರಿಗಳು ಮತ್ತು ಕೆಲ ಸಂಸ್ಥಾನಿಕರು ಆಟಗಳಲ್ಲಿ ಹೆಚ್ಚು ಉತ್ಸಾಹವನ್ನು ತಾಳಿದರು ಇದರ ಫಲವಾಗಿ ಅಲ್ಲಲ್ಲಿ ಹಾಕಿ ಸಂಘಗಳು ಸ್ಥಾಪಿತವಾಗುವಂತಾಯಿತು. ಶ್ರೀ ಭಟ್ಟಾಚಾರ್ಜಿಯವರು ಬಂಗಾಳದ ಹಾಕಿ ಸಂಘದ ಜನಕರಾದರೆ, ಸಿ. ಈ. ನ್ಯೂಹ್ಯಾಮರಂಥ ಪತ್ರಿಕೋದ್ಯಮಿಗಳು ಹಾಕಿ ಬೆಳೆಯಲು ತಕ್ಕ ಸಾಹಿತ್ಯವನ್ನು ನಿರ್ಮಿಸಿದರು.

ಹೀಗೆ ಸುಮಾರು ಮೂವತ್ತು ವರ್ಷಗಳ ಕಾಲ ಭಾರತದಲ್ಲಿ ಹಾಕೀ ಆಟ ವಿಶೇಷವಾಗಿ ಸೈನ್ಯದಲ್ಲಿ ಕ್ರಮೇಣ ಅಭಿವೃದ್ಧಿ ಹೊಂದುತ್ತ ನಡೆದಿತ್ತು.

೧೯೨೫ ನವೆಂಬರ ೭ ರಲ್ಲಿ ಭಾರತದ ಎಲ್ಲ ಹಾಕಿ ಸಂಸ್ಥೆಗಳನ್ನು ಒಂದುಗೂಡಿಸುವ ಒಂದು ರಾಷ್ಟ್ರೀಯ ಸಂಸ್ಥೆ ಸ್ಥಾಪಿತವಾಯಿತು. ಈ ಭಾರತೀಯ ಹಾಕಿ ಫೆಡರೇಶನ್ನಿನ ಜನನಕ್ಕೆ ಕಾರಣರಾದವರೊಬ್ಬ ಸೈನ್ಯಾಧಿಕಾರಿ. ಮೇಜರ್ ಬರ್ನ್ಸ್ ಮಡೋರ್ಚ ಅವರೇ ಈ ಅಧಿಕಾರಿ. ಭಾರತೀಯ ಹಾಕಿ ಫೆಡರೇಶನ್ನಿನ ಮೊದಲ ಅಧ್ಯಕ್ಷರಾದವರೂ ಅವರೇ.

೧೯೨೬ ಭಾರತೀಯ ಹಾಕಿ ಆಟಗಾರರಿಗೆ ಮಹತ್ವದ ವರ್ಷ. ಆ ವರ್ಷ ಮೊದಲ ಬಾರಿ ಭಾರತದ ಸೇನಾ ಹಾಕಿ ಸಂಸ್ಥೆಯವರು ತಮ್ಮ ನ್ಯೂಜಿಲ್ಯಾಂಡ ಪ್ರವಾಸದಿಂದ ಭಾರತದ ಹಾಕಿ ಆಟದ ಪ್ರತಿಭೆಯನ್ನು ಇತರರಿಗೂ ತಿಳಿವಂತೆ ಮಾಡಿದರು. ೧೯೨೮ ರಲ್ಲಿ ಆಮ್‌ಸ್ಟರಡ್ಯಾಮಿನಲ್ಲಿ ನಡೆದ ಜಾಗತಿಕ ಒಲಿಂಪಿಕ್ ಪಂದ್ಯಗಳಲ್ಲಿ ಭಾರತದ ಕೇಳಿಕೆಯಂತೆ ಹಾಕಿ ಆಟವನ್ನು ಸೇರಿಸಲಾಯಿತಲ್ಲದೆ ಭಾರತವೇ ಹಾಕಿ ಆಟದಲ್ಲಿ ಸರ್ವಶ್ರೇಷ್ಠವೆನಿಸಿಕೊಂಡಿತು.

ಅಂದಿನಿಂದ ಭಾರತಡ ಹಾಕಿ ಆಟಗಾರರು ಪ್ರಸಿದ್ಧರಾದರೂ ಅವರಲ್ಲಿ ಒಬ್ಬರೂ ಆ ವೃತ್ತಿಯವರಿರಲಿಲ್ಲ. ಎಲ್ಲರೂ ಬೇರ ಕಡೆ ನೌಕರಿ ಮಾಡುತ್ತಿದ್ದು ಪಂದ್ಯಾಟದಲ್ಲಿ ಭಾಗವಹಿಸಲು ರಜೆ ಪಡೆದುಕೊಂಡು ತೆರಳುತ್ತಿದ್ದರು. ಆಮ್‌ಸ್ಟರಡ್ಯಾಮಿನ ಪಂದ್ಯಕ್ಕೆ ೧೩ ಜನ ಆಟಗಾರರನ್ನು ಕಳಿಸಲು ಬೇಕಾದ ಹಣ ಕೂಡಿಸುವುದು ಕೂಡ ಅಂದು ಹಾಕಿ ಫೆಡರೇಶನ್ನಿಗೆ ಕಷ್ಟವಾಯಿತು.

ಅನಂತರ ಅಮೇರಿಕದ ಲಾಸ್ ಎಂಜಲ್ಸ್ ಒಲಿಂಪಿಕ್ಸ್‌ನಲ್ಲಿ ಎರಡೇ ದೇಶಗಳು ಭಾರತದ ವಿರುದ್ಧ ಆಡಿದವು. ಭಾರತವು ಜಪಾನನ್ನು ೧೧ ವಿರುದ್ಧ ೧, ಅಮೇರಿಕವನ್ನು ೨೪ ವಿರುದ್ಧ ೧ ಗೋಲುಗಳಿಂದ ಸೋಲಿಸಿತ್ತು. ಆದರೆ ಈ ವಿಜಯದಲ್ಲಿ ಸುಖವಿರಲಿಲ್ಲ. ಯಾಕೆಂದರೆ ಹಾಕಿ ಬಗ್ಗೆ ಇತರ ದೇಶಗಳಲ್ಲಿ ಆಸ್ಥೆಯೇ ಇದ್ದಂತಿರಲಿಲ್ಲ. ಆಡಿದ ದೇಶಗಳೂ ಭಾರತಕ್ಕೆ ಸಮಸ್ಕಂಧರಾಗಿರಲಿಲ್ಲ. ಅಮೇರಿಕದ ಸ್ತ್ರೀಯರು ಮಾತ್ರ ಈ ಆಟದಲ್ಲಿ ಆಸ್ಥೆ ವಹಿಸಿದ್ದರಂತೆ.

ಆದರೆ ಭಾರತ ಲಾಸ್ ಎಂಜಲ್ಸಿನಲ್ಲಿ ಭಾಗವಹಿಸಿರದಿದ್ದರೆ ಹಾಕಿ ಆಟವೇ ಒಲಿಂಪಿಕ್ಸಿನಿಂದ ವಜಾ ಆಗುವ ಸಂಭವವಿತ್ತೆಂದು ಧ್ಯಾನಚಂದ ಹೇಳುತ್ತಾನೆ.

ಆಮಸ್ಟರಡ್ಯಾಂ ಒಲಿಂಪಿಕ್ ಪಂದ್ಯದಲ್ಲಿ ಭಾರತೀಯ ಆಟಗಾರರಿಗೆ ಅನುಕೂಲ ಪರಿಸ್ಥಿತಿಯಿರಲಿಲ್ಲ. ಒಬ್ಬಿಬ್ಬರು ಮೊದಲೇ ಗಾಯಗೊಂಡಿದ್ದರು. ಧ್ಯಾನಚಂದನ ಮೈ ಜ್ವರದಿಂದ ಬೆಚ್ಚಗಾಗಿತ್ತು. ಇಂಥ ಪರಿಸ್ಥಿತಿಯಲ್ಲಿ "ಮಾಡು ಇಲ್ಲವೆ ಮಡಿ" ಎಂಬ ಮಂತ್ರ ತಮಗೆ ಗೆಲವು ತಂದುಕೊಟ್ಟಿತೆಂದು ಧ್ಯಾನಚಂದ ಬರೆಯುತ್ತಾನೆ.

ಲಾಸ್ ಎಂಜೆಲ್ಸಿಗೆ ೧೯೩೨ ರಲ್ಲಿ ಭಾರತದ ಟೀಮು ಪ್ರಯಾಣ ಬೆಳೆಸಿದ್ದು ಹಣದ ಅಭಾವದಲ್ಲಿಯೇ. ಆಗ ಭಾರತೀಯ ಹಾಕಿ ಫೆಡರೇಶನ್ನಿನ

**ಹಾಕಿಗೆ ಒಲಿದ ರಮಣಿ**

**ಲಾಸ್ ಎಂಜಲ್ಸಿನಲ್ಲಿ ಹಾಕೀ ಆಟದಲ್ಲಿ ಜಗತ್ತನ್ನೇ ಗೆದ್ದು ಹಿಂತಿರುಗುತ್ತ ಭಾರತೀಯ ಆಟಗಾರರು ಪ್ರೇಗಿಗೆ ಬಂದರು. ಅಲ್ಲಿ ಝೆಕೋಸ್ಲೋವಾಕಿಯದ ಹಾಕೀ ಪ್ರೇಮಿ ಸುಂದರ ತರುಣಿಯೊಬ್ಬಳು ಭಾರತದ ಪ್ರಸಿದ್ಧ ಆಟಗಾರ ಧ್ಯಾನಚಂದನನ್ನು ಒಮ್ಮೆ ಮುದ್ದಿಸಬೇಕೆಂದು ಹಟ ಹಿಡಿದಳು.**

**"ಆಹ! ನೀನೊಬ್ಬ ಮಾಟಗಾರ!'' ಎಂದು ಆಕೆ ಅವನನ್ನು ಕರೆದಳು.**

**ಆದರೆ ತನಗೆ ಮದುವೆಯಾಗಿದೆಯೆಂದು ಹೇಳಿ ಅವಳ ಭಾವೋದ್ವೇಗವನ್ನು ತಣಿಸಬೇಕಾದರೆ ಧ್ಯಾನಚಂದನಿಗೆ ಸಾಕುಬೇಕಾಯಿತು.**

ಅಧ್ಯಕ್ಷರಾಗಿದ್ದ ಎ. ಎಂ. ಹ್ಯಾಮನ್ ಮತ್ತು ಗೌರವ ಕಾರ್ಯದರ್ಶಿ ಪಂಕಜ ಗುಪ್ತ ಇಬ್ಬರೂ ಸೇರಿ ಕಲ್ಕತ್ತದ ಬ್ಯಾಂಕೊಂದರಿಂದ ವಿದೇಶ ಪ್ರವಾಸದ ಸಲುವಾಗಿ ಸಾಲ ಪಡೆಯಬೇಕಾಯಿತು. ಇಷ್ಟಾದರೂ ಈ ಪ್ರವಾಸದಲ್ಲಿ ಆಟಗಾರರು ದಣಿದುಹೋಗಿದ್ದರು. ಅವರಿಗೆ ಸರಿಯಾದ ಆಹಾರ ದೊರೆಯುವುದೇ ದೊಡ್ಡ ಮಾತಾಗಿತ್ತು. ಆ ಬಾರಿ ಅವರು ಎಲ್ಲೆಂದರಲ್ಲಿ ಪಂದ್ಯವಾಡಲು ಸಿದ್ಧರಾಗಬೇಕಾಯಿತು. ಅಷ್ಟೇ ಅಲ್ಲ, ಭಾರತಕ್ಕೆ ಮರಳಿದ ಮೇಲೂ ೧೦ ತಿಂಗಳು ತಿಕೀಟಿಟ್ಟು ಪಂದ್ಯಗಳನ್ನಾಡಬೇಕಾಯಿತು.

ಜಗತ್ತಿನಲ್ಲಿ ಭಾರತಕ್ಕೆ ಹಾಕಿ ವಿಜಯಿಪಟ್ಟ ೧೯೨೮ ರಲ್ಲಿಯೆ ದೊರೆಯಿತಾದರೂ ಆ ಟೀಮಿನಲ್ಲಿದ್ದ ಕೆಲವರಿಗೆ ತಾವು ಭಾರತೀಯರೆಂದು ಕೊಳ್ಳಲು ನಾಚಿಕೆಯಾಗಿತ್ತು. ಇಂಥ "ಮಾನಧನ"ರು ತಾವು ಭಾರತದ ಟೀಮಿನಲ್ಲಿ ಆಡಿಗೆದ್ದಿದ್ದರೂ ತಾವು "ಭಾರತದಲ್ಲಿ ವಾಸಮಾಡುವ ಬ್ರಿಟಿಶರೆಂ"ದು ಹೇಳಿ ಮರ್ಯಾದೆ ಉಳಿಸಿಕೊಳ್ಳಹೋದರು! ಅದರ ಪರಿಣಾಮವಾಗಿ ಲಾಸ್ ಎಂಜಲ್ಸಿನ ಪಂದ್ಯದಲ್ಲಿ ಭಾಗವಹಿಸಿದ ಪ್ರತಿಯೊಬ್ಬ ಆಟಗಾರನೂ ತಾನು ಭಾರತೀಯನೆಂದು ಬರೆದುಕೊಟ್ಟೇ ಟೀಮಿಗೆ ಸೇರುವಂತಾಯಿತು. ಅಲ್ಲದೆ ಅವರಿಗೆ ಭಾರತೀಯ ಉಡುಪನ್ನು ಕೂಡ ಒದಗಿಸಲಾಯಿತು.

೧೯೩೬ ರಲ್ಲಿ ಮಾತ್ರ ನಾಜಿ ಜರ್ಮನಿಯು ಭಾರತಕ್ಕೆ ಪ್ರಬಲ ವಿರೋಧಿಯಾಗಿ ಕಾಣಿಸಿತು. ನಾಜಿಗಳು ತಮ್ಮ ಪ್ರತಿಷ್ಠೆ ಉಳಿಸಿಕೊಳ್ಳಲು ತಮ್ಮ ಆಟಗಾರರಿಗೆ ನಿರಂತರ ತರಬೇತಿ ಕೊಟ್ಟಿದ್ದರು. ಮೊದಲನೆ ಹುಸಿ ಆಟದಲ್ಲಿ ಜರ್ಮನ್ನರು ಭಾರತವನ್ನು ೪—೧ ಗೋಲುಗಳಿಂದ ಸೋಲಿಸಿ ಬುದ್ಧಿ ಕಲಿಸಿದರು. ಆದರೆ ಒಲಿಂಪಿಕ್ಸಿನಲ್ಲಿ ಮಾತ್ರ ಭಾರತೀಯರು ಜರ್ಮನ್ನರನ್ನು ೮—೧ ಗೋಲುಗಳಿಂದ ಸೋಲಿಸಿ ನಾಜಿಗಳನ್ನು ದಿಙ್ಮೂಢಗೊಳಿಸಿದರು. ಹಿಟ್ಲರನೇ ಭಾರತೀಯರನ್ನು ಅಭಿನಂದಿಸಿದನು.

ಎರಡನೇ ಮಹಾಯುದ್ಧದಲ್ಲಿ- ಜರ್ಮನಿಯ ಆಟಗಾರರಿಗೆ ಪೆಟ್ಟು ಬಿದ್ದರೆ ಭಾರತವು ೧೯೪೭ ರ ವಿಭಜನೆಯಿಂದ ಕುಕ್ಕರಿಸಿತು. ಅನೇಕ ಉತ್ತಮ ಆಟಗಾರರು ಪಂಜಾಬದ ವಿಭಜನೆಯಿಂದ ಪಾಕಿಸ್ತಾನದ ಪಾಲಾದರು. ಆದರೂ ೧೯೪೮ ರಲ್ಲಿ ಹೇಗೋ ಒಂದು ತಂಡವನ್ನು ಹೊಂದಿಸಿ ಲಂಡನ್ನಿನ ಒಲಿಂಪಿಕ್ಸಿಗೆ ಕಿಶನಲಾಲನ ನೇತೃತ್ವದಲ್ಲಿ ಕಳಿಸಿದ್ದಾಯಿತು. ಆ ಆಟಗಳಲ್ಲಿ ಒಟ್ಟು ಐದು ದೇಶಗಳನ್ನು ಭಾರತವು ೨೫--೨ ಗೋಲುಗಳಿಂದ ಸೋಲಿಸಿತು.

೧೯೫೨ ರಲ್ಲಿ ಹೆಲ್ಸಿಂಕಿಯ ಒಲಿಂಪಿಕ್ಸ್‌ನಲ್ಲಿ ಭಾಗ ವಹಿಸಿದ ಟೀಮಿನ ಆಯ್ಕೆ ಸರಿಯಾಗಲಿಲ್ಲೆಂಬ ಆಕ್ಷೇಪಗಳಿಂದಲೂ ಹೊರಡುವ ಮೊದಲು ಭಾರತದಲ್ಲಿ ಈ ಟೀಮು ಕೆಲ ಆಟಗಳಲ್ಲಿ ಸೋತದ್ದರಿಂದಲೂ ತುಂಬಾ ನಿರಾಶಾದಾಯಕ ವಾತಾವರಣದಲ್ಲಿ ಹೊರಟಿತ್ತು. ಆದರೆ ಒಲಿಂಪಿಕ್ ಮೈದಾನದಲ್ಲಿ ಕಾಲಿಟ್ಟೊಡನೆ ಅವರಿಗೇ ವಿಜಯಶ್ರೀ ಒಲಿಯಿತು.

ಬಲಬೀರ ಸಿಂಗನ ನೇತೃತ್ವದಲ್ಲಿ ಈ ಸಲದ ಮೆಲ್‌ಬೋರ್ನ್ ಒಲಿಂಪಿಕ್ಸಿನಲ್ಲಿ ಮೂರು ರಾಷ್ಟ್ರಗಳ ಪ್ರಬಲ ವಿರೋಧವನ್ನು ಭಾರತದ ಟೀಮು ಎದುರಿಸಬೇಕಾಯಿತು. ಹಾಲಂಡು ಒಬ್ಬ ಭಾರತೀಯ ಒಲಿಂಪಿಕ್ ಹಾಕಿ ವೀರನಿಂದಲೇ ನಿರಂತರ ತರಬೇತಿ ಪಡೆದಿತ್ತು. ಜರ್ಮನಿಯೂ ಸಿದ್ಧತೆ ಮಾಡಿಕೊಂಡಿತ್ತು. ಪಾಕಿಸ್ತಾನವು ಹೊಸತಾಗಿ ಭಾರತಕ್ಕೆ ಎಲ್ಲಕ್ಕೂ ಹೆಚ್ಚಿನ ಪ್ರತಿಭಟನೆ ಒದಗಿಸಿತು. ಪಾಕಿಸ್ತಾನದ ಆಟಗಾರರು ಮೊದಲು ಭಾರತೀಯರೇ ಆಗಿದ್ದು ಅದೇ ಬಗೆಯ ತಂತ್ರಗಳನ್ನು ಉಪಯೋಗಿಸುವವರು. ಆದರೆ ಪಾಕಿಸ್ತಾನವನ್ನೊಳಗೊಂಡು ೫ ರಾಷ್ಟ್ರಗಳನ್ನು ೩೮-೦ ಗೋಲುಗಳಿಂದ ಭಾರತವು ಕೊನೆಗೆ ಗೆದ್ದಿತು.

ಭಾರತೀಯ ಹಾಕಿ ತಂತ್ರದ ವೈಶಿಷ್ಟ್ಯವೆಂದರೆ ರಭಸದ ಆಟ. ಅದರ ಮುಂದೆ ಈ ವರೆಗೆ ಯಾವ ವಿದೇಶೀಯನೂ ತಡೆದಿಲ್ಲ. ಆದರೆ ಇನ್ನು ಮುಂದೆ ಭಾರತವು ಪಟ್ಟವನ್ನುಳಿಸಿಕೊಳ್ಳಲು ಜರ್ಮನಿ ಮತ್ತು ಪಾಕಿಸ್ತಾನಗಳನ್ನು ಮೀರಿಸುವ ಉದ್ಯಮ ಮಾಡಬೇಕು. ಇವೆರಡೂ ದೇಶಗಳು ಈ ಸಲ ಭಾರತದೊಡನೆ ಕುಶಲ ಆಟ ಆಡಿವೆ. ಮುಂದೆ ಅವು ಹೆಚ್ಚಿನ ತಯಾರಿಯಿಂದ ಬರಬಹುದು. ✿

ಭಾರತದ ಪ್ರತಿಭಾಶಾಲಿಯೊಬ್ಬನು ಜಾತಿಯ ದೆಸೆಯಿಂದ ಪಟ್ಟ ಪಾಡು—

# ಅಂಬೇಡಕರರು ಹಾಗೇಕಾದರು ?

ಪಿ. ವೆಂಕಟರಮಣಾಚಾರ್ಯ



ಡಾ. ಭೀಮರಾವ ರಾಮರಾವ ಅಂಬೇಡಕರರು ತೀರಿಕೊಂಡರು. ಮೃತ್ಯುವಿಗಿಂತ ಕೆಲ ವಾರಗಳ ಹಿಂದೆ ಅವರು ಎರಡು ಲಕ್ಷ ಅನುಯಾಯಿಗಳೊಡನೆ ಬೌದ್ಧ ಧರ್ಮ ಸ್ವೀಕರಿಸಿದರು. ಇದು ಸಂತಪ್ತನಾದ ಬುದ್ಧಿಶಾಲಿ ಅಸ್ಪೃಶ್ಯನೊಬ್ಬನು ಹಿಂದೂಧರ್ಮದ ವಿರುದ್ಧ ಹೂಡಿದ ಕೊನೆಯ ಮಹಾ ಪ್ರತಿಭಟನೆಯಾಗಿತ್ತು.

ಅಂಬೇಡಕರರ ಪ್ರೌಢ ಜೀವನವೆಲ್ಲ ಪ್ರತಿಭಟನೆಗಳ ಒಂದು ಮಾಲೆಯೇ ಆಗಿತ್ತು. ಅವರು ಕೊನೆಯವರೆಗೂ ಪ್ರಕ್ಷುಬ್ಧ ಮನುಷ್ಯರಾಗಿದ್ದರು. ಸುಮಾರು ಮೂರು ದಶಕಗಳ ಕಾಲ ಅವರು ಈ ಕ್ಷೋಭವನ್ನು ನಾನಾ ಪ್ರಕಾರಗಳಿಂದ ಪ್ರದರ್ಶಿಸಿದರು. ಅವರು ಸನಾತನಿಗಳ ಮೇಲೆ ಸಿಟ್ಟಾಗಿದ್ದರು—ಯಾಕಂದರೆ ಅಂಬೇಡಕರರು ವಿದ್ಯಾಬುದ್ಧಿ ವೈಭವವುಳ್ಳವರಾದರೂ ಅವರನ್ನು ಸಮಾಜ ಅಸ್ಪೃಶ್ಯರಾಗಿಯೇ ಕಾಣುತ್ತಿತ್ತು. ಅವರು ಸುಧಾರಕರ ಮೇಲೆ ಸಿಟ್ಟಾಗಿದ್ದರು—ಯಾಕೆಂದರೆ ಸುಧಾರಕರು ಅಸ್ಪೃಶ್ಯತಾ ನಿವಾರಣೆಯನ್ನು ಸಾಕಷ್ಟು ತ್ವರಿತವಾಗಿ ಮಾಡುತ್ತಿಲ್ಲವೆಂದು ಅವರಿಗೆ ತೋರುತ್ತಿತ್ತು. ಗಾಂಧೀಜಿ ಮತ್ತು ಕಾಂಗ್ರೆಸ್ಸು ಅಸ್ಪೃಶ್ಯರಿಗಾಗಿ ಏನೂ ಮಾಡಿಲ್ಲೆಂದು ವಾದಿಸಿ ಅವರೊಂದು ಪುಸ್ತಕವನ್ನೇ ಬರೆದರು. ಅವರು ಆಗಿಂದಾಗ್ಗೆ ತಮ್ಮ ಅನುಯಾಯಿ-ಹರಿಜನರೊಡನೆ ಮುಸ್ಲಿಂ ಅಥವಾ ಕ್ರೈಸ್ತ ಧರ್ಮ ಸ್ವೀಕರಿಸುವುದಾಗಿ ಬೆದರಿಕೆ ಹಾಕಿದರು. ಕೊನೆಗೆ ಅವರು ಬೌದ್ಧ ಧರ್ಮವನ್ನು ಸ್ವೀಕರಿಸಿ ಹಿಂದುಗಳ ಮೇಲೆ ಸೇಡು ತೀರಿಸಿಕೊಂಡರು.

ಅಂಬೇಡಕರರು ಸಿಡುಕರಾಗಲು ಅವರಿಗೆ ಬಂದ ಕಟು ಅನುಭವಗಳೇ ಕಾರಣ. ಅವರು ಅಸ್ಪೃಶ್ಯ ಕುಲದಲ್ಲಿ ಹುಟ್ಟಿದ್ದರು. ಅವರಂಥ ಬುದ್ಧಿವಂತರಿಗೆ ಅದೇ ಸಾಕಷ್ಟು ಮನೋವೇಧಕ ವಿಷಯವಾಗಿತ್ತು. ತಮ್ಮ ವಿದ್ಯಾಬುದ್ಧಿಗಳನ್ನು

ಮೆರಸಿದ ಮೇಲೂ ಮೇಲ್ಜಾತಿಯವರಿಂದ ನೇರವಾದ ಅವಮಾನಗಳನ್ನು ಸಹಿಸುವ ಪ್ರಸಂಗ ಮೇಲಿಂದ ಮೇಲೆ ಬರುತ್ತಿದ್ದುದಂತೂ ಅವರನ್ನು ಸಹನಾತೀತವಾಗಿ ನೋಯಿಸಿತ್ತು.

ಅವರ ತಂದೆ ರಾಮರಾವ್ ಅಂಬೇಡಕರರು ಬ್ರಿಟಿಶ ಸೈನ್ಯದಲ್ಲಿ ಸುಭೇದಾರಾಗಿದ್ದರು. ಸೈನ್ಯದ ಸಂಪರ್ಕದಿಂದ ಹೊಸ ವಿಚಾರಗಳ ಪ್ರಭಾವಕ್ಕೊಳಗಾದ ಅವರು ಮಗನನ್ನು ಸುಶಿಕ್ಷಿತನನ್ನಾಗಿ ಮಾಡಲು ಹಂಬಲಿಸಿ ಅದಕ್ಕೆ ಅನುಕೂಲ ಸ್ಥಳವೆಂದು ಸಾತಾರೆಯಲ್ಲಿ ನೆಲಸಿದರು. ಅಲ್ಲಿನ ಸಾಲೆಯಲ್ಲಿ ಎಳೆಯ ಅಂಬೇಡಕರರಿಗೆ ಪ್ರವೇಶವೇನೋ ಸಿಕ್ಕಿತು. ಅವರು ವರ್ಗದ ಅತಿ ಬುದ್ಧಿಶಾಲಿ ವಿದ್ಯಾರ್ಥಿಗಳಲ್ಲೊಬ್ಬರಾಗಿದ್ದರು. ಆದರೆ ಇದು ಅವರ ಅಸ್ಪೃಶ್ಯತೆಯನ್ನುಲೇಶವೂ ಕುಂದಿಸಲಿಲ್ಲ. ಅವರು ವರ್ಗದ ಮೂಲೆಯೊಂದರಲ್ಲಿ ಬೇರೆಯೇ ಕುಳಿತಿರಬೇಕಾಗಿತ್ತು. ಅವರ "ಮೈಲಿಗೆ" ಲೇಖನ ಪುಸ್ತಕವನ್ನು ಮಾಸ್ತರರು ತಿದ್ದುತ್ತಿರಲಿಲ್ಲ. ನೀರಡಿಕೆಯಾದರೆ ಮೇಲ್ಜಾತಿಯವರಿಂದ ಬೊಗಸೆಯಲ್ಲಿ ನೀರು ಹಾಕಿಸಿಕೊಂಡು ಕುಡಿಯಬೇಕಾಗಿತ್ತು. ಉಳಿದ ಮಕ್ಕಳು ಆಟಪಾಟಗಳಲ್ಲಿ ನಲಿಯುತ್ತಿರುವಾಗ ಅಂಬೇಡಕರರು ದೂರ ನಿಂತು ನಿರಾಶೆಯಿಂದ ನೋಡಬೇಕಾಗುತ್ತಿತ್ತು.

ಇಷ್ಟಾದರೂ ಭೀಮರಾಯರು ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗೆದ್ದು ಸ್ಕಾಲರಶಿಪ್ ಪಡೆದು ಮುಂಬಯಿಯ ಎಲ್‌ಫಿನ್‌ಸ್ಟನ್ ಹೈಸ್ಕೂಲು ಸೇರಿದರು. ಮುಂದುವರಿದ ಮುಂಬಯಿಯಲ್ಲೂ ಅವರ ಅಸ್ಪೃಶ್ಯತೆ ಹಿಂಗಲಿಲ್ಲ. ಒಮ್ಮೆ ಮಾಸ್ತರರು ಬೋರ್ಡಿನ ಮೇಲೆ ಲೆಕ್ಕ ಮಾಡಿ ತೋರಿಸಲು ಅವರಿಗೆ ಹೇಳಿದಾಗ ಬೋರ್ಡಿನ ಹತ್ತಿರ ಇದ್ದ ತಮ್ಮ ಬುತ್ತಿ ಮೈಲಿಗೆಯಾಗುವುದೆಂದು ಕೂಗುತ್ತ ಇತರ ಹುಡುಗರು ಓಡಿ ತಂತಮ್ಮ ಬುತ್ತಿಗಳನ್ನು ಎತ್ತಿಕೊಂಡು ಬಂದರು. ಆ ಮೇಲೆಯೇ ಅಂಬೇಡಕರರಿಗೆ ಬೋರ್ಡು ಮುಟ್ಟಲು ಅನುಮತಿ ಸಿಕ್ಕಿತು.

ಬುದ್ಧಿ ಬಲಿತಂತೆ ಅಂಬೇಡಕರರಿಗೆ ತಮ್ಮ ಜನರ 'ವಿಪನ್ನಾವಸ್ಥೆಯ ಅರಿವು' ಹೆಚ್ಚಾಗುತ್ತ ಹೋಯಿತು. ಅವರು ಕೆರಳುತ್ತಿದ್ದರು. "ಶಿಕ್ಷಣವೊಂದೇ ಇವರಿಗೆ ತರಣೋಪಾಯ" ಎಂದು ತಂದೆಗೆ ಹೇಳುತ್ತಿದ್ದರು.

ಬಡೋದೆಯ ಗಾಯಕವಾಡರು ಬುದ್ಧಿವಂತ ಅಂಬೇಡಕರರ ಸುದ್ದಿ ಕೇಳಿ ಮುಂಬಯಿಯಲ್ಲಿ ಕಾಲೇಜು ಶಿಕ್ಷಣ ಮುಗಿಸಲು ಮತ್ತು ಅನಂತರ ಅಮೇರಿಕದ ಕೊಲಂಬಿಯಾ ವಿಶ್ವವಿದ್ಯಾಲಯದಲ್ಲಿ ಉಚ್ಚಶಿಕ್ಷಣ ಮುಂದುವರಿಸಲು ಧನಸಹಾಯವಿತ್ತರು. ಎಲ್ಲ ಕಡೆ ಅಂಬೇಡಕರರು ತಮ್ಮ ಕೌಶಲವನ್ನು ಪ್ರಕಟಿಸಿದರು. ಕೊಲಂಬಿಯಾದಲ್ಲಿ ಅವರು ಇತಿಹಾಸ, ಮಾನವಶಾಸ್ತ್ರ, ಸಮಾಜಶಾಸ್ತ್ರ, ಮನಶ್ಶಾಸ್ತ್ರ ಮತ್ತು ಅರ್ಥಶಾಸ್ತ್ರದಲ್ಲಿ ಪಾರಂಗತರಾದರು. ೧೯೧೭ ರಲ್ಲಿ ಅವರು ಅವಶ್ಯಕ್ಕಿಂತ ಇಮ್ಮಡಿ ಗುಣಗಳಿಂದ "ಡಾಕ್ಟರ್ ಆಫ್ ಫಿಲಾಸಫಿ" ಪದವಿ ಗಳಿಸಿದರು. ಮುಂದೆ ಲಂಡನ್ ಹಾಗು ಜರ್ಮನಿಯಲ್ಲಿ ಮತ್ತೂ ಶಿಕ್ಷಣ ಹೊಂದಿ ಅವರು ಭಾರತಕ್ಕೆ ಮರಳಿದರು.

ಅಂಬೇಡಕರರನ್ನು ತಮ್ಮ ಹಣಕಾಸಿನ ಮಂತ್ರಿಯಾಗಿ ಮಾಡಿಕೊಳ್ಳಲು ಗಾಯಕವಾಡರು ಬಯಸಿದರು. ಆರ್ಥಿಕ ಶಾಖೆಯಲ್ಲಿ ಅವರಿಗೊಂದು ಆಸನವೊದಗಿಸಲಾಯಿತು. ಅಂಬೇಡಕರರು ತಮ್ಮ ಕಚೇರಿಯನ್ನು ಪ್ರವೇಶಿಸುತ್ತಿದ್ದಾಗ ಅವರ ಹೃದಯ ಇಷ್ಟಾರ್ಥ ಸಿದ್ಧಿಯ ಆನಂದದಿಂದ ತುಂಬಿತ್ತು. ತಮ್ಮ ವಿದ್ಯೆ ತಮ್ಮ ನೀಚ ಜಾತಿಯನ್ನು ತೊಡೆದುಹಾಕಿತ್ತೆಂದು ಅವರು ನಂಬಿದ್ದರು. "ಆಹಾ ನಾನಿನ್ನು ಅಸ್ಪೃಶ್ಯನಲ್ಲ, ಸಮಾಜದಲ್ಲಿ ಗಣ್ಯ ವ್ಯಕ್ತಿ" ಎಂದುಕೊಂಡರವರು.

ಆದರೆ ಅಂದು ಅವರು ಸಚಿವಾಲಯದಿಂದ ಹೊರಬೀಳುವಾಗ "ಮೂರ್ಖರೇ, ನಾನಿನ್ನೂ ಅಸ್ಪೃಶ್ಯನಾಗಿಯೇ ಉಳಿದಿದ್ದೇನಲ್ಲವೆ?" ಎಂದು ಅಂತರಂಗದಲ್ಲಿ ಆಕ್ರೋಶ ಮಾಡಬೇಕಾಯಿತು.

ಅವರ ಕಚೇರಿಯ ಆರ್ಡರ್ಲಿ ಮೇಲ್ಜಾತಿಯವನಿದ್ದ. ಅವನು ಅಂಬೇಡಕರರಿಗೆ ತೋರಿಸಬೇಕಾದ ಕಾಗದ ಪತ್ರಗಳ ಟ್ರೇಯನ್ನು ಮೇಜಿನ ಮೇಲೆ ಕೋಲಿನಿಂದ ಅವರ ಕಡೆ ಸರಿಸಿದ್ದ. (ಕೆಲವರು ಕಾಗದ ಪತ್ರಗಳ ಫೈಲನ್ನು ದೂರ

ದಿಂದ ಅವರ ಮೇಜಿನ ಮೇಲೆ ಒಗೆದಿದ್ದನೆನ್ನುತ್ತಾರೆ.) ಅಂಬೇಡಕರರು ಆಶ್ಚರ್ಯದಿಂದ ಕೇಳಿದ್ದರು— "ಯಾಕೆ ಹೀಗೆ?" ಅವರ ಆರ್ಡರ್ಲಿ, "ಕ್ಷಮಿಸಿರಿ. ನೀವು ಇದನ್ನು ಮುಟ್ಟುತ್ತೀರಿ. ನಾನು ಅದನ್ನು ಮುಟ್ಟಿದರೆ ಸ್ನಾನ ಮಾಡಬೇಕಾಗುತ್ತದೆ" ಎಂದಿದ್ದ.

ಅಂಬೇಡಕರರ ಜೀವನದಲ್ಲಿ ಈ ಘಟನೆ ಅಳಿಸಲಾರದಂತೆ ಅಚ್ಚೊತ್ತಿಬಿಟ್ಟಿತು. ಆರು ದಿನ ಅವರು ಸಚಿವಾಲಯದಲ್ಲಿ ಏನೂ ಕೆಲಸವಿಲ್ಲದೆ ಕಳೆದರು. ಆಮೇಲೆ ತಾಳಲಾರದೆ ಗಾಯಕವಾಡರ ಅನುಮತಿ ಪಡೆದು ಸಾರ್ವಜನಿಕ ಲೈಬ್ರರಿಯಲ್ಲಿ ಓದುತ್ತ ಹೊತ್ತು ಕಳೆದು ಕೊನೆಗೆ ಬಡೋದೆಗೆ ಶರಣು ಹೊಡೆದರು.

ಭಾರತದ ಅತಿಶಯ ವಿದ್ಯಾಬುದ್ಧಿಶಾಲಿಗಳಲ್ಲೊಬ್ಬರಾದ ಅಂಬೇಡಕರರು ಕೆಲಸವಿಲ್ಲದೆ ಬಡತನ ಕ್ಲೇಶಗಳಲ್ಲಿ ಒಂದೂವರೆ ವರ್ಷ ನವೆದ ನಂತರ ಮುಂಬಯಿ ಸಿಡೆನ್‌ಹ್ಯಾಮ್ ಕಾಲೇಜಿನಲ್ಲಿ ರಾಜಕೀಯ-ಅರ್ಥಶಾಸ್ತ್ರದ ಪ್ರಾಧ್ಯಾಪಕರಾದರು. ಕೆಲ ಕಾಲದ ನಂತರ ಅವರು ಮತ್ತೆ ಇಂಗ್ಲಂಡಿಗೆ ತೆರಳಿ ಲಂಡನ್ ಅರ್ಥಶಾಸ್ತ್ರ ಶಾಲೆಯ ಡಾಕ್ಟರೇಟ್ ಪದವಿಯನ್ನು ಪಡೆದದ್ದಲ್ಲದೆ ಬ್ಯಾರಿಸ್ಟರರಾಗಿ ೧೯೨೩ ರಲ್ಲಿ ತಿರುಗಿ ಬಂದರು. "ರೂಪಾಯಿಯ ಸಮಸ್ಯೆ" ಎಂಬ ಅವರ ಅರ್ಥಶಾಸ್ತ್ರದ ಪುಸ್ತಕವು ಸಾರ್ವತ್ರಿಕ ಹೊಗಳಿಕೆಯನ್ನು ಪಡೆಯಿತು.

ವಕೀಲಿ ಪ್ರಾರಂಭಿಸಿದ ಮೇಲೂ ಅವರ ಜಾತಿ ಅವರನ್ನು ಬಿಡಲಿಲ್ಲ. ಹೈಕೋರ್ಟಿನಲ್ಲಿ ಯಾವ ಸಾಲಿಸಿಟರನೂ ಅವರಿಗೆ ಪ್ರಕರಣಗಳನ್ನು ಕೊಡಲೊಪ್ಪಲಿಲ್ಲ. ಜಿಲ್ಲಾ ಕೋರ್ಟಿನಲ್ಲಿ ಅವರು ಪ್ರಾಕ್ಟೀಸು ಪ್ರಾರಂಭಿಸಿದಾಗ ಅವರ ಅಪೀಲು ಪ್ರಕರಣಗಳನ್ನು ನಿರ್ವಹಿಸಲು ಹೈಕೋರ್ಟಿನ ಬ್ಯಾರಿಸ್ಟರರಾರೂ ಸಿದ್ಧರಾಗಲಿಲ್ಲ. ಕೊನೆಗೆ ಅದ ಕ್ಕೊಪ್ಪಿದ ಬ್ರಾಹ್ಮಣ ಬ್ಯಾರಿಸ್ಟರನು ತನ್ನ ವೃತ್ತಿಬಂಧುಗಳ ಬಹಿಷ್ಕಾರಕ್ಕೊಳಗಾಗಬೇಕಾಯಿತು.

ಡಾ. ಅಂಬೇಡಕರರನ್ನು ಅಂತ್ಯ ಕಾಲದ ವರೆಗೂ ಆವರಿಸಿದ್ದ ವಿರೋಧ ಮನೋಭಾವದ ಮೂಲ ಅವರ ಈ ಅನುಭವಗಳಲ್ಲಿದೆ. ದಕ್ಷಿಣ ಆಫ್ರಿಕದಲ್ಲಿ ಗಾಂಧೀಜಿಯನ್ನು ಎದುರಿಸಿದ್ದು ಇಂಥದೇ ಪರಿಸ್ಥಿತಿ. ಆದರೆ ಅವರ ಹೋರಾಟ ಮಹಾತ್ಮರ ವ್ಯಕ್ತಿತ್ವವನ್ನವಲಂಬಿಸಿ ಒಂದು ದಾರಿ ಹಿಡಿದರೆ, ಅಂಬೇಡಕರರ ವ್ಯಕ್ತಿತ್ವದ ಫಲವಾಗಿ ಅವರದು ಒಂದು ಪ್ರತೀಕಾರ ಭಾವವನ್ನು ತಾಳಿತು. ಅವರು ತಮ್ಮನ್ನು ದೂರವಿರಿಸಿದ ಬ್ಯಾರಿಸ್ಟರರ ಕಡೆ ಮುಷ್ಟಿ ಅಲುಗಿಸುತ್ತ, "ಒಂದಲ್ಲ ಒಂದು ದಿನ ನಾನು ಈ ನ್ಯಾಯಾಸನದ ಮೇಲೆ ಆಸೀನನಾಗಲಿದ್ದೇನೆ. ಆಗ ನೀವೇ ನನ್ನನ್ನು 'ಮಿಲಾರ್ಡ್' ಎಂದು ಸಂಬೋಧಿಸುವಿರಿ!" ಎನ್ನುತ್ತಿದ್ದರು. ತಮ್ಮೀ ಕನಸನ್ನು ನನಸು ಮಾಡುವ ಸಂಧಿ ಅವರಿಗೆ ೧೯೪೨ ರಲ್ಲಿ ಬಂತು. ಅವರಿಗೆ ಹೈಕೋರ್ಟ್ ಜಜ್ಜ ಪದ ಕೊಡಮಾಡಲಾಯಿತು. ಆದರೆ ವೈಸರಾಯರ ಮಂತ್ರಿಮಂಡಲ ಸೇರುವ ಸಂದರ್ಭ ಬಂದದ್ದರಿಂದ ಆವರೀ ಸಂಧಿಯನ್ನು ತ್ಯಜಿಸಬೇಕಾಯಿತು.

ಶಿಕ್ಷಣವಿಲ್ಲದೆ, ತಾವು ಮಾಡುತ್ತಿದ್ದ ನೀಚವೆನಿಸಿದ ಕಸುಬನ್ನು ತ್ಯಜಿಸಿ ಬೇರೆ ವ್ಯವಸಾಯಗಳನ್ನು ಸೇರಿದ ಹೊರತು, ಅಸ್ಪೃಶ್ಯ-ಬಾಂಧವರಿಗೆ ತಮ್ಮ ಅವಮಾನಕರ ತುಚ್ಛ ಸ್ಥಾನದಿಂದ ವಿಮೋಚನೆಯಿಲ್ಲೆಂದು ಅಂಬೇಡಕರರು ಭಾವಿಸುತ್ತಿದ್ದರು. ತಮ್ಮ ಜಾತಿಬಂಧುಗಳನ್ನು ಉದ್ಧರಿಸಲೆಂದು ಮುಂಬಯಿಯಲ್ಲಿ ಅವರು "The People" ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಪೀಪಲ್ಸ್ ಎಜ್ಯುಕೇಶನ್ ಟ್ರಸ್ಟನ್ನು ಪ್ರಾರಂಭಿಸಿ ಸಿದ್ಧಾರ್ಥ ಕಾಲೇಜನ್ನು ತೆರೆದರು. ಅಲ್ಲಿಂದು ಸರ್ವಜಾತಿಗಳ ೨,೫೦೦ ಕ್ಕಿಂತ ಹೆಚ್ಚು ವಿದ್ಯಾರ್ಥಿಗಳು ನಾನಾ ವಿದ್ಯೆಗಳನ್ನು ಅಭ್ಯಸಿಸುತ್ತಿದ್ದಾರೆ.

ಅವರು ತಮ್ಮ ಅನುಭವಗಳ ಕ್ರೂರ ಬೆಳಕಿನಲ್ಲಿ ಹರಿಜನೋದ್ಧಾರಕ್ಕಾಗಿ ಹೋರಾಡುತ್ತ ಹೋದರು. ಅವರು ಜೀವನದ ಕೊನೆಯ ಹತ್ತಿಪ್ಪತ್ತು ವರ್ಷಗಳನ್ನು ನೋಡಿದರೆ ಆ ಕ್ರೂರ ಬೆಳಕು ಅವರ ವ್ಯಕ್ತಿತ್ವದಲ್ಲಿ ಉಂಟುಮಾಡಿದ ದ್ವಂದ್ವವನ್ನು ಸ್ಪಷ್ಟವಾಗಿ ಗುರುತಿಸಬಹುದು.

ಅವರ ಹೃದಯದಲ್ಲಿ ದೇಶಭಕ್ತಿ ತುಂಬಿತ್ತು; ಮೆದುಳಿನಲ್ಲಿ ಪ್ರತೀಕಾರ ವೃತ್ತಿ ಇತ್ತು. ಅವರ ಪ್ರತಿಕಾರ ವೃತ್ತಿಯು ಭಾರತದ ರಾಷ್ಟ್ರೀಯತೆಯನ್ನು ಮುರಿಯುವ ಬ್ರಿಟಿಶರ ಹಂಚಿಕೆಯಲ್ಲಿ ಬಹುದೂರ ಸಹಕರಿಸುವಂತೆ ಅವರನ್ನು ಪ್ರೇರಿಸಿತು. ಅವರು ಸವರ್ಣ ಹಿಂದುಗಳನ್ನು ನಂಬಲು ಸಿದ್ಧರಾಗಲಿಲ್ಲ. ಗಾಂಧೀಜಿ ಅಸ್ಪೃಶ್ಯತಾ ನಿವಾರಣೆಯ ಪಣ ತೊಟ್ಟಿದ್ದರೂ ಅಂಬೇಡಕರರಿಗೆ ವಿಶ್ವಾಸವಾಗಲಿಲ್ಲ. ಬ್ರಿಟಿಶರು ಹೋದರೆ ಅಸ್ಪೃಶ್ಯರು ತಿರುಗಿ ದಬ್ಬಾಳಿಕೆಗೆ ಗುರಿಯಾಗುವರೆಂದು ಅವರು ನಂಬಿದ್ದರು. ಆದರೆ ಸಂಧಿಕಾಲದಲ್ಲೆಲ್ಲ ಅವರ ಪ್ರತೀಕಾರ ಭಾವದ ಮೇಲೆ ದೇಶಭಕ್ತಿಯೇ ವಿಜಯ ಹೊಂದುತ್ತಿತ್ತು. ಗಾಂಧೀಜಿ ಹರಿಜನ ಉಪವಾಸ ಮಾಡಿದಾಗ ಅವರು ಹರಿಜನರ ಪ್ರತ್ಯೇಕ ಮತದಾರ ಸಂಘದ ಬೇಡಿಕೆಯನ್ನು ಬಿಟ್ಟುಕೊಡಲು ಸಿದ್ಧರಾದರು. ಭಾರತ ಸ್ವಾತಂತ್ರ್ಯ ಹತ್ತಿರ ಬಂದಾಗ ಅವರು ಅದನ್ನು ವಿರೋಧಿಸಲಿಲ್ಲ.

ಅಂಬೇಡಕರರ ಜೀವನದ ಕೊನೆಯ ೧೫ ವರ್ಷಗಳಲ್ಲಿ ವೈಯಕ್ತಿಕವಾಗಿ ಅವರ ಜೀವನ ಸಾರ್ಥಕ್ಯ ಸಾಕಷ್ಟಾಯಿತು. ೧೯೪೨ರಲ್ಲಿ ಅವರು ವೈಸರಾಯರ ಮಂತ್ರಿಮಂಡಲದಲ್ಲಿ ಸ್ಥಾನ ಪಡೆದರು. ೧೯೪೭ ರಲ್ಲಿ ಸ್ವತಂತ್ರ ಭಾರತದ ಪ್ರಥಮ ಕಾಯದೆ ಮಂತ್ರಿಗಳಾಗಿ ಅವರನ್ನು ಪ್ರಧಾನಮಂತ್ರಿ ನೆಹರೂ ಆರಿಸಿದರು.

ಅಂಬೇಡಕರರ ಜೀವನದ ಪರಮ ಸಾರ್ಥಕ್ಯವೆಂದರೆ ಭಾರತದ ರಾಜ್ಯಘಟನೆಯ ಕರಡನ್ನು ರಚಿಸುವ ಅವಕಾಶ ಅವರಿಗೆ ಲಭಿಸಿದ್ದು. "ಅಸ್ಪೃಶ್ಯತೆಯನ್ನು ರದ್ದುಪಡಿಸಲಾಗಿದೆ. ಅದನ್ನು ಯಾವುದೇ ರೂಪದಲ್ಲಿ ಆಚರಿಸುವುದು ದಂಡನೀಯ ಅಪರಾಧವಾಗಿದೆ" ಎಂದು ಈ ಘಟನೆಯಲ್ಲಿ ಬರೆದ ವಾಕ್ಯದ ಬಹ್ವಂಶ ಕೀರ್ತಿ ಗಾಂಧೀಜಿ ಹಾಗು ಕಾಂಗ್ರೆಸ್ಸಿಗೆ ಹೋದರೆ ಅಂಬೇಡಕರರಿಗೂ ಒಂದಂಶ ಸಲ್ಲಬೇಕು.

ಅದೇ ಮೇರೆಗೆ ಅಂಬೇಡಕರರು ಹಿಂದೂ ಕಾಯದೆಯ ಕ್ರೋಡೀಕರಣದ ಕರ್ಣಧಾರರೂ ಆದರು. ಹಿಂದೂ ಸಮಾಜದಿಂದ ತಿರಸ್ಕೃತನಾದ ಅಸ್ಪೃಶ್ಯನೊಬ್ಬನು ಆ ಸಮಾಜದ ಕಾಯದೆಯನ್ನು ಪುನಾರಚಿಸಿ "ಆಧುನಿಕ ಮನು" ಎನಿಸಿದ್ದು ಕಾಲರಾಯನ ಪ್ರತಿಕಾರವೇ ಸೈ.

೬೩ ವರ್ಷದ ಜೀವನದಲ್ಲಿ ಅಂಬೇಡಕರರು ಬಹುಶಃ ಜಗತ್ತಿನ ಬೇರಾವ ಸಮಾಜದಲ್ಲೂ ಕಾಣದಷ್ಟು ಪರಿವರ್ತನೆಯನ್ನು ಭಾರತದಲ್ಲಿ ಕಂಡರು. ಸಾತಾರೆಯಲ್ಲಿ ಕ್ಲಾಸಿನ ಮೂಲೆಯಲ್ಲಿ ಕುಳಿತು ಕಲಿತ ಆ ವಿದ್ಯಾರ್ಥಿಗೆ ಅಪರ ವಯಸ್ಸಿನಲ್ಲಿ ಮೇಲ್ಜಾತಿಯ ಡಾಕ್ಟರಳೊಬ್ಬಳು ವಧುವಾಗಿ ಬಂದಳು. ಅವರ ಜೀವನದ ವಿಜಯ ನಿಜವಾಗಿ ಮಹತ್ತರವಾದುದಿತ್ತು. ಆದರೆ ಅವರು ಕೊನೆಗೂ ಅಸುಖಿ-ಅಸಂತುಷ್ಟ-ಕೋಪಪೀಡಿತರಾಗಿಯೇ ಸತ್ತರು. ಅಸ್ಪೃಶ್ಯರ ಉದ್ಧಾರ ಸಾಕಷ್ಟು ತೀವ್ರವಾಗಿ ಆಗುತ್ತಿಲ್ಲೆಂಬ ಅಭಿಪ್ರಾಯದೊಡನೆ, ಅವರ ಅಂತರಂಗದ ಅಜ್ಞಾತ ಕುಹರಗಳಲ್ಲಿ ಹುದುಗಿದ್ದ ಹಳೆಯ ತಪ್ಪುಗಳ ಪ್ರತೀಕಾರ ಬುದ್ಧಿಯೂ ಇದಕ್ಕೆ ಕಾರಣವಾಗಿತ್ತು. ಅವರ ಬೌದ್ಧ ಧರ್ಮ ಸ್ವೀಕಾರವು ಹಿಂದೂ ಸಮಾಜದ ಹಿಂದಿನ ಪಾಪಗಳಿಗೆ ತಡವಾಗಿ ಬಂದ ಒಂದು ಪ್ರಾಯಶ್ಚಿತ್ತವಾಗಿದೆ.

ಡಾ. ಅಂಬೇಡಕರರ ಜೀವನದ ಕರುಣ ಕಥೆ ಮತ್ತು ಅದರಿಂದ ದೇಶಕ್ಕೆ ಆದ ಹಾನಿ ನಮ್ಮೆಲ್ಲರ ಹೊಣೆಯಾಗಿದೆ. ಸಾವಿರಾರು ವರ್ಷಗಳ ಸಂಪ್ರದಾಯ ಕ್ಷಣದಲ್ಲಿ ನಷ್ಟವಾಗಬೇಕೆಂದು ಅವರು ನಿರೀಕ್ಷಿಸಿದ್ದು ತಪ್ಪೆಂದು ನಮಗೆ ತೋರಬಹುದು. ಅಸ್ಪೃಶ್ಯತೆ ಭಾರತದಿಂದ ಮಾಯವಾಗುತ್ತಿದೆಯೆಂದು ಮನಗಂಡ ಮೇಲೂ ಅವರು ತಮ್ಮ ವಿರೋಧವನ್ನು ಮುಂದುವರಿಸಿ ತಮ್ಮ ಸಹಧರ್ಮೀಯರನ್ನು ಮತಾಂತರಕ್ಕೆ ಪ್ರೇರಿಸಿದ್ದು ಸರಿಯಲ್ಲೆಂದು ನಾವು ಹೇಳಬಹುದು. ಆದರೆ ಅನ್ಯಾಯಕ್ಕೊಳಗಾದವರಿಗೆ ತಾಳ್ಮೆಯನ್ನು ಬೋಧಿಸಿ ಏನು ಫಲ? ಅಂಬೇಡಕರರ ಜೀವನದ ಪಾಠ ಸ್ಪಷ್ಟವಾಗಿದೆ. ಒಂದು ದೇಶ ತನ್ನ ಪ್ರಜೆಗಳಲ್ಲಿ ಹಲವರನ್ನು ತುಚ್ಛರೆಂದು ಬಗೆದು ಎಂದೂ ಸುರಕ್ಷಿತವಾಗಿರಲಾರದು. ✻

ಇಬ್ಬರು ತ್ರಿಲೋಕವೀರರನ್ನು ತ್ರಿಮುಷ್ಟಿಯಲ್ಲಿಟ್ಟುಕೊಂಡ ಪೌರಸ್ತ್ಯ ಮಾಯಾವಿನಿ—

# ಕ್ಲಿಯೋಪಾತ್ರಾ

ವಿವಿಧ ಆಧಾರಗಳಿಂದ



ಮಹಾಪುರುಷರನ್ನು ಬೆರಳ ಸನ್ನೆಗೆ ಕುಣಿಸಿದ ರಮಣಿಯರು ಇತಿಹಾಸದಲ್ಲಿ ಎಷ್ಟೋ ಇರುವರು. ಆದರೆ ಇಜಿಪ್ತದ ಕ್ಲಿಯೋಪಾತ್ರಾ ಅವರನ್ನೆಲ್ಲ ಮೀರಿಸಿದವಳು.

ಅವಳು ಬದುಕಿದ್ದುದು ಎರಡು ಸಾವಿರ ವರ್ಷಗಳ ಹಿಂದೆ. ಆದರೆ ಅವಳ ಕೀರ್ತಿ ಇಂದಿಗೂ ಉಳಿದಿದೆ. ರೋಮನ್ ಸಾಮ್ರಾಜ್ಯದ ಇಬ್ಬರು ಅಪ್ರತಿಮ ವೀರರನ್ನು ಅವಳು ಒಬ್ಬರ ಬಳಿಕ ಒಬ್ಬರಂತೆ ತನ್ನ ಮೋಹಪಾಶದಲ್ಲಿ ಬಿಗಿದು ಕುಣಿಸಿದಳು. ಅವರ ಪತನಕ್ಕೂ ಕಾರಣವಾದಳು. ಕೊನೆಗೆ ವಿಷಪಾನ ಮಾಡಿ ಜೀವನವನ್ನು ಕೊನೆಗಾಣಿಸಿದಳು. ಆಗ ಅವಳಿಗೆ ೩೯ ವರ್ಷಗಳು ಮಾತ್ರ.

ಕ್ಲಿಯೋಪಾತ್ರಳ ವಶವರ್ತಿಗಳಾದ ರೋಮನ್ ವೀರರ ಹೆಸರುಗಳನ್ನು ಎಲ್ಲ ಶಾಲಾ ಬಾಲಕರೂ ಬಲ್ಲರು — ಒಬ್ಬ ವಿಶ್ವವಿಜಯಿ ಜೂಲಿಯಸ್ ಸೀಜರ; ಮತ್ತೊಬ್ಬ ಅಷ್ಟೇ ಪ್ರತಾಪಿಯಾದ ಮಾರ್ಕ್ ಆಂಥನಿ.



ಯುರೋಪನ್ನೆಲ್ಲ ಗೆದ್ದ ಜೂಲಿಯಸ್ ಸೀಜರ ಇಜಿಪ್ತದ ಮೇಲೂ ದಂಡಯಾತ್ರೆ ಕೈಕೊಂಡಿದ್ದ. ಅವನು ಅಲೆಗ್ಝಾಂಡ್ರಿಯದಲ್ಲಿ ಬಂದು ತಳವೂರಿದ. ಅದು ಕ್ರಿ. ಪೂ. ೪೮ ನೇ ವರ್ಷ. ಅಲ್ಲಿ ವಿಲಕ್ಷಣ ಪರಿಸ್ಥಿತಿಯಲ್ಲಿ ಕ್ಲಿಯೋಪಾತ್ರಳನ್ನು ಅವನು ಕಂಡ; ಕೂಡಲೆ ಅವನ ಮನಸು ಅವಳಲ್ಲಿ ನಟ್ಟುಬಿಟ್ಟಿತು.

ಕ್ಲಿಯೋಪಾತ್ರಾ ಇಜಿಪ್ತದ ರಾಣಿ. ಅವಳ ಸೌಂದರ್ಯ ಆಗಲೇ ಮೂರು ಖಂಡಗಳಲ್ಲಿ ಪ್ರಖ್ಯಾತವಾಗಿತ್ತು. ಅವಳನ್ನು ನೀಲ ನದಿಯ ಮೋಹಿನಿ ಎಂದು ಕರೆಯುತ್ತಿದ್ದರು. ಆದರೆ ಆಗ ಅವಳು ರಾಜ್ಯ ಕಳೆದುಕೊಂಡು ದೇಶಭ್ರಷ್ಟಳಾಗಿ ತಲೆ ಮರೆಸಿಕೊಂಡಿದ್ದಳು. ಸಿಕ್ಕಿಬಿದ್ದರೆ ಅವಳ ರುಂಡವೇ ಹಾರಬಹುದಾಗಿತ್ತು.

ಇದಕ್ಕೆ ಕಾರಣ ಕೌಟುಂಬಿಕ ಕಲಹ. ಅವಳು (ಇಜಿಪ್ತದ ಆಗಿನ ರೂಢಿಯಂತೆ) ತನ್ನ ಅಣ್ಣನನ್ನೇ ಮದುವೆಯಾಗಿದ್ದಳು. ಆದರೆ ಅವನಿಗೂ ಅವಳಿಗೂ ಜಗಳವಾಗಿ ಯುದ್ಧದಲ್ಲಿ ಪರಿಣಮಿಸಿ ಅವಳನ್ನು ಈ ಗತಿಗೆ ತಂದೊಡ್ಡಿತ್ತು.

ಸೀಜರ ಮಹಾ ಲಂಪಟ. ಅವಳ ಚೆಲುವಿನ ವಾರ್ತೆ ಕಿವಿಗೆ ಬಿದ್ದೊಡನೆ ಬಂದು ತನ್ನ ಮುಂದೆ ನಿಲ್ಲಬೇಕೆಂದು ಆಜ್ಞಾಪಿಸಿದ. ಅವಳಿಗೂ ಸೀಜರನನ್ನು ಕಾಣುವ ಆತುರವಿತ್ತು. ಆದರೆ ಅಲೆಗ್ಝಾಂಡ್ರಿಯದಲ್ಲೆಲ್ಲ ಅವಳ ಗಂಡಅಣ್ಣನ ಗುಪ್ತಚಾರರಿದ್ದರು. ಹಗಲಲ್ಲಿ ನಗರದಲ್ಲಿ ಕಾಣಿಸಿಕೊಂಡರೆ ಅವಳ ಅವತಾರಸಮಾಪ್ತಿಯೇ ಸೈ. ಆದರಿಂದ ಅವಳು ಒಂದು ರಾತ್ರಿ ಒಂದು ಚಿಕ್ಕ ದೋಣಿಯ ಮೂಲಕ ನಗರದಲ್ಲಿ ಪ್ರವೇಶಿಸಿ, ಅರಮನೆಗೆ ಹೋಗಲಿದ್ದ ರತ್ನಗಂಬಳಿಯ ಸುರುಳಿಯಲ್ಲಿ ತನ್ನನ್ನು ಸುತ್ತಲು ಸೇವಕಿಗೆ ಹೇಳಿದಳು.

ಅರಮನೆಯಲ್ಲಿ, ಸೀಜರನ ಮುಂದೆ ಆ ಕಂಬಳಿ ಬಿಚ್ಚಿದೊಡನೆ ಕ್ಲಿಯೊಪಾತ್ರಾ ದಿಗ್ಗನೆದ್ದು ಅವನ ಮುಂದೆ ಕಿಲಕಿಲ ನಗುತ್ತ ಅವನ ಮೇಲೆ ಸಮ್ಮೋಹನಿ ಬೀರಿದಳು.

ಚೆಲುವೆಯರು ಸೀಜರನಿಗೆ ಹೊಸಬರಾಗಿದ್ದಿಲ್ಲ. ಆದರೆ ಇದು ಅವನ ಎಲ್ಲ ಎಣಿಕೆಗಳನ್ನು ಮೀರಿಸಿದ ಲಾವಣ್ಯವಾಗಿತ್ತು. ಅವನಿಗಾಗ ೫೪ ವರ್ಷ. ಅವಳು ೨೧ ವರ್ಷದ ಉದ್ದಾಮ ಯೌವನದ ತರಂಗದಂತಿದ್ದಳು. ಲೋಕೈಕವೀರ ಸೀಜರ ಆ ಕ್ಷಣ ಅವಳ ದಾಸಾನುದಾಸನಾದ.

ಸೀಜರ ಅವಳ ಕರುಣಕಥೆಯನ್ನು ಕೇಳಿದ. ಅವಳ ಅಣ್ಣನ ಇಜಿಪ್ಶಿಯನ್ ಸೇನೆಯನ್ನು ಧೂಳೀಪಟ ಮಾಡಲು ಅವನಿಗೆ ಬಹಳ ಹೊತ್ತು ಹಿಡಿಯಲಿಲ್ಲ. ಆ ಬಡಪಾಯಿ ಪಲಾಯನ ಮಾಡಿ ನೀಲ ನದಿಯಲ್ಲಿ ಮುಳುಗಿ ಸತ್ತ.

ಅಂದಿನಿಂದ ಕ್ಲಿಯೋಪಾತ್ರಾ ಇಜಿಪ್ತದ ಮತ್ತು ಸೀಜರನ ಹೃದಯದ ಎದುರಿಲ್ಲದ ಸಮ್ರಾಜ್ಞಿಯಾದಳು. ಅವಳ ಮೋಹಕತೆ, ಅವಳ ದೇಹಸೌಷ್ಠವದಲ್ಲಿ ಮಾತ್ರ ಇದ್ದಿಲ್ಲ. ಅವಳ ಬುದ್ಧಿಕೌಶಲದಲ್ಲೂ ಇತ್ತು.

ಹಾಗೆ ಕೇಳಿದರೆ ಕ್ಲಿಯೊಪಾತ್ರಾ ಅಂಥ ಅದ್ಭುತ ಸುಂದರಿಯಲ್ಲ. ಅವಳು ಸಿಕಂದರನ ಒಬ್ಬಾನೊಬ್ಬ ಸೇನಾಪತಿಯ ವಂಶಜಳು. ಮೈ ಕೆಸೆಯ ಬಣ್ಣದ್ದು. ನಿಲುವಿನಲ್ಲಿ ತುಸು ಕುಳ್ಳಗ; ದೇಹ ಸ್ವಲ್ಪ ಸ್ಥೂಲವೆನಿಸುವಂತಿತ್ತು. ಮೂಗು ಮುಖದ ಆಕೃತಿಗೆ ತುಸು ದೊಡ್ಡದೇ. ಕಣ್ಣುಗಳೂ ಕೂದಲೂ ಕಾಡಿಗೆಗಪ್ಪು. ಹೀಗೆ ಪಾಶ್ಚಾತ್ಯರಲ್ಲಿ ಸುರಸೌಂದರ್ಯದ ಲಕ್ಷಣಗಳೆನಿಸಿದ ಅನೇಕ ವಿಷಯಗಳ ಲೋಪ ಅವಳಲ್ಲಿತ್ತು.

ಜನರನ್ನು ಮುಗ್ಧಗೊಳಿಸುತ್ತಿದ್ದುದು ಅವಳ ಸೌಂದರ್ಯವೆಂಬುದಕ್ಕಿಂತಲೂ 'ಲಾವಣ್ಯ'ವೆಂಬ ಆ ವಿಲಕ್ಷಣ, ಅನಿರ್ವಚನೀಯ ಗುಣ. ಅವಳು ಅಲೆಗ್ಝಾಂಡ್ರಿಯದ ಬೀದಿಗಳಲ್ಲಿ ಐಸಿಸ್ ದೇವತೆಯ ವೇಷದಲ್ಲಿ ಹೊರಟಾಗ ಅವಳ ವ್ಯಕ್ತಿತ್ವದ ಕಾಂತಿ ಜನವನ್ನು ಮಂತ್ರಮೂಢರಾಗಿ ಮಾಡುತ್ತಿತ್ತು.

ಅವಳಲ್ಲಿ ಜೋಳುತಲೆಯ ಸೀಜರನಿಗೆ ಒಂದು ಗಂಡು ಮಗು ಹುಟ್ಟಿದ ಮೇಲಂತೂ ಅವನ ಸಂತೋಷಕ್ಕೆ ಪಾರವೇ ಉಳಿಯಲಿಲ್ಲ. ರೋಮಿನಲ್ಲಿದ್ದ ಅವನ ಹೆಂಡತಿ ಆ ವರೆಗೂ ಬಂಜೆಯೇ ಆಗಿದ್ದಳು. ರೋಮನ್ ಸಾಮ್ರಾಜ್ಯದ ಚಕ್ರವರ್ತಿಯಾಗಬೇಕೆಂದಿದ್ದ ಸೀಜರನಿಗೆ ಉತ್ತರಾಧಿಕಾರಿಯಿಲ್ಲದ ಕೊರತೆ ಕ್ಲಿಯೊಪಾತ್ರಳಿಂದ ದೂರವಾಯಿತು.

ಸೀಜರನ ಹೆಂಡತಿ ಜೀವಂತಳಾಗಿದ್ದಾಗ ಅವನು ಕ್ಲಿಯೋಪಾತ್ರಳನ್ನು ಮದುವೆಯಾಗು ವಂತಿರಲಿಲ್ಲ. ಆದರೆ ಅವಳು ಇಜಿಪ್ತದ ಪುರೋಹಿತರನ್ನು ಕರೆಸಿ ಸೀಜರನು ಮನುಷ್ಯನೇ ಅಲ್ಲೆಂದೂ ಇಜಿಪ್ತದ ದೇವಾಧಿದೇವನಾದ ಅಮ್ಮನ (ಸೂರ್ಯದೇವ) ನ ಸಾಕ್ಷಾತ್ ಅವತಾರವೆಂದೂ ಅವನು ದೇವಾಂಶಸಂಭೂತಳೇ ಆದ ಸಮ್ರಾಜ್ಞಿಗೆ ಸಂತಾನವೀಯಲೆಂದೇ ಮಾನುಷ ದೇಹ ಧರಿಸಿ ಬಂದವನೆಂದೂ ಘೋಷಿಸಲು ಹೇಳಿದಳು. ಪುರೋಹಿತರು ಹಾಗೇ ಮಾಡಿದರು; ಜನರು ನಂಬಿದರು.

ಹಸುಳೆಯೊಡನೆ ಇಜಿಪ್ತದ ರಾಣಿ ಸೀಜರನ ಬೆಂಬತ್ತಿ ರೋಮಿಗೆ ಹೋದಳು. ತನಗೆ ರೋಮನ್ ಸಮ್ರಾಜ್ಞಿಯಾಗುವ ಸೌಭಾಗ್ಯ ಕಾದಿದೆಯೆಂದು ಅವಳು ನಂಬಿದ್ದಳು. ಆದರೆ ಅಷ್ಟರಲ್ಲಿ ಸೀಜರನ ಕೊಲೆಯಾಯಿತು. ಅವಳು ಇಜಿಪ್ತಕ್ಕೆ ಮರಳಿದಳು.

ಕ್ಲಿಯೋಪಾತ್ರಳಿಗೆ ಕೈಗೆ ಬಂದ ತುತ್ತು ಬಾಯಿಗೆ ಬಾರದಂತಾಯಿತಷ್ಟೇ ಅಲ್ಲ, ಎರಡನೇ ಬಾರಿ ಅವಳ ರಾಜ್ಯಕ್ಕೆ ಗಂಡಾಂತರ ಬಂತು. ಸೀಜರನ ನಂತರ ಪ್ರಾಬಲ್ಯಕ್ಕೆ ಬಂದ ಮಾರ್ಕ್ ಆಂಥನಿ ಕುಡುಕ ಮತ್ತು ಅಸಂಸ್ಕೃತ ಮನುಷ್ಯ. ಅವನ ಹೆಚ್ಚುಗಳಿಗೆ ಲೆಕ್ಕವೇ ಇರಲಿಲ್ಲ. ಅವನು ತನ್ನ ಸೈನ್ಯಗಳೊಡನೆ ವಿಜಯ ಮತ್ತು ಸುಲಿಗೆಯ ಯಾತ್ರೆ ಹೊರಟು ಸಂಪತ್ಸಮೃದ್ಧವಾದ ಇಜಿಪ್ತದ ಕಡೆ ಸಾಗಿದನು. ಅವನ ಸೈನ್ಯಗಳನ್ನು ಎದುರಿಸುವ ಶಕ್ತಿ ಇಜಿಪ್ತಕ್ಕಿರಲಿಲ್ಲ.

ಆದರೆ ತನ್ನ ಲೋಕೋತ್ತರಸೌಂದರ್ಯವಿತ್ತಲ್ಲ, ಅದನ್ನಾಕೆ ಎರಡನೇ ಬಾರಿ ಪ್ರಯೋಗಿಸಲು ನಿರ್ಧರಿಸಿದಳು. ಬಂಗಾರದ ರೇಕಿನ ಹಡಗನ್ನೇರಿ ನೇರಳೆ ಬಣ್ಣದ ಪಟಗಳನ್ನು ಹಾರಿಸಿ ಅವಳು ಮುದುಕ-ಕುಡುಕ ಆಂಥನಿಯನ್ನು ಎದುರುಗೊಳ್ಳಲು ಹೋದಳು. ಆ ದೃಶ್ಯ ಜೈಮಿನಿ ಭಾರತದಲ್ಲಿ ಅಶ್ವಮೇಧದ ಕುದುರೆಯೊಡನೆ ಹೊರಟ ಅರ್ಜುನನಿಗೆ ಪ್ರಮೀಳೆಯ ರಾಜ್ಯದಲ್ಲಿ ದೊರೆತ ಸ್ವಾಗತದಂತಿತ್ತು.

ಕ್ಲಿಯೊಪಾತ್ರಾ ಹಡಗಿನಲ್ಲಿ ಮೆತ್ತೆಯ ಮೇಲೆ ಒರಗಿದ್ದಳು. ಚಿಕ್ಕ ಚಿಕ್ಕ ಹುಡುಗರು ಕಾಮದೇವರಂತೆ ವೇಷ ಧರಿಸಿ ನವಿಲುಗರಿಯ ಬೀಸಣಿಗೆಗಳಿಂದ ಅವಳಿಗೆ ಬೀಸುತ್ತಿದ್ದರು. ಖುಜರಾಹದ ದೇವಾಲಯದ ಶಿಲಾಬಾಲಿಕೆಯರಂಥ ರಮಣಿಯರು ಕಾಮೋತ್ತೇಜಕ ಸಂಗೀತಕ್ಕೆ ಸರಿಯಾಗಿ ನರ್ತಿಸುತ್ತಿದ್ದರು.

ಕ್ಲಿಯೊಪಾತ್ರಳ ಸೈನ್ಯಗಳು ಮಾಡಲಾರದ್ದನ್ನು ಅವಳ ಲೀಲಾವಿಲಾಸ ಸಾಧಿಸಿತು. ಒರಟು ಸ್ವಭಾವದ ಸೇನಾಪತಿ ಆಂಥನಿ ಅವಳ ಜಾಲದಲ್ಲಿ ಸಿಲುಕಿದನು. ಸಾಯುವ ವರೆಗೆ ಅದರಿಂದ ಅವನು ಪಾರಾಗಲಿಲ್ಲ; ಪಾರಾಗಬಯಸಲೂ ಇಲ್ಲ.

ಗಂಡಸರನ್ನು ಮುಷ್ಟಿಯಲ್ಲಿಟ್ಟುಕೊಳ್ಳುವ ಕಲೆಯಲ್ಲಿ ಅವಳು ಪಾರಂಗತಳು. ಆಂಥನಿ ಅಸಂಸ್ಕೃತ. ಆದರೆ ಅವನ ಅಭಿರುಚಿಯನ್ನೇ ಅನುಸರಿಸಿದಳು. ಅವನೊಡನೆ ಪಗಡೆಯಾಡುತ್ತಿದ್ದಳು, ಬೇಟೆಯಾಡುತ್ತಿದ್ದಳು; ರಾತ್ರಿಯಲ್ಲಿ ದಾಸಿಯ ವೇಷದಲ್ಲಿ ಅವನೊಡನೆ ಬೀದಿಯಲ್ಲಿ ಸಂಚರಿಸುತ್ತಿದ್ದಳು; ಹುಚ್ಚಾಟಗಳನ್ನು ಮಾಡಿ ಅವನನ್ನು ರಂಜಿಸುತ್ತಿದ್ದಳು; ದಿವ್ಯ ಭೋಜನಗಳಿಂದ ಅವನನ್ನು ಸಂತೃಪ್ತಿಗೊಳಿಸುತ್ತಿದ್ದಳು.

ಸುಸಂಸ್ಕೃತಳಾದ, ಅನುಕೂಲೆಯಾದ, ಕುಲವಂತೆಯಾದ ನಾರಿಯ ಸ್ನೇಹ ಆಂಥನಿಯಲ್ಲಿ ಹಿಂದೆಂದೂ ಇರದ ಆರ್ದ್ರತೆಯನ್ನು ಉಂಟು ಮಾಡಿತು. ಆದರೆ ಅವನ ತಲೆ ತಾಳತಪ್ಪಿತು. ಅವನು ಫಿನೀಶಿಯಾ, ಜೆರಿಕೋ, ಸೈಪ್ರಸ್, ಕ್ರೀಟ್ ಪ್ರಾಂತಗಳನ್ನು ಒಂದೊಂದಾಗಿ ತನ್ನ ಮೋಹಿನಿಗೆ ಕಾಣಿಕೆ ಕೊಟ್ಟನು. ಕೊನೆಗೆ ಏಶಿಯದಲ್ಲಿ ರೋಮನ್ ಸಾಮ್ರಾಜ್ಯಕ್ಕೆ ಸೇರಿದ್ದ ಪ್ರಾಂತವನ್ನೇ ಅವಳ ವಶಪಡಿಸಿದನು.

ಇದು ಮಿತಿಮೀರಿದ ಅವಿವೇಕವಾಯಿತು. ರೋಮನ್ ಪ್ರಮುಖರು ಉರಿದೆದ್ದರು. ರೋಮನ್ ಧನ, ರೋಮನ್ ರಕ್ತದಿಂದ ಗೆದ್ದ ಸಾಮ್ರಾಜ್ಯದ ಸಂಪನ್ನ ಭಾಗಗಳನ್ನೇ ಕುಲಟೆಯೊಬ್ಬಳಿಗೆ ಕೊಟ್ಟ ಆಂಥನಿಯನ್ನು ನಿಗ್ರಹಿಸಲು ಅವರು ಸಿದ್ಧರಾದರು. ಭೋಗದಿಂದ ಮೂಢನಾಗಿದ್ದ ವೃದ್ಧ ಆಂಥನಿ ಅವರನ್ನೆದುರಿಸಲು

ಸನ್ನದ್ಧನಾದನು. ಕ್ಲಿಯೊಪಾತ್ರಾ ಅವನನ್ನು ಹುರಿದುಂಬಿಸುತ್ತ ಅವನೊಡನೆ ರಣಾಂಗಣಕ್ಕೆ ಬಂದಳು. ಆದರೆ ಅದೇ ಆಂಥನಿಗೆ ವಿಷವಾಯಿತು. ಕ್ಲಿಯೊಪಾತ್ರಾ ಆಗಲಾದರೂ ದೂರ ನಿಂತಿದ್ದರೆ ರೋಮನ್ ಪ್ರಮುಖರು ಆಂಥನಿಯನ್ನು ಕ್ಷಮಿಸಿ ಸ್ವೀಕರಿಸಬಹುದಾಗಿತ್ತು. ಇನ್ನು ಅದು ಸಾಧ್ಯವಿರಲಿಲ್ಲ.

ಆಂಥನಿ-ಕ್ಲಿಯೊಪಾತ್ರರ ಸಂಯುಕ್ತ ನೌಕಾ ಮತ್ತು ಸೈನ್ಯಬಲಗಳನ್ನು ರೋಮನ್ನರು ಸೋಲಿಸಿ ನಾಶ ಮಾಡಿದರು. ಶತ್ರುಗಳ ಕೈಗೆ ಬಿದ್ದರೆ ತಲೆದಂಡ ಸಿದ್ಧವೆಂದರಿತ ಆಂಥನಿ ಚೂರಿಯಿಂದ ತನ್ನನ್ನು ತಾನೇ ತಿವಿದುಕೊಂಡು ಕ್ಲಿಯೊಪಾತ್ರಳ ತೋಳುಗಳಲ್ಲಿ ವಿಲಿವಿಲಿ ಒದ್ದಾಡುತ್ತ ಸತ್ತನು.

ರೋಮನ್ ಸೈನ್ಯದ ಕೈಯಲ್ಲಿ ಸಿಗುವುದಿಲ್ಲೆಂದು ಕ್ಲಿಯೊಪಾತ್ರಾ ಪ್ರತಿಜ್ಞೆ ಮಾಡಿದ್ದಳು. ಸಿಕ್ಕಿದ್ದರೆ ಅವಳನ್ನು ರೋಮ್ ನಗರದ ಬೀದಿಗಳಲ್ಲಿ ಸರಪಳಿಗಳಿಂದ ಬಿಗಿದು ಮೆರವಣಿಗೆ ಮಾಡಿ ತಲೆ ಹಾರಿಸುತ್ತಿದ್ದರು. ಆದ್ದರಿಂದ ಅವಳು ವಿಷ ತೆಗೆದುಕೊಂಡು ತನ್ನ ಸುಂದರವಾದ ದುರ್ದೈವಿ ಶರೀರವನ್ನು ಕೊನೆಗೊಳಿಸಿದಳು. ತನ್ನನ್ನು ತಾನೇ ಕಚ್ಚಿ ಗಾಯದ ಮೇಲೆ ವಿಷ ಎರೆದು ನಂಜೇರಿ ಸತ್ತಳೆಂದು ಕೆಲವರೆನ್ನುತ್ತಾರೆ. ಹೂವಿನ ಬುಟ್ಟಿಯಲ್ಲಿ ಮರೆಸಿ ವಿಷಸರ್ಪವನ್ನು ತರಿಸಿಕೊಂಡು ಅದರಿಂದ ತನ್ನ ಮೊಲೆಯನ್ನು ಕಡಿಸಿಕೊಂಡಳೆಂದು ಬೇರೆ ಕೆಲವರ ಹೇಳಿಕೆ. ಸತ್ಯವಾವುದೋ ದೇವರೇ ಬಲ್ಲ.

ಅವಳನ್ನೂ ಆಂಥನಿಯನ್ನೂ ಸೇರಿಯೇ ಹುಗಿಯಲಾಯಿತು. ಆದರೆ ಈ ಗೋರಿಯನ್ನು ಗೊತ್ತು ಹಚ್ಚಲು ಇಂದಿಗೂ ಸಾಧ್ಯವಾಗಿಲ್ಲ. ಇಬ್ಬರು ರೋಮನ್ ವೀರರನ್ನು ಪ್ರೇಮಪರವಶರಾಗಿ ಮಾಡಿ ಗೆದ್ದುಕೊಂಡ ಪೌರಸ್ತ್ಯ ಸುಂದರಿಯ ಕಥೆ ಹೀಗೆ ದುರಂತ ಸಮಾಪ್ತಿಯನ್ನು ಹೊಂದಿತು.

---

## ಮ ಹಾ ಜೀ ವ ನ

ಆಗ ಸ್ವಾಮಿ ರಾಮತೀರ್ಥರು ಕಾಲೇಜಿನಲ್ಲಿ ಇನ್ನೂ ಪ್ರಾಧ್ಯಾಪಕರಿದ್ದರು. ಒಂದು ದಿನ ತರಗತಿ ನಡೆದಿತ್ತು. ಕರಿ ಹಲಗೆಯ ಮೇಲೆ ಬಳಪದಿಂದ ಒಂದು ಗೆರೆ ಎಳೆದು ಅಂದರು :

‘ ವಿದ್ಯಾರ್ಥಿಗಳೇ, ಈ ಗೆರೆಯನ್ನು ಚಿಕ್ಕದಾಗಿ ಯಾರು ಮಾಡುವಿರಿ? ’ ವಿದ್ಯಾರ್ಥಿಗಳಿಗೆ ಅದು ಅತಿ ಸರಳ ಪ್ರಶ್ನೆ ಎನ್ನಿಸಿತು. ಒಬ್ಬ ಮುಂದೆ ಬಂದು ಹಲಗೆಯೊರಸೆಯನ್ನು ಕೈಯಲ್ಲಿ ತೆಗೆದುಕೊಂಡು ಗೆರೆಯನ್ನು ಸ್ವಲ್ಪ ಅಳಿಸಲು ತೊಡಗಿದ.

ಆಗ ರಾಮತೀರ್ಥರು ತಡೆದು, ‘ ನಾನು ಗೆರೆ ಅಳಿಸಲು ಹೇಳಿಲ್ಲ. ಚಿಕ್ಕದು ಮಾಡಲು ಹೇಳಿದ್ದೇನೆ. ಯಾರು ಮಾಡುವಿರಿ? ಗೆರೆ ಅಳಿಸದೆ ಚಿಕ್ಕದು ಮಾಡಬೇಕು.’

ಎಲ್ಲ ವಿದ್ಯಾರ್ಥಿಗಳು ತಲೆ ತುರಿಸಹತ್ತಿದರು. ಗೆರೆಯನ್ನು ಅಳಿಸದೆ ಚಿಕ್ಕದು ಮಾಡುವದು ಹೇಗೆ? ಎಂದು ತೋಚಲಿಲ್ಲ. ಮೂಲೆಯಲ್ಲಿ ಕುಳಿತ ಒಬ್ಬ ವಿದ್ಯಾರ್ಥಿ ಮುಂದೆ ಬಂದ. ಅವನು ಹಲಗೆಯೊರಸೆ ತೆಗೆದುಕೊಳ್ಳದೆ ಅಧ್ಯಾಪಕರಿಂದ ಬಳಪ ಇಸಿದುಕೊಂಡ. ಆ ಗೆರೆಯ ಮೇಲ್ಗಡೆ ಅದಕ್ಕಿಂತ ಉದ್ದ ಗೆರೆಯೊಂದನ್ನು ಬರೆದ.

ರಾಮತೀರ್ಥರು ವಿದ್ಯಾರ್ಥಿಯ ಬುದ್ಧಿಯ ಬಗ್ಗೆ ಪ್ರೇಮ ಉಕ್ಕಿ ಬಂದು ಅಪ್ಪಿಕೊಂಡರು.

‘ ಪ್ರಿಯ ವಿದ್ಯಾರ್ಥಿಗಳೆ ! ಇದು ಜೀವನ. ನೀವು ದೊಡ್ಡವರಾಗಬೇಕಾದರೆ ಇನ್ನೊಬ್ಬರನ್ನು ಮುರಿಯಬೇಡಿರಿ. ನೀವೇ ಬೆಳೆದರೆ ಇನ್ನೊಬ್ಬರು ತಾವೇ ಚಿಕ್ಕವರಾಗುವರು ’ ಎಂದರು.

— ಸಾಧನಾ, ಹೈದರಾಬಾದ

ಬುದ್ಧಿಯಿದ್ದವರಿಗೆ ತಡವಾಗಿಯಾದರೂ ಭಾಗ್ಯ ಒಲಿಯುವುದು

# ಭಿಕ್ಷುಕ ನೋಟುಗಳ ಜನ್ಮದಾತನಾದ!

ಇಂದು ನಮಗೆ ಚಿರಪರಿಚಿತವಾಗಿರುವ ನೋಟುಗಳ ಜನ್ಮದಾತನು ಹಿಂದೆ ಒಮ್ಮೆ ಭಿಕ್ಷುಕನಾಗಿ ಅಲೆಯಬೇಕಾಯಿತು ಎಂದರೆ ಯಾರು ನಂಬುವರು? ಆದರೆ ನಂಬಲಾರದ ವಿಷಯ ನಡೆಯಬಾರದೆಂದಿಲ್ಲ. ದುಡಿದು ದುಡಿದು ಸುಣ್ಣವಾದ ವ್ಯಕ್ತಿ ಥಾಮಸ್ ಡಿ ಲಾ ರೂ ದುಡಿಮೆಯಿಂದ ಅನ್ನ ಸಂಪಾದಿಸಲಾರದೆ ಕೆಲಕಾಲ ಬೀದಿ ಬೀದಿಗಳಲ್ಲಿ ಅಲೆದು ಕಂಡಕಂಡವರೆದುರಿಗೆ ಕೈಯೊಡ್ಡಬೇಕಾಯಿತು. ಆದರೆ ಅವನ ಪ್ರತಿಭೆಯನ್ನು ಕಂಡು ಅದಕ್ಕೆ ಮೂಲ್ಯ ತೆರುವವರು ದೊರೆತಾಗ ಅದೇ ವ್ಯಕ್ತಿ ಜಗತ್ತಿನಲ್ಲಿಯೇ ಮೊದಲ ಬಾರಿ ನೋಟುಗಳನ್ನು ಮುದ್ರಿಸಿದ.

ಲಂಡನ್ನಿನ ಹತ್ತಿರದ ಹಳ್ಳಿಯೊಂದರಲ್ಲಿ ೧೭೯೩ ಮಾರ್ಚ ೨೪ ರಲ್ಲಿ ಥಾಮಸ್ ರೂ ಜನ್ಮವೆತ್ತಿದ. ಬಡ ಕುಟುಂಬದವನಾದುದರಿಂದ ಅವನು ತನಗೆ ಹತ್ತು ವರ್ಷವಾಗುವುದರೊಳಗಾಗಿ ನೌಕರಿ ಹುಡುಕಿಕೊಳ್ಳಬೇಕಾಯಿತು.

ಆಗ ತಾನೇ ಮುದ್ರಣ ಯಂತ್ರದ ಕೆಲಸ ಪ್ರಚಲಿತವಾಗಿದ್ದುದರಿಂದ ಹೊಸಹೊಸತಾಗಿ ಈ ಉದ್ಯಮದಲ್ಲಿ ಉತ್ಸಾಹದಿಂದ ಧನಿಕರು ಹಣ ತೊಡಗಿಸುತ್ತಿದ್ದರು. ಮುದ್ರಣ ಯಂತ್ರದ



'ಜ್ಞಾನೋದಯ' ದಿಂದ

ಉಜ್ವಲ ಭವಿಷ್ಯವನ್ನು ನೆನೆದು ಹೊಸತಾಗಿ ತೆರೆಯಲಾದ ಒಂದು ಮುದ್ರಣ ಶಾಲೆಯಲ್ಲಿ ರೂ ನೌಕರನಾಗಿ ಸೇರಿದ. ಲಂಡನ್ನಿನ ಉಪನಗರವೊಂದರಲ್ಲಿನ ಈ ಮುದ್ರಣಾಲಯದಲ್ಲಿ ರೂ ಹತ್ತು ವರ್ಷಗಳ ಕಾಲ ದುಡಿದು ಮುದ್ರಣ ಕಲೆಯನ್ನು ಕಲಿತುಕೊಂಡ. ಆದರೂ ಮುದ್ರಣಾಲಯದ ಒಡೆಯರು ಅವರಿಗೇನೂ ಸಂಬಳ ಹೆಚ್ಚಿಸಲಿಲ್ಲ. ಇದರಿಂದ ರೂ ತನ್ನ ನೌಕರಿಯನ್ನು ಬಿಡಬೇಕಾಯಿತು.

ಒಂದು ಮುದ್ರಣಾಲಯದ ನೌಕರಿಯನ್ನೇನೋ ಬಿಟ್ಟ ಥಾಮಸ ರೂ ಮತ್ತೊಂದು ಮುದ್ರಣಾಲಯ ಸೇರಿ ಕಷ್ಟಪಟ್ಟು ದುಡಿದ. ಅಲ್ಲಿ ಐದು ವರ್ಷಗಳ ಕಾಲ ದುಡಿದರೂ ಅವನಿಗೆ ತೃಪ್ತಿಯಿರಲಿಲ್ಲವೆಂದು ಆ ಉದ್ಯೋಗಕ್ಕೂ ಅವನು ತಿಲಾಂಜಲಿ ಕೊಡಬೇಕಾಯಿತು.

ಲಂಡನ್ನಿನಂಥ ದೊಡ್ಡ ನಗರದಲ್ಲಿ ಎಂಥ ಕೆಲಸ ಮಾಡಲೆಂದು ಒಂದು ಸಮಸ್ಯೆ ರೂವಿನ ಎದುರು ಅನಂತರ ದೊಡ್ಡದಾಗಿ ನಿಂತಿತು. ಅಲ್ಲಿನ ಮುದ್ರಣಾಲಯಗಳಲ್ಲಂತೂ ಅವನಿಗೆ 'ನೌಕರಿ'ಯೇ ದೊರೆಯಲಿಲ್ಲ.

ದಾರಿಯಲ್ಲಿ ಬಿದ್ದಿರುತ್ತಿದ್ದ ಕಾಗದ ಚೂರುಗಳನ್ನು ಸಂಗ್ರಹಿಸಿ ಹ್ಯಾಟುಗಳನ್ನು ತಯಾರು ಮಾಡಿ ಮಾರುತ್ತಿದ್ದ ಥಾಮಸ ರೂ. ಆದರೆ ಇಂಥ ಉದ್ಯೋಗ ಎಷ್ಟು ಕಾಲ ನಡೆದೀತು? ಎಷ್ಟಾದರೂ ಆದಾಯ ತಂದೀತು? ಅದಕ್ಕೆಂದೇ ಕಾಗದದ ಹೂ ತಯಾರಿಸುವ ಕಸುಬನ್ನೂ ಅವನು ಕೈಕೊಂಡನು. ಆದರೆ ಇದರಿಂದಲೂ ಅವನ ಅನ್ನಬಟ್ಟೆಯ ಪ್ರಶ್ನೆಗೆ ಉತ್ತರ ದೊರೆಯಲಿಲ್ಲ.

ಕೊನೆಗೆ ಇಗರ್ಜಿಯ ಎದುರುಗಡೆಯ ಮೆಟ್ಟಲಲ್ಲಿ ಕುಳಿತು ದೀನರಾಗಿ ಪುಣ್ಯ ಬೇಡಲು ಬರುವ ದೊಡ್ಡ ಮನುಷ್ಯರ ಮುಖದತ್ತ ತನ್ನ ಅತಿ ದೀನವಾದ ಕಣ್ಣನೋಟವನ್ನು ಹರಿಸಿ ಅವರ ಮನವನ್ನು ಕರಗಿಸಿ ಅವರ ಔದಾರ್ಯದಿಂದ ಬದುಕುವಂತೆ ಪರಿಸ್ಥಿತಿಯು ಅವನ ಮೇಲೆ ಒತ್ತಡವುಂಟುಮಾಡಿತು.

ದುಃಖ ಮತ್ತು ನಿರಾಶೆಗಳ ಮೂರ್ತಿಯಾಗಿ ಇಗರ್ಜಿಯೆದುರುಗಡೆ ಕುಳಿತಿದ್ದ ಥಾಮಸ ರೂವನ್ನು ರಿಚಾರ್ಡ ವೆಸ್ಟ್ ಎಂಬ ಪ್ರಸಿದ್ಧ ಚಿತ್ರಕಾರ ಮಾತನಾಡಿಸಿದ. ಅವನಿಗೆ ತನ್ನ ಚಿತ್ರಗಳನ್ನು ಅಚ್ಚು ಮಾಡಿಸುವ ಹುಚ್ಚು ಬಹಳ. ಆದರೆ ಚಿತ್ರಗಳನ್ನು ಅಚ್ಚು ಮಾಡುವಂಥ ಮುದ್ರಣಾಲಯಗಳು ಆಗ ಲಂಡನ್ನಿನಲ್ಲಿ ಇರದಿದ್ದುದು ಅವನಿಗೆ ತೊಂದರೆಯಾಗಿತ್ತು. ರೂವಿನ ಕಥೆ ಕೇಳಿ ತನ್ನ ಚಿತ್ರಗಳನ್ನು ಅಚ್ಚು ಮಾಡಲು ಬರುವಂಥ ಅಚ್ಚುಕೂಟವನ್ನು ಯಾಕೆ ಆರಂಭಿಸಬಾರದು? ಎಂದು ವಿಚಾರ ಮಾಡಿ ರೂಗೆ ಒಂದು ಮುದ್ರಣಾಲಯ ತೆರೆಯಲು ಹಣ ಒದಗಿಸುವುದಾಗಿ ಆಶ್ವಾಸನವಿತ್ತ.

ಮೊದಮೊದಲಿಗೆ ಈ ಮುದ್ರಣಾಲಯದಲ್ಲಿ ಸಣ್ಣಪುಟ್ಟ ಮುದ್ರಣ ಕಾರ್ಯಗಳು ನಡೆಯುತ್ತಿದ್ದಂತೆಯೇ ರೂ ಮುದ್ರಣದ ಕುರಿತು ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಿದ್ದ.

ಇದೇ ಹೊತ್ತಿಗೆ ಸರಿಯಾಗಿ ಇಸ್ಪೇಟು ಎಲೆಗಳ ಆಟದ ಆಸಕ್ತಿ ಜನರಲ್ಲಿ ಹೆಚ್ಚುತ್ತಿದ್ದಿತು. ಆದರೆ ಕೈಯಿಂದ ತಯಾರು ಮಾಡಿದ ಈ ಎಲೆಗಳು ಭಾರೀ ಬೆಲೆಯವಾಗಿದ್ದವು. ಆದ್ದರಿಂದ ಬಡವರು ಅದನ್ನು ಆಡುವಂತಿರಲಿಲ್ಲ. ಇಸ್ಪೀಟು ಎಲೆಗಳನ್ನು ಮುದ್ರಿಸಿ ಕೊಡುವ ಯೋಚನೆ ಆಗ ರೂವಿನ ತಲೆಯಲ್ಲಿ ಮೂಡಿತು. ಕೆಲವೇ ದಿನಗಳಲ್ಲಿ ಅವನ ಬಣ್ಣಬಣ್ಣದ ಆಟದ ಎಲೆಗಳು ಲಂಡನ್ನಿನಲ್ಲಿ ತುಂಬಿದವು. ಜೊತೆಗೆ ಅವನ ಭಾಗ್ಯವೂ ತೆರೆಯಿತು. ಅವನ ಮುದ್ರಣಾಲಯದ ಕೆಲಸ ಹೆಚ್ಚಿತು. ಇಸ್ಪೀಟು ಎಲೆಗಳು ದೇಶ ವಿದೇಶಗಳಲ್ಲಿಯೂ ಪ್ರಖ್ಯಾತವಾದವು.

೧೮೩೨ ರಲ್ಲಿ ಇಂಗ್ಲಂಡಿನ ಅರಸನಾಗಿದ್ದ ನಾಲ್ಕನೇ ವಿಲಿಯಮನು ಇಸ್ಪೇಟು ಎಲೆಗಳನ್ನು ಪೇಟೆಂಟ ಮಾಡಿಸಿ ಥಾಮಸ್ ರೂವನ್ನು ಸನ್ಮಾನಿಸಿದನು.

ಅನಂತರ ವಿವಿಧ ನಮೂನೆಯ ಆಮಂತ್ರಣ ಪತ್ರಿಕೆಗಳನ್ನು ಮುದ್ರಿಸಿ ಸಾಕಷ್ಟು ಹಣ ಗಳಿಸಿದ, ಥಾಮಸ್ ರೂ. ಥಾಮಸನ ಕೀರ್ತಿಯಿಂದ ಪ್ರಭಾವಿತನಾದ ವಿಲಿಯಂ ಅರಸ ಚಿನ್ನದ ಮಸಿಯಿಂದ ಬೈಬಲ್ ಅಚ್ಚು ಮಾಡುವ ಕೆಲಸವನ್ನೂ ಅವನಿಗೆ ಕೊಟ್ಟನು. ೧೮೩೮ ರಲ್ಲಿ ವಿಕ್ಟೋ

ರಿಯಾ ರಾಣಿಯು ರಾಜ್ಯಾರೋಹಣ ಕಾಲದಲ್ಲಿ 'ದಿ ಸನ್' ಎಂಬ ವಾರ್ತಾಪತ್ರಿಕೆಯ ಕೆಲ ವಂಶವನ್ನು ನಿಜವಾದ ಬಂಗಾರದ ಮಸಿಯಲ್ಲಿ ಥಾಮಸ್ ರೂವೇ ಮುದ್ರಿಸಿದನು.

೧೮೫೩ರಲ್ಲಿ ಥಾಮಸ್ ರೂ ಅಂಚೆ ತಿಕೀಟುಗಳನ್ನು ತನ್ನ ಕಲ್ಪನಾಶಕ್ತಿಯಿಂದ ಮುದ್ರಿಸಿದ ಸೆಂದು ಪಾರ್ಲಿಮೆಂಟು ಅವನನ್ನು ಸನ್ಮಾನಿಸಿತು. ಅಲ್ಲಿಂದ ಅಂಚೆ ತಿಕೀಟುಗಳ ಪ್ರಸಾರವಾಯಿತು. ರೂವನ್ನು ಸರಕಾರದ ಮುದ್ರಕನಾಗಿ ಮಾಡಲಾಯಿತು.

ಈ ದಿನಗಳಲ್ಲಿ ಬ್ರಿಟನ್ನಿನ ದೇಶೀಯ ಮತ್ತು ವಿದೇಶೀಯ ವ್ಯಾಪಾರವು ಸಾಕಷ್ಟು ಬೆಳೆಯಿತು. ಲೋಹದ ನಾಣ್ಯಗಳನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಒಯ್ಯುವುದು ಕಷ್ಟವಾಗಿತ್ತು. ಇದರ ಕಲ್ಪನೆ ಥಾಮಸ ರೂಗೆ ಸರಿಯಾಗಿತ್ತು.

ಅಚ್ಚು ಮಾಡಿದ ಕಾಗದದ ನೋಟುಗಳನ್ನು ನಾಣ್ಯಗಳ ರೂಪದಲ್ಲಿ ಚಲಾವಣೆ ಮಾಡಿದರೇಕಾಗದು ? ಎಂಬ ನಿಷಯವನ್ನು ಅನಂತರ ಥಾಮಸ್ ರೂ ಜನತೆಯ ಮುಂದೆ ಇರಿಸಿದ. ಮೊದಲು ಜನರು ಅವನ ಅಭಿಪ್ರಾಯವನ್ನು ಕೇಳಿ ನಗೆಚಾಟಿಗೆ ಮಾಡಿಬಿಟ್ಟರು. ಕೆಲವರು ಥಾಮಸ್ ರೂ ಹಣಸಂಪಾದನೆ ಮಾಡುವ ಉದ್ದೇಶದಿಂದಲೇ ಹೀಗೆ ಹೇಳುತ್ತಿದ್ದಾನೆಂದು ಹೇಳಿದರು. ಆದರೆ ಮಾರಿಶಸ್‌ನಲ್ಲಿದ್ದ ಬ್ರಿಟಿಶ ಎಜೆಂಟನಿಗೆ ಥಾಮಸ್ ರೂನ ಅಭಿಪ್ರಾಯವು ಸರಿಯೆನಿಸಿತು. ೧೮೬೪ ರಲ್ಲಿ ಅವನು ಅಲ್ಪಸ್ವಲ್ಪ ಬೆಲೆಗಳ ನೋಟುಗಳನ್ನು ಅಚ್ಚುಹಾಕಿಸಿ ಪ್ರಚಾರಕ್ಕೆ ತಂದನು.

ಈ ಪ್ರಯೋಗ ಯಶಸ್ವಿಯಾಗಿ ಕೆಲವೇ ಸಮಯದಲ್ಲಿ ಎಲ್ಲಾ ದೇಶಗಳಲ್ಲಿಯೂ ನೋಟಿನ ಚಲಾವಣೆ ಪ್ರಚಾರಕ್ಕೆ ಬಂದಿತು.

ಇಂದು ಸರಕಾರಿ ನೋಟುಗಳ ದೆಸೆಯಿಂದ ವ್ಯಾಪಾರ ವ್ಯವಹಾರಗಳಿಗೆ ಉಂಟಾದ ಸೌಲಭ್ಯವೆಷ್ಟೆಂಬುದು ಮಗುವಿಗೂ ಗೊತ್ತಿದೆ. ಸಂಗಡಲೇ ಸಂಪತ್ತಿನ ಸಂಗ್ರಹವನ್ನೂ ಅದು ಸುಲಭಗೊಳಿಸಿದೆ. ಆದರೆ ಉಣ್ಣಲು ಗತಿಯಿಲ್ಲದಂತಿದ್ದ ಒಬ್ಬ ಮನುಷ್ಯ ಈ ಕಲ್ಪನೆಯ ಮೂಲಪ್ರವರ್ತಕನಾದನೆಂಬುದೀಗ ಸೋಜಿಗದ ಸಂಗತಿ.

---

## ಜಗತ್ತಿನ ಮಹಾಕವಿ!

ಇಟಲಿಯ ಮಹಾಕವಿ ಗೆಬ್ರಿಯಲ್ ದ ಎಂಜಿಯಾರಿಗೆ ಬಂದ ಒಂದು ತಾರಿನಲ್ಲಿ 'ಇಟಲಿಯ ಮಹಾಕವಿ' ಎಂದು ವಿಳಾಸ ಬರೆಯಲಾಗಿತ್ತು. ಅಂಚೆಯವನು ತಾರನ್ನು ತಂದು ಕೊಟ್ಟಾಗ ಕವಿಯ ದೃಷ್ಟಿ ವಿಳಾಸದತ್ತ ಬಿದ್ದಿತು. ಅವರು ತಾರನ್ನು ಹಿಂದಿರುಗಿಸುತ್ತ ಹೇಳಿದರು: 'ನಾನು ಇಟಲಿಯ ಮಹಾಕವಿಯಲ್ಲ ಜಗತ್ತಿನ ಮಹಾಕವಿ. ಆದ್ದರಿಂದ ಇದು ನನಗೆ ಬಟವಾಡೆಯಾಗತಕ್ಕದ್ದಲ್ಲ.'

—ಜ್ಞಾನೋದಯ

## ಹಾಸ್ಯ ಮಾಡಿದರೆ . . . .

ಯಾರಾದರೂ ನಿನ್ನನ್ನು ಹಾಸ್ಯಮಾಡಿದರೆ ನೀನು ಅವರನ್ನು ಕರುಣೆಯಿಂದ ಕ್ಷಮಿಸಿಬಿಡಬಹುದು. ಆದರೆ ನೀನೇ ಯಾರನ್ನಾದರೂ ಹಾಸ್ಯಮಾಡಿದರೆ ನಿನ್ನನ್ನು ನೀನೇ ಎಂದಿಗೂ ಕ್ಷಮಿಸಿಕೊಳ್ಳಲಾರೆ.

ಒಬ್ಬನು ನಿನಗೇನಾದರೂ ತೊಂದರೆಯಿತ್ತರೆ ನೀನದನ್ನು ಮರೆಯಬಹುದು ; ಆದರೆ ನೀನು ಯಾರಿಗಾದರೂ ತೊಂದರೆ ಕೊಟ್ಟಿದ್ದರೆ ಅದನ್ನೆಂದಿಗೂ ಮರೆಯಲಾರೆ.

— ಖಲೀಲ ಜಿಬ್ರಾನ್

ಈ ಪ್ರಸಿದ್ಧಪುರುಷರು ಮಾಡಿದ ಮೊದಲನೇ ಗಳಿಕೆ ನಿಜವಾಗಿ ಸ್ವಾರಸ್ಯವಾಗಿದೆ. ಅವರ ಬಾಯಿಂದಲೇ ಕೇಳಿರಿ!

# ನಾನು ಗಳಿಸಿದ ಮೊದಲನೇ ರೂಪಾಯಿ

'ಕಿರ್ಲೋಸ್ಕರ' ಮಾಸಿಕದಿಂದ



★ ವಿ. ಶಾಂತಾರಾಮು

> "ಝುನಕ ಝುನಕ ಪಾಯಲ ಬಾಜೆ" ಚಿತ್ರವನ್ನುತ್ಪಾದಿಸಿದ ಪ್ರಸಿದ್ಧ ದಿಗ್ದರ್ಶಕ ಶಾಂತಾರಾಮುರು ೮ ವರ್ಷದವರಿದ್ದಾಗಲೇ ತಮ್ಮ ಮೊದಲನೇ ರೂಪಾಯಿ ಗಳಿಸಿದರು. ಆದರೆ ಅದಕ್ಕಾಗಿ ಅವರು ಗಳಗಳ ಅತ್ತರು!

ನನ್ನ ಜೀವಮಾನದಲ್ಲಿ ನಾನು ಸಂಪಾದಿಸಿದ ಮೊದಲನೆ ರೂಪಾಯಿಯ ವಿಚಾರ ಚಮತ್ಕಾರವಾಗಿರುವಂತೆ ಮನಸ್ಸಿಗೆ ವ್ಯಥೆಯನ್ನುಂಟುಮಾಡುವಂಥದೂ ಆಗಿದೆ. ದ್ರವ್ಯಲಾಭದಿಂದ ಅದರಲ್ಲೂ ಜೀವನದಲ್ಲಿಯ ಮೊಟ್ಟಮೊದಲನೆಯ ಸಲದ ದ್ರವ್ಯಲಾಭದ ನಂತರ ಮನಸ್ಸಿಗೆ ಉಂಟಾಗಬೇಕಾದಂಥ ಪ್ರಸನ್ನತೆಯು ಲವಲೇಶವಾದರೂ ಈ ನೆನಪಿನಲ್ಲಿಲ್ಲ. ನನಗೆ ನನ್ನ ಮೊಟ್ಟಮೊದಲನೆಯ ರೂಪಾಯಿ ಸಿಕ್ಕಾಗ ನಾನು ಗಳಗಳ ಅತ್ತೆ ಎಂದರೆ ಯಾರಿಗೂ ನಿಜವೆನಿಸಲಿಕ್ಕಿಲ್ಲ. ಆ ಘಟನೆ ಜರುಗಿ ಈಗ ೪೮ ವರ್ಷಗಳಾಗಿ ಹೋಗಿದ್ದರೂ ಅದರ ನೆನಪು ನನಗಿನ್ನೂ ಅಪ್ರಿಯವಾಗಿಯೆ ಕಾಣಿಸುತ್ತದೆ.

ನಾನು ಗಳಿಸಿದ ಮೊದಲನೆಯ ರೂಪಾಯಿ ಜುಗಾರಿ ಆಡಿ ಗಳಿಸಿದ್ದಾಗಿದೆ. ಮೊದಲೇ ಅಪ್ರಿಯವಾಗಿರುವ ಈ ಸಂಗತಿಯನ್ನು ಇನ್ನಿಷ್ಟು ಅಪ್ರಿ

ಯವನ್ನಾಗಿ ಮಾಡಲು ಮತ್ತೂ ಎರಡು ಕಾರಣಗಳಿವೆ—ಅವುಗಳಲ್ಲಿ ಮೊದಲನೆಯದೆಂದರೆ ಜುಗಾರಿ ಆಡಲು ಬೇಕಾದ ಹಣವನ್ನು ನಾನು ನನ್ನ ತಂದೆಯ ಪಾಕೀಟಿನಿಂದ ಅವರನ್ನು ಕೇಳದೆ ತೆಗೆದುಕೊಂಡಿದ್ದು—ಅಂದರೆ ಕದ್ದದ್ದಾಗಿದೆ! ಎರಡನೆಯದೆಂದರೆ ಜುಗಾರಿಯಲ್ಲಿ ಸಂಪಾದಿಸಿದ ಐದು ರೂಪಾಯಿಗಳನ್ನು ಮರುಕ್ಷಣದಲ್ಲಿ ಜುಗಾರಿಯಲ್ಲಿಯೆ ಕಳೆದುಕೊಂಡದ್ದಾಗಿದೆ.

ಜುಗಾರಿ ಆಡುವ ಉದ್ದೇಶವು ಬೇರೇನೂ ಆಗಿರದೆ ಜಾತ್ರೆಯಲ್ಲಿ ದೊರೆಯುವ ಮಿಠಾಯಿಗಳನ್ನು ಯಥೇಷ್ಟವಾಗಿ ತಿನ್ನಬೇಕೆಂಬುದೇ ಆಗಿತ್ತು. ಆದರೆ ಜುಗಾರಿ ಆಡುವ ಮತ್ತು ಕದಿಯುವ ಪಾಪಕಾರ್ಯಗಳನ್ನು ಮಾಡಿದರೂ ನನ್ನ ಈ ಆಶೆ ಅತೃಪ್ತವಾಗಿಯೇ ಉಳಿಯಿತು. ಮತ್ತು ಈ ಎರಡು ಪಾಪಗಳು ಭೂತಗಳಂತೆ ನನ್ನನ್ನು ಕಾಡತೊಡಗಿದವು.

ಈ ಘಟನೆ ನಡೆದದ್ದು ನಾನಿನ್ನೂ ಕೇವಲ ೮ ವರ್ಷದವನಾಗಿದ್ದಾಗ. ಆಗ ನಾವೆಲ್ಲ ಕೊಲ್ಲಾಪುರದಲ್ಲಿದ್ದೆವು. ನನ್ನ ತಂದೆ ಶ್ರೀ ರಾಜಾರಾಮ ಬಾಪು ಒಂದು ಅಂಗಡಿಯನ್ನಿಟ್ಟಿದ್ದರು. ಅಂಗಡಿಯ ಸಮೀಪದಲ್ಲಿದ್ದ ಖಾಸಬಾಗ ಮೈದಾನದಲ್ಲಿ ದೊಡ್ಡ ದೊಡ್ಡ ಕುಸ್ತಿಗಳು ಜರಗುತ್ತಿದ್ದವು. ಕುಸ್ತಿಗಳು ಎಂಟೆಂಟು ದಿನಗಳ ವರೆಗೆ ನಡೆಯುತ್ತಿದ್ದವು. ಖಾಸಬಾಗ ಮೈದಾನಕ್ಕೆ ಜಾತ್ರೆಯ ಸ್ವರೂಪ ಬರುತ್ತಿತ್ತು. ಮಿಠಾಯಿ ಅಂಗಡಿಗಳು, ತೊಟ್ಟಿಲುಗಳು ಮೊದಲಾದ ಮನರಂಜನ ಸಾಧನಗಳು ಹೇರಳವಾಗಿರುತ್ತಿದ್ದವು.

ಬಾಲಕನಾಗಿದ್ದ ನನಗೆ ಇವೆಲ್ಲವುಗಳ ಮೋಹ ವಿಪರೀತವಾಗಿತ್ತು. ಆದರೆ ಬೇಕಾದ ಹಣ ಮಾತ್ರ ಇರಲಿಲ್ಲ. ನಮ್ಮ ತಂದೆ ಕಠೋರ ಶಿಸ್ತಿನವರಾಗಿದ್ದುದರಿಂದ ಅವರಿಂದ ಹಣ ಪಡೆಯುವದು ಸಾಧ್ಯವಿರಲಿಲ್ಲ.

ಒಂದು ದಿನ ಮೈದಾನದಲ್ಲಿ ಸಹಜ ಅಲೆಯುತ್ತಿದ್ದಾಗ ಎರಡಾಣೆಗೆ ಐದು ರೂಪಾಯಿಗಳನ್ನು ಕೊಡುವ ಆಶ್ವಾಸನವೀಯುತ್ತಿದ್ದ ಕವಡೆ ಆಟವೊಂದು ನನ್ನ ಕಣ್ಣಿಗೆ ಬಿತ್ತು. ನನಗೆ ಇದು ತುಂಬ ಆಕರ್ಷಕವಾಗಿ ಕಂಡಿತು. ಏನೇ ಆಗಲಿ, ಮರುದಿನ ಈ ಆಟ ಆಡಿ ಹಣ ಸಂಪಾದಿಸಲೇಬೇಕು ಎಂದು ನಿಶ್ಚಯಿಸಿದೆ.

ಆದರೆ ಜುಗಾರಿ ಆಡಲು ಹಣ! ವಿಚಾರ ಮಾಡಮಾಡುತ್ತಿದ್ದಾಗ ಒಂದು ದುಸ್ಸಾಹಸದ ಕಲ್ಪನೆ ಹೊಳೆಯಿತು. ರಾತ್ರಿ ಅಂಗಡಿ ಮುಚ್ಚಿದ ಬಳಿಕ ಹಣದ ಚೀಲವನ್ನು ಮನೆಗೆ ಹೊತ್ತುಕೊಂಡೊಯ್ಯುವ ಕೆಲಸ ಬಹುಶಃ ನನ್ನದೇ ಆಗಿರುತ್ತಿತ್ತು. ಅಂದು ರಾತ್ರಿ ಎರಡಾಣೆಗಳನ್ನು ಎತ್ತಿ ಹಾಕಬೇಕೆಂದು ನಾನು ನಿರ್ಧರಿಸಿದೆ.

ಆದರೆ ಹೀಗೆ ಮಾಡುವದು ಕೆಟ್ಟದ್ದು ಎಂಬ ವಿಚಾರವೂ ಬಂದು ನನ್ನ ಮನಸ್ಸಿನಲ್ಲಿ ಕೋಲಾಹಲವೆದ್ದಿತು. ಮರುದಿನ ಐದು ರೂಪಾಯಿಗಳು ದೊರೆತ ನಂತರ ಈ ಎರಡಾಣೆಗಳನ್ನು ಮತ್ತೆ ಚೀಲಕ್ಕೆ ಸೇರಿಸಿದರಾಯಿತು ಎಂದು ಯೋಚಿಸಿ ಮನಸ್ಸನ್ನು ಶಾಂತಗೊಳಿಸಿದೆ.

ನಿಶ್ಚಯಿಸಿದಂತೆ ಎರಡಾಣೆಯನ್ನು ರೊಕ್ಕದ ಚೀಲದಿಂದ ಎಬ್ಬಿಸಿದೆ. ಆದರೆ ಅಂದು ರಾತ್ರಿ ನನಗೆ ನಿದ್ದೆಯೆಂಬುದು ಬರಲೇ ಇಲ್ಲ. ಮಾರನೆಯ ದಿನ ಐದು ರೂಪಾಯಿ ದೊರೆತ ಬಳಿಕ ಏನೇನು ಮಾಡಬೇಕು ಎಂಬುದರ ದೃಶ್ಯ ನನ್ನ ಕಣ್ಣ ಮುಂದೆ ಕುಣಿಯುತ್ತಲಿತ್ತು. ಜೊತೆಗೆ ತಂದೆಯ ಹಣ ಕದ್ದದ್ದು ತಪ್ಪು ಎಂಬ ವಿಚಾರವೂ ಅಸ್ಪಷ್ಟವಾಗಿ ಮೂಡಿ ಮನಸ್ಸನ್ನು ಕೊರೆಯುತ್ತಿತ್ತು.

ಬೆಳಗಾಯಿತು. ಎರಡಾಣೆಯನ್ನು ಕೈಯಲ್ಲಿ ಭದ್ರವಾಗಿ ಹಿಡಿದುಕೊಂಡು ಕುಸ್ತಿ ಮೈದಾನಕ್ಕೆ ಓಡಿದೆ. ಅಂಬಾ ಬಾಯಿಯ ಸ್ಮರಣೆ ಮಾಡಿ ಬೆವರಿನಿಂದ ತೊಯ್ದು ಎರಡಾಣೆಯನ್ನು ಹಚ್ಚಿದೆ. ಡಬ್ಬಿಯಲ್ಲಿಯ ಕವಡೆಗಳನ್ನು ಖಡಖಡ ಅಲ್ಲಾಡಿಸಿ ಆಟದವ ಕೆಳಗೆ ಚೆಲ್ಲಿದ.

"ಬಂತು!" ಸಮೀಪದಲ್ಲಿದ್ದ ಯಾರೋ ಮೆಲ್ಲಗೆ ಅಂದರು. ಮನಸ್ಸಿನಲ್ಲಿ ಕಂಡ ಸ್ವಪ್ನ ನಿಜವಾದದ್ದು ನೋಡಿ ನನಗೆ ಅತಿ ಆನಂದವಾಯಿತು. ಮಾತ್ರವಲ್ಲ, ವಿಜಯದ ಅಮಲು ಕೂಡ ಏರಿತು. ಆ ಐದು ರೂಪಾಯಿಗಳನ್ನು ಹತ್ತು ರೂಪಾಯಿ

ಗಳನ್ನಾಗಿ ಮಾಡುವೆನೆಂಬ ಹುಚ್ಚು ಆತ್ಮವಿಶ್ವಾಸದಿಂದ ಅಷ್ಟನ್ನೂ ಹಚ್ಚಿ ".ಚಲ್ಲಿರಿ" ಎಂದೆ.

ಕವಡೆ ಬಿತ್ತು. "ಬಂತು" ಎಂದ ಧ್ವನಿಯೆ ಮೊದಲಿನಷ್ಟೇ ನಿರ್ವಿಕಾರ ರೂಪದಲ್ಲಿ "ಹೋಯಿತು!" ಎಂದಿತು.

ಒಂದೆರಡು ನಿಮಿಷಗಳ ವರೆಗೆ ಏನಾಯಿತೆಂಬುದೇ ನನಗೆ ತಿಳಿಯಲಿಲ್ಲ. ಮುಂದೆ ಸತ್ಯ ಹೊಳೆಯಿತು. ಜಾತ್ರೆಯಲ್ಲಿದ್ದ ಸಕಲ ವಸ್ತುಗಳೂ ಗರಗರ ತಿರುಗುತ್ತಿರುವಂತೆ ನನಗೆ ಭಾಸವಾಯಿತು. ನಾನು ನಾಚಿಕೆ ಬಿಟ್ಟು ಬಿಕ್ಕಿಬಿಕ್ಕಿ ಅಳುತ್ತ ಮನೆಗೋಡಿದೆ.

ಇದರ ಪರಿಣಾಮ ನನ್ನ ಮೇಲೆ ಎಷ್ಟಾಯಿತೆಂದರೆ ಮುಂದಿನ ನನ್ನ ಇದುವರೆಗಿನ ಜೀವನದಲ್ಲಿ ನಾನು ಜುಗಾರಿಯ ಕಡೆ ಕಣ್ಣೆತ್ತಿಯೂ ನೋಡಿಲ್ಲ. ಇಂದು ಕೂಡ ಯಾರಾದರೂ ಪರಿಚಿತರು "ರೇಸಿಗೆ ನಡೆಯಿರಿ" ಎಂದಾಗ "ದಯವಿಟ್ಟು ಇದೊಂದು ಆಗ್ರಹವನ್ನು ಮಾತ್ರ ನನಗೆ ಮಾಡಬೇಡಿ" ಎನ್ನುತ್ತೇನೆ.

## ★ ಸದೋಬಾ ಪಾಟೀಲ

> ಪ್ರಸಿದ್ಧ ಕಾಂಗ್ರೆಸ್ ನಾಯಕ, ಮುಂಬಯಿ ಪ್ರದೇಶ ಕಾಂಗ್ರೆಸ್ಸಿನ ಅಧ್ಯಕ್ಷ, ರಾಜಕಾರಣದಲ್ಲಿ ನಿಸ್ಸೀಮ ಎಸ್. ಕೆ. ಪಾಟೀಲರು ಮೊದಲನೇ ರೂಪಾಯಿ ಗಳಿಸಿದ್ದು ಗೀತಾಪ್ರವಚನದಿಂದ!



ಒಮ್ಮೊಮ್ಮೆ ಸತ್ಯವು ಕಾದಂಬರಿಗಿಂತ ಹೆಚ್ಚು ಚಮತ್ಕಾರವಾಗಿರುತ್ತದೆ ಎನ್ನುತ್ತಾರೆ. ನನ್ನ ಮಟ್ಟಿಗೆ ಹೇಳುವದಾದರೆ ಈ ಮಾತು ಹದಿನಾರಣೆ ಸತ್ಯವೆನ್ನಬಹುದು. ಇಂದು ನಾನು ದಿನದ ಇಪ್ಪತ್ತುನಾಲ್ಕು ತಾಸೂ ರಾಜಕಾರಣದ ವಿವಿಧ ಕಾರ್ಯಗಳಲ್ಲಿ ಮಗ್ನನಾಗಿರುವೆನಾದರೂ ವಾಲಾವಲದಲ್ಲಿರುವ ಟೋಪಿವಾಲೆಯವರ ರಾಮಮಂದಿರದಲ್ಲಿ ಭಗವದ್ಗೀತೆಯ "ನ ಮೇ ಭಕ್ತಃ ಪ್ರಣಶ್ಯತಿ" ಎಂಬ ಶ್ಲೋಕಾರ್ಥದ ಮೇಲೆ ಪ್ರವಚನ ಮಾಡಿ ನಾನು ನನ್ನ ಆಯುಷ್ಯದಲ್ಲಿಯ ಮೊಟ್ಟಮೊದಲನೆಯ ರೂಪಾಯಿಯನ್ನು ಸಂಪಾದಿಸಿದೆ.

ನಮ್ಮ ಊರು ಸಾವಂತವಾಡಿ ಸಂಸ್ಥಾನದ ಪಾಟ ಆಗಿದ್ದರೂ ನನ್ನ ಶಾಲಾ ಶಿಕ್ಷಣವೆಲ್ಲ ವೆಂಗುರ್ಲಾ ತಾಲೂಕಿನ ಕೇಳೂಸ ಮತ್ತು

ಕುಡಾಳ ಊರುಗಳಲ್ಲಿ ಆಯಿತು. ಕುಡಾಳದ ಹಾಯಸ್ಕೂಲಿನಲ್ಲಿಯ ಸುಪ್ರಸಿದ್ಧ ಸಂಸ್ಕೃತ ಶಿಕ್ಷಕ ಶ್ರೀ ನಾರಳೀಕರರ ಪ್ರಿಯ ಶಿಷ್ಯನಾಗುವ ಭಾಗ್ಯ ನನಗೆ ಲಭಿಸಿತು. ಕುಡಾಳಕ್ಕೆ ಬಂದಾಗ ನನಗೆ ಸಂಸ್ಕೃತ ಭಾಷೆಯ ಗಂಧಗಾಳಿಯೂ ಇರಲಿಲ್ಲ. ಆದರೆ ಶ್ರೀ ನಾರಳೀಕರರ ಸಹವಾಸ ದಲ್ಲಿ ನನಗೆ ಸಂಸ್ಕೃತದ ರುಚಿ ಹತ್ತಿ ಎರಡೇ ವರ್ಷಗಳಲ್ಲಿ ನಾನು ರಾಮಾಯಣ, ಮಹಾ ಭಾರತ, ಭಗವದ್ಗೀತೆ, ಕಾವ್ಯಪ್ರಕಾಶದಂಥ ಗ್ರಂಥಗಳನ್ನು ಓದಬಲ್ಲವನಾದೆ. ಮುಂದೆಯೂ ಸಂಸ್ಕೃತ ಭಾಷೆಯ ವ್ಯಾಸಂಗವನ್ನು ಮುಂದು ವರಿಸಿ ನಾನೋರ್ವ ನಾಮಾಂಕಿತ ಸಂಸ್ಕೃತ ಪಂಡಿತನಾಗಬೇಕು ಎಂದು ನಾನು ಮನಸ್ಸಿನಲ್ಲಿ ನಿಶ್ಚಯಿಸಿದೆ.

ಆದರೆ ಹಾಗಾಗುವಂತಿರಲಿಲ್ಲ. ಶಾಲಾಶಿಕ್ಷಣ ವನ್ನು ಮುಗಿಸಿ ಮುಂದಿನ ಶಿಕ್ಷಣಕ್ಕಾಗಿ ನಾನು ಮುಂಬಯಿಯ ಸೇಂಟ ಝೇವಿಯರ್ಸ ಕಾಲೇಜಿಗೆ ಬಂದಾಗ ದೇಶದಲ್ಲೆಲ್ಲ ಅಸಹಕಾರದ ತೆರೆ ಎದ್ದಿತ್ತು. ದೇಶದಲ್ಲಿಯ ಸಹಸ್ರಾರು ವಿದ್ಯಾರ್ಥಿ ಗಳಂತೆ ನಾನೂ ಕಾಲೇಜನ್ನು ಬಿಟ್ಟು ಚಳವಳಿ ಯಲ್ಲಿ ಧುಮುಕಿದೆ. ಆ ನಂತರದ ಕಾಲದಲ್ಲಿ ನನ್ನ ಸಂಸ್ಕೃತ ವ್ಯಾಸಂಗ ಮುಂದೆ ಸಾಗಿತಾ ದರೂ ಸಂಸ್ಕೃತ ಪಂಡಿತನಾಗಬೇಕೆನ್ನುವ ನನ್ನ ಕಲ್ಪನೆ ಮಾತ್ರ ದಿನೇ ದಿನೇ ಹಿನ್ನೆಲೆಗೆ ಬಿದ್ದು ವೃತ್ತಪತ್ರಿಕಾಕಾರನಾಗಬೇಕೆಂಬ ಬಯಕೆ ಮೂಡಿ ಬೆಳೆಯಿತು. ಪತ್ರಿಕೋದ್ಯಮದ ಶಿಕ್ಷಣ ಪಡೆಯಲು ರಾಷ್ಟ್ರಪಿತ ಗಾಂಧೀಜಿಯವರ ಸಲ ಹೆಯ ಮೇರೆಗೆ ನಾನು ೧೯೩೪ ರಲ್ಲಿ ಲಂಡನ್ನಿಗೆ ಹೋಗಲು ನಿರ್ಧರಿಸಿದೆ. ಲಂಡನ್ನಿಗೆ ಹೋಗಲು ಬೇಕಾದ ಹಣವನ್ನು ಕೂಡಿಸಲು ನನ್ನ ಸಂಸ್ಕೃತ ವ್ಯಾಸಂಗ ಹೇಗೆ ಸಹಾಯಕಾರಿಯಾಯಿತು ಎಂಬುದು ಮನೋರಂಜಕವಾದಂತೆ ಉದ್ಬೋ ಧಕವೂ ಆಗಿದೆ.

ಆಗ ಮುಂಬಯಿಯಲ್ಲಿ ಸುಪ್ರಸಿದ್ಧ ಧನಿಕ ರಾದ ಟೋಪೀವಾಲ ಶೇಠರು ಪರದೇಶಗಳಿಗೆ ಹೋಗುವ ವಿದ್ಯಾರ್ಥಿಗಳ ಸಹಾಯಕ್ಕಾಗಿ ಕೆಲವು ಶಿಷ್ಯವೃತ್ತಿಗಳನ್ನಿಟ್ಟಿದ್ದರು. ಆದರೆ ಅದರ- ಲ್ಲೊಂದು ನನಗೆ ಸಿಗಬೇಕಾಗಿದ್ದರೆ ಟೋಪೀ- ವಾಲರ ಬಳಿ ಯಾರಾದರೂ ನನ್ನ ಶಿಫಾರಸು ಮಾಡಬೇಕಾಗಿತ್ತು. ಅವರಿಗೆ ನನ್ನ ಪರಿಚಯ ವಂತೂ ಇರಲಿಲ್ಲ. ಯಾರಿಂದ ಶಿಫಾರಸು ಮಾಡಿಸಬೇಕು ?

ಟೋಪೀವಾಲರಿಗೆ ಸಂಸ್ಕೃತ ಭಾಷೆಯ ಮೇಲೆ ತುಂಬ ಪ್ರೇಮವಿದೆಯೆಂಬ ಮಾತು ಮಾತ್ರ ನನಗೆ ಓರ್ವ ಮಿತ್ರರಿಂದ ತಿಳಿದುಬಂದಿತ್ತು. ನಾನು ವಾಲಾವಲದಲ್ಲಿಯ ರಾಮಮಂದಿರದಲ್ಲಿ ಭಗವ ದ್ಗೀತೆಯ ಮೇಲೆ ಒಂದು ಪ್ರವಚನ ಮಾಡಿದರೆ ಮತ್ತು ಅದನ್ನೇನಾದರೂ ಟೋಪೀವಾಲರು ಕೇಳಿ ದರೆ ನನಗೆ ಶಿಷ್ಯವೃತ್ತಿ ಸಿಗಬಹುದು ಎಂದು ನನ್ನ ಮಿತ್ರರು ಅಭಿಪ್ರಾಯಪಟ್ಟರು.

ಈ ಸಲಹೆಯಂತೆ ನಾನು ರಾಮಮಂದಿರದಲ್ಲಿ ೧೯೩೪ರಲ್ಲಿ "ನ ಮೇ ಭಕ್ತಃ ಪ್ರಣಶ್ಯತಿ" ಎಂಬ ಶ್ಲೋಕದ ಮೇಲೆ ಪ್ರವಚನವಿತ್ತೆ. ಈ ಪ್ರವಚನ ಕಾರ್ಯಕ್ರಮಕ್ಕಾಗಿಯೆಂದೇ ಮುಂಬೈಯಿಂದ ಬಂದಿದ್ದ ಟೋಪೀವಾಲರಿಗೆ ನನ್ನ ಪ್ರವಚನ ತುಂಬ ಮೆಚ್ಚುಗೆಯಾಯಿತು. ಅವರು ಒಂದು ಶಿಷ್ಯವೃತ್ತಿಯನ್ನು ನನಗೆ ದಯಪಾಲಿಸಿದರು. ನನ್ನ ವಿದೇಶ ಪ್ರಯಾಣ ಸುಲಭವಾಯಿತು.

ಮುಂದೆ ನನ್ನ ಜೀವನದಲ್ಲಿ ನಾನು ನೂರಾರು ಭಾಷಣಗಳನ್ನು ಮಾಡಿದ್ದೇನೆ, ನನ್ನ ವಕ್ತೃತ್ವ ದಿಂದ ಜನಸಮುದಾಯವನ್ನು ಆಕರ್ಷಿಸಿದ್ದೇನೆ. ಆದರೆ ರಾಮಮಂದಿರದಲ್ಲಿ ನಾನು ಮಾಡಿದ ಪ್ರವ ಚನದ ಸ್ಮೃತಿ ನನ್ನ ಮನಸ್ಸಿನಲ್ಲಿ ಇನ್ನೂ ಸ್ಫುಟವಾಗಿದೆ. ನನ್ನ ಆಯುಷ್ಯದಲ್ಲಿ ನಾನು ಅಂದು ಗಳಿಸಿದ ಮೊದಲನೆ ರೂಪಾಯಿ ನನ್ನ ಜೀವನದ ಪ್ರಾಣಪ್ರತಿಷ್ಠೆಯನ್ನು ಮಾಡಿತು; ನಾನು ಅದುವರೆಗೂ ಕಾಣದಿದ್ದ ಹೊಸ ಜಗ ತ್ತಿನ ದರ್ಶನವನ್ನು ನನಗೆ ಮಾಡಿಸಿತು. →

# ★ ಶಂಕರರಾವ್ ಕಿರ್ಲೋಸ್ಕರ



> ಮರಾಠಿ "ಕಿರ್ಲೋಸ್ಕರ" ಪತ್ರಿಕೆಯ ಸಂಪಾದಕರಾಗಿ ಮರಾಠಿ ಪತ್ರಿಕೋದ್ಯಮದಲ್ಲಿ ಹೊಸ ಹಾದಿ ತುಳಿದ ಕಿರ್ಲೋಸ್ಕರ ಶಂಕರರಾಯರು ಹುಬ್ಬಳ್ಳಿಯಲ್ಲಿ ಫೋಟೋ ತೆಗೆದು ಮೊದಲನೇ ರೂಪಾಯಿ ಗಳಿಸಿದರು!

"ಶಂಕರ, ಹಣ ಸಂಪಾದಿಸಿ ನಿನ್ನ ಹೊಟ್ಟೆ ಹೊರಕೊಳ್ಳಬಲ್ಲೆಯಾ?"

ಹಾಯಸ್ಕೂಲಿನಲ್ಲಿ ಐದನೆಯ ತರಗತಿಯಲ್ಲಿ ಓದುತ್ತಿದ್ದ ನನ್ನಂಥ ಹುಡುಗನಿಗೆ ಇದು ತೀರ ಅನಪೇಕ್ಷಿತ ಪ್ರಶ್ನೆಯೇ ಸರಿ! ಆದರೆ ಆ ಕ್ಷಣದಲ್ಲಿ ಒಂದು ಕಲ್ಪನೆ ಮನಸ್ಸಿಗೆ ಹೊಳೆದದ್ದರಿಂದ, "ಅದರಲ್ಲೇನು ಮಹಾ? ಹಣ ಗಳಿಸಬಲ್ಲೆ ಎಂದು ನನಗನಿಸುತ್ತದೆ" ಎಂದು ಉತ್ತರವಿತ್ತೆ.

ಅದನ್ನು ಕೇಳಿ ನನ್ನ ತಂದೆ ಮತ್ತು ಇಬ್ಬರು ಕಕ್ಕಂದಿರು ನಗತೊಡಗಿದರು. ನನ್ನ ಕಿರಿ ಚಿಗಪ್ಪ-ಲಕ್ಷ್ಮಣರಾಯರು- "ಯಾವ ಉದ್ಯೋಗ ಮಾಡಿ ಹಣ ಸಂಪಾದಿಸುವಿ?" ಎಂದು ಕೇಳಿದರು.

"ಫೋಟೋ ತೆಗೆದು!" ನನ್ನ ಉತ್ತರ.

ನಾನು ಹಾಯಸ್ಕೂಲಿಗೆ ಹೋದಾಗ ನನ್ನ ಕಕ್ಕ ನನಗೊಂದು ಕ್ಯಾಮರಾವನ್ನು ತೆಗೆಸಿಕೊಟ್ಟಿದ್ದ. ನಾನು ಫೋಟೋ ತೆಗೆಯಲು ಕಲಿತದ್ದಲ್ಲದೆ ನನ್ನ ಫೋಟೊಗಳಲ್ಲಿ ನಾವೀನ್ಯವನ್ನೂ ವೈಶಿಷ್ಟ್ಯವನ್ನೂ ತರಲು ಪ್ರಯತ್ನಿಸತೊಡಗಿದೆ. ನನ್ನ ಕಲೆಯ ಕೌತುಕವಾಗತೊಡಗಲು ಫೋಟೋ ತೆಗೆದು ಹಣ ಸಂಪಾದಿಸಬಹುದೆಂಬ ಕನಸನ್ನು ನಾನು ಕಾಣತೊಡಗಿದೆ.

ಈ ಸ್ವಪ್ನವನ್ನು ನಿಜವನ್ನಾಗಿ ಮಾಡಿ ತೋರಿಸುವ ಹೊಣೆ ನನ್ನ ಮೇಲೆ ಈಗ ಬಂದಿತು. ಅರ್ಥೋತ್ಪಾದನೆಯ ಈ ಪ್ರಯೋಗಕ್ಕಾಗಿ ನಾನು ಹುಬ್ಬಳ್ಳಿಯನ್ನಾರಿಸಿಕೊಂಡೆ. ಅಲ್ಲಿ ನನ್ನ ಮಾವ ಶ್ರೀ ಬಾಬಾ ಟೇಂಬೆಯವರು ಇದ್ದರು. ದೀಪಾವಳಿ ರಜೆಯಲ್ಲಿ ನಾನು ನನ್ನ ಸಹಾಯಕ ಅಂತೀಬಾ (ಈಗ ನಮ್ಮಲ್ಲಿ ವರ್ಕ್ಸ ಸುಪರಿಂಟೆಂಡೆಂಟರಾಗಿರುವ ಅನಂತರಾವ ಫಳಣೀಕರ) ರನ್ನು ಕರೆದುಕೊಂಡು ಹುಬ್ಬಳ್ಳಿಗೆ ಬಂದು ಮಾವನೆದುರು ನನ್ನ ಆಗಮನದ ಉದ್ದೇಶವನ್ನು ಉತ್ಸಾಹದಿಂದ ವರ್ಣಿಸಿದೆ.

ಅವರು ಶಾಂತ ಸ್ವರದಲ್ಲಿ, "ನಿಮಗೆ ಹುಚ್ಚು ಹಿಡಿದಿದೆಯೆಂದು ಕಾಣಿಸುತ್ತದೆ. ರೊಕ್ಕಗಳಿಸುವದೆಂದರೇನೂ ಚೇಷ್ಟೆಯಲ್ಲ!" ಎಂದರು.

ನಮಗೆ ಬಂದದ್ದೂ ಅದೇ ಅನುಭವ. ಕುತ್ತಿಗೆಗೆ ಕ್ಯಾಮರಾ ತೂಗಹಾಕಿಕೊಂಡು, ಕೈಯಲ್ಲಿ ಅದರ ಸ್ಟಾಂಡನ್ನು ಹಿಡಿದುಕೊಂಡು ನಾವು ಹಗಲಿಡೀ ಓಣಿಓಣಿ ಅಲೆಯುತ್ತಿದ್ದೆವು. ಆದರೆ ಒಬ್ಬ ಗಿರಾಕಿಯೂ ದೊರೆಯುತ್ತಿರಲಿಲ್ಲ. ನಾವು ಫೋಟೋ ತೆಗೆಯಬಲ್ಲೆವು ಎಂಬ ಮಾತಿನಲ್ಲಿ ಯಾರಿಗೂ ವಿಶ್ವಾಸವೆನಿಸುತ್ತಿರಲಿಲ್ಲ. ದೀಪಾವಳಿಯ ರಜೆ ಮುಗಿದುಹೋಯಿತು. ಕೈಬೀಸುತ್ತ ಬಂದ ಹಾಗೆಯೆ ನಾವು ಊರಿಗೆ ಮರಳಿದೆವು. ಯಾರೂ ನಮನ್ನು ಚೇಷ್ಟೆ ಮಾಡದಿದ್ದರೂ ನಮ್ಮಷ್ಟಕ್ಕೆ ನಾವು ನಾಚಿ ಕುಗ್ಗಿ ಹೋಗಿದ್ದೆವು.

ಆದರೆ ಅಷ್ಟರಿಂದ ನಾವು ನಿರಾಶರಾಗಲಿಲ್ಲ. ಮತ್ತೆ ಪ್ರಯತ್ನಿಸಲು ನಿಶ್ಚಯಿಸಿ ಬೇಸಿಗೆ ಸೂಟಿ ಬಂದೊಡನೆ ಪುನಃ ಹುಬ್ಬಳ್ಳಿಯ ಹಾದಿ ಹಿಡಿದೆವು. ನಮ್ಮನ್ನು ಕಂಡೊಡನೆ ಮಾವ, "ಇನ್ನೂ ನಿಮ್ಮ ಹುಚ್ಚು ಬಿಟ್ಟಿಲ್ಲವೆಂದು ಕಾಣುತ್ತದೆ'' ಎಂದರು.

ಅವರಿಗೆ ಉತ್ತರಕೊಡುವ ಹವ್ಯಾಸಕ್ಕೆ ನಾನು ಹೋಗಲಿಲ್ಲ. ಈ ಸಲದ ಪ್ರಯೋಗವನ್ನು ಯಶಸ್ವಿಯನ್ನಾಗಿ ಮಾಡಲು ನಾನೊಂದು ಯೋಜನೆ ಹಾಕಿಕೊಂಡಿದ್ದೆ.

ಆ ಯೋಜನೆಯಂತೆ ಹುಬ್ಬಳ್ಳಿಯ ಮರಾಠಿ ಶಾಲೆಗಳತ್ತ ನನ್ನ ಗಮನ ಹರಿಸಿದೆ.

ಆಗ ಹುಬ್ಬಳ್ಳಿಯ ಮರಾಠಿ ಶಾಲೆಯಲ್ಲಿ ಸೊಲ್ಲಾಪುರದಿಂದ ವರ್ಗವಾಗಿ ಬಂದ ಶ್ರೀ ಘಾಟಕ ಎಂಬ ಶಿಕ್ಷಕರಿದ್ದರು. ನಾನು ಒಮ್ಮೆ ಅವರ ಕ್ಲಾಸಿನಲ್ಲಿದ್ದೆ. ಅವರ ಪ್ರೀತಿಯನ್ನೂ ಸಂಪಾದಿಸಿದೆ. ನಮ್ಮನ್ನು ಕಂಡಾಗ ಅವರು ಪ್ರೀತಿಯಿಂದ ಸ್ವಾಗತಿಸಿದ್ದಲ್ಲದೆ ನಮ್ಮ ಯೋಜನೆಗೆ ಸಹಾಯ ಮಾಡಲು ಆನಂದದಿಂದ ಒಪ್ಪಿಕೊಂಡರು.

ಪ್ರತಿಯೊರ್ವ ವಿದ್ಯಾರ್ಥಿ ಎರಡಾಣೆ ತರಬೇಕು, ಕೂಡಿದ ಹಣದಿಂದ ಮಾಸ್ತರರ ಸಹಿತ ಇಡೀ ವರ್ಗದ ಫೋಟೊ ತೆಗೆಸಬೇಕು ಎಂಬ ನಮ್ಮ ಯೋಜನೆಗೆ ಅವರು ಒಪ್ಪಿದರು. ನಾವು ತೆಗೆದ ಫೋಟೊ ಕಂಡು ಎಲ್ಲ ಹುಡುಗರು ಸಂತೋಷಗೊಂಡರು. ಅದನ್ನು ಕಂಡು ಇತರ ವರ್ಗಗಳೂ ಅವರನ್ನು ಅನುಸರಿಸಿದ್ದೇನೂ ಆಶ್ಚರ್ಯವಲ್ಲ. ನಮ್ಮ ಹೆಸರು ಇದರಿಂದ ಹಬ್ಬಿತು. ನಮಗೆ ದೊರೆತ ಕೆಲಸವನ್ನು ಮಾಡಿ ಪೂರೈಸುವದೂ ಜಡವಾಯಿತು. ರಜೆ ಮುಗಿಯುವದರೊಳಗಾಗಿ ನಾವು ನೂರು ರೂಪಾಯಿಗಳಷ್ಟು ಗಳಿಸಿದೆವು.

ಹುಬ್ಬಳ್ಳಿಯನ್ನು ಬಿಡುವಾಗ, ಮಾವನ ನಿರೋಪ ತೆಗೆದುಕೊಳ್ಳುತ್ತ, "ನಮಗೆ ಹುಚ್ಚು ಹಿಡಿದಿತ್ತು ಎಂದು ಇನ್ನೇನೂ ನೀವು ಅನ್ನುವದಿಲ್ಲವಲ್ಲ" ಎಂದು ಮೆಲ್ಲಗೆ ಅಂದೆ.

ಯಾವ ಫೋಟೋದಿಂದ ನಾನು ನನ್ನ ಜೀವನದಲ್ಲಿಯ ಮೊದಲನೆಯ ರೂಪಾಯಿಯನ್ನು ಗಳಿಸಿದೆನೋ ಅದರ ಮಹತ್ವ ನನಗೆಷ್ಟು ಅನಿಸುತ್ತಿರಬೇಕು ಎಂದು ಬೇರೆ ಹೇಳಬೇಕೆ? ನಾನು ಆ ಫೋಟೊವನ್ನು ಜಾಗ್ರತೆಯಿಂದ ಕಾದಿಟ್ಟಿರುವದರಿಂದಲೇ ಈಗ ೫೦ ವರ್ಷಗಳ ನಂತರ ಅದನ್ನು ಮುದ್ರಿಸಿ ಪ್ರಕಟಿಸುವ ಯೋಗ ನನಗೆ ದೊರೆತಿದೆ.



**ಆಲಸ್ಯವು ವ್ಯಕ್ತಿಯ ಜೀವನ್ ಮರಣವಾಗಿದೆ.** —ಜೆರಿಮೀ ಟೇಲರ್

**ಅಜ್ಞಾನವು ಚಂದ್ರತಾರೆಗಳಿಲ್ಲದ ಒಂದು ರಾತ್ರಿಯೇ ಸೈ.** —ಕನಫ್ಯೂಶಿಯಸ್

**ಸುಖದುಃಖಗಳು ನಮಗೆ ದೊಡ್ಡವಾದಾಗ ಜಗತ್ತು ಸಣ್ಣದಾಗಿ ಕಾಣುತ್ತದೆ.**
—ಖಲೀಲ ಗಿಬ್ರಾನ್

**ಹೆದರಬೇಡ ; ಹಿಂಜರಿಯಬೇಡ ; ಆತ್ಮಸಮರ್ಪಣೆ ಮಾಡಬೇಡ; ಜಯ ಪರಾಜಯಗಳಲ್ಲಿ ಜೀವನ ಮೃತ್ಯುಗಳಲ್ಲಿ ಇಹಲೋಕ ಪರಲೋಕಗಳಲ್ಲಿ ಸದಾ ಸ್ಪರ್ಧಿಸುತ್ತಿರು.** —ಶುಕ್ರಾಚಾರ್ಯ

ಹಾಲು ಅಮೃತ—ಆದರೆ ಕೆಲವರಿಗೆ
ವಿಷವೂ ಆಗಬಹುದು

# ಹಾಲನ್ನು ನೀವೆಷ್ಟು ಬಲ್ಲಿರಿ ?

ಅನುವಾದ : 'ಚಂದು'

ಭೂಮಿಯ ಮೇಲೆ ವಾಸಿಸುವ ಜೀವ-ರಾಶಿಗಳಿಂದ ನೈಸರ್ಗಿಕವಾಗಿ ಉತ್ಪತ್ತಿಯಾಗುವ ಆಹಾರಗಳಲ್ಲಿ ಹಾಲಿನಷ್ಟು ಉತ್ಕೃಷ್ಟವಾದದ್ದು ಬೇರೊಂದಿಲ್ಲ. ಹಾಲಿನ ಸೃಷ್ಟಿಯ ಉದ್ದೇಶವೇ ಆಹಾರ. ಆದ್ದರಿಂದ ಮನುಷ್ಯ ಹಾಲನ್ನು ಜೀವಧಾರಣೆಗಾಗಿ, ಆರೋಗ್ಯಕ್ಕಾಗಿ ಉಪಯೋಗಿಸುತ್ತಾನೆ. ಈ ಹಾಲಿನ ಕತೆ ಅತ್ಯಂತ ಪ್ರಾಚೀನವಾದುದು; ಇದಕ್ಕೆ ಪೌರಾಣಿಕ ಹಿನ್ನೆ-ಲೆಯೂ ಇದೆ.

ಪುರಾತನ ಹಿಬ್ರೂ ಜನಾಂಗದವರು ದ್ರಾಕ್ಷಾರಸವನ್ನು ಯಥೇಚ್ಛವಾಗಿ ಕುಡಿಯುತ್ತಿದ್ದಂತೆಯೇ ಹಾಲನ್ನೂ ಕುಡಿಯುತ್ತಿದ್ದರು. ಪ್ರಾಚೀನ ಗ್ರೀಸ್ ದೇಶದ ಜಟ್ಟಿಗಳು ದೇಹಪುಷ್ಟಿಗಾಗಿ ಹಾಲನ್ನು ಅಧಿಕ ಪ್ರಮಾಣದಲ್ಲಿ ಸೇವಿಸುತ್ತಿದ್ದರು. ಗ್ರೀಕ್ ಮಹಿಳೆಯರು, ಹಾಲಿನ ಸೇವನೆಗಿಂತಲೂ, ಹಾಲಿನ ಸ್ನಾನವನ್ನು ಅತ್ಯಂತ ಪ್ರೀತಿಸುತ್ತಿದ್ದರು. ಹಾಲಿನ ಸ್ನಾನ, ಅನೇಕ ಶತಮಾನಗಳಿಂದ ಜನಪ್ರಿಯತೆ ಹೊಂದಿದ್ದರೂ ಈಜುವ ಕೊಳವನ್ನು ಹಾಲಿನಿಂದ ತುಂಬುತ್ತಿದ್ದುದು ವಿಸ್ಮಯಕಾರಿ ಅಂಶವಾಗಿದೆ! ಕೆಲವು ವರ್ಷಗಳ ಹಿಂದೆ ಅಮೇರಿಕದ ನಗರಸಭೆಯೊಂದರ ಆಶ್ರಯದಲ್ಲಿ ನಡೆದ ಈಜುವ ಪಂದ್ಯಕ್ಕಾಗಿ ಒಂದು ಕೊಳವನ್ನು ಹಾಲಿನಿಂದ ತುಂಬಿದ್ದರು! ಆ ಹಾಲು ಬೆಣ್ಣೆಯಾಗುವವರೆಗೂ ಅಲ್ಲೇ ಬಿಟ್ಟಿದ್ದರು!

ಒಂದು ಲೋಟ ಹಾಲು ಮನುಷ್ಯನ ದೇಹದಲ್ಲಿ ಒಂದು ಗಂಟೆಯೊಳಗೆ ಜೀರ್ಣವಾಗುತ್ತದೆ. 'ಬ್ರೆಡ್' ಜೀರ್ಣವಾಗಬೇಕಾದರೆ ಎರಡೂವರೆ ಗಂಟೆಗಳೂ ಮಾಂಸಾಹಾರ ಪಚನವಾಗಲು ಮೂರೂವರೆ ಗಂಟೆಗಳೂ ಬೇಕಾಗುತ್ತವೆ. ಮಾನವ ಸೇವಿಸುವ ಕೊಬ್ಬುಗಳಲ್ಲೆಲ್ಲ ಹಾಲಿನ ಕೊಬ್ಬು ಅತ್ಯಂತ ಸುಲಭವಾಗಿ ಜೀರ್ಣವಾಗುವಂಥದು.

ಹಸುವಿನ ಹಾಲು ಶ್ರೇಷ್ಠ ಆಹಾರವಾದರೂ ಅದರಲ್ಲಿ ಕೊಬ್ಬಿನ ಪ್ರಮಾಣ ಕಡಿಮೆ. ಆಡಿನ ಹಾಲಿನಲ್ಲಿ ಹಸುವಿನ ಹಾಲಿಗಿಂತ ಒಂದೂವರೆಯಷ್ಟು ಹೆಚ್ಚು ಕೊಬ್ಬಿದೆ. ಅತ್ಯಧಿಕ ಪ್ರಮಾಣದಲ್ಲಿ ಕೊಬ್ಬುಳ್ಳದ್ದು ತಿಮಿಂಗಿಲದ ಹಾಲು; ಈ ಹಾಲಿನಲ್ಲಿ, ಹಸುವಿನ ಹಾಲಿಗಿಂತ ಐದರಷ್ಟು ಕೊಬ್ಬಿದೆ. ತಿಮಿಂಗಿಲದ ಹಾಲು ನೀರಿನೊಂದಿಗೆ ಮಿಶ್ರಗೊಳ್ಳುವುದಿಲ್ಲ! ಶೀತ ದೇಶದ ಹಾಲಿನಲ್ಲಿರುವುದಕ್ಕಿಂತ ಉಷ್ಣ ದೇಶದ ಹಾಲಿನಲ್ಲಿ ಅಧಿ-ಕಾಂಶ ಕೊಬ್ಬು ಇರುವುದು ವಿಚಿತ್ರ ವಿಷಯ.

ಉಷ್ಣದೇಶಗಳಲ್ಲಿ ಹಾಲನ್ನು ಉತ್ಪತ್ತಿಮಾಡುವ ಪ್ರಾಣಿಗಳಲ್ಲಿ ಆಡು ಪ್ರಥಮ ಸ್ಥಾನ ಗಳಿ-ಸುತ್ತದೆ. ಹಳದೀ ಹೂ ಬಿಡುವ ಸಸ್ಯಗಳು (Buttercups), ಪ್ರಾಣಿಗಳ ಹಾಲಿನ, ಅಥವಾ ಅದರಿಂದ ತಯಾರಿಸುವ ಬೆಣ್ಣೆಯ

'ಬರ್ಮಿಂಗಹ್ಯಾಂ ಪೋಸ್ಟಿ'ನಿಂದ ಸಂಗ್ರಹ

ಗುಣವನ್ನು ಹೆಚ್ಚಿಸಲಾರವು. ಕೊಬ್ಬಿನ ಮೇಲೆ ಕಾಣುವ ಹಳದಿವರ್ಣವು, ಹುಲ್ಲು ಹೀರಿರುವ ಸೂರ್ಯಕಿರಣಗಳಿಂದ ಉಂಟಾದುದೆಂದೂ ಇದನ್ನು ಬೇಸಿಗೆಯ ಕಾಲದಲ್ಲಿ ಸೂಕ್ಷ್ಮವಾಗಿ ಪರೀಕ್ಷಿಸಬಹುದೆಂದೂ ತಜ್ಞರು ಹೇಳಿದ್ದಾರೆ.

ಬೇಸಿಗೆಯ ಹಾಲಿನಲ್ಲಿ, ಚಳಿಗಾಲದ ಹಾಲಿಗಿಂತ ನಾಲ್ಕರಷ್ಟು ಹೆಚ್ಚು "ಡಿ" ಅನ್ನಾಂಗ (ವಿಟಾಮಿನ್) ಇರುತ್ತದೆ. ಹಾಲು ತುಂಬಿದ ಪಾತ್ರೆಯನ್ನು ಅರ್ಧ ಗಂಟೆಯ ಕಾಲ, ಬಿಸಿಲಿನಲ್ಲಿ ಮುಚ್ಚದೆ ಇಟ್ಟರೆ, ಹಾಲಿನಲ್ಲಿರುವ ಸಂಪೂರ್ಣ "ಸಿ" ಅನ್ನಾಂಗ ಸತ್ವವು ನಾಶವಾಗುತ್ತದೆ. ಇದಕ್ಕಾಗಿಯೇ ಈ ಅಮೂಲ್ಯ ಆಹಾರಸತ್ವವನ್ನುಳಿಸಲು ಮುಚ್ಚಿದ ಪಾತ್ರದಲ್ಲಿ ಹಾಲು ಕುದಿಸಬೇಕೆನ್ನುವುದು.

ಸಾಮಾನ್ಯ ದರ್ಜೆಯ ಹಸುವಿನ ಒಂದು ಗ್ಯಾಲನ್ ಹಾಲಿನಲ್ಲಿ ೧೪೪ ಔನ್ಸ್ ನೀರು, ೬ ಔನ್ಸ್ ಸಸಾರಜನಕ (protein) ೭¾ ಔನ್ಸ್ ಸಕ್ಕರೆ, ೧¾ ಔನ್ಸ್ ಖನಿಜಾಂಶಗಳು ಇರುತ್ತವೆ. ಕೊಬ್ಬು ಹಾಲಿನಲ್ಲಿ ಚಿಕ್ಕಚಿಕ್ಕ ಗೋಲಕಗಳಾಗಿ ಸೇರಿಕೊಂಡಿರುತ್ತದೆ. ಇಂಥ, ೧೨,೦೦೦ ಗೋಲಕಗಳನ್ನು ಸಾಲಾಗಿ ಒಂದಕ್ಕೊಂದು ತಗಲಿಸಿಟ್ಟರೆ ಒಂದಿಂಚಿನಷ್ಟು ಉದ್ದವಾಗಬಹುದು. ಈ ಸೂಕ್ಷ್ಮ ಕೊಬ್ಬಿನ ಕಣಗಳಿಂದಲೇ ಹಾಲು ಬಿಳಿಯ ವರ್ಣವನ್ನು ಹೊಂದಿರುವುದು. ಹಾಲಿನ ಭೌತಿಕ ಮತ್ತು ರಾಸಾಯನಿಕ ರಚನೆ ವಿಜ್ಞಾನಿಗಳಿಗೆ ಸ್ಪಷ್ಟವಾಗಿ ತಿಳಿದಿದ್ದರೂ ಕೃತಕ ಹಾಲಿನ ತಯಾರಿಕೆಯ ಯತ್ನವೆಲ್ಲ ವಿಫಲಗೊಂಡಿದೆ.

ಹಾಲನ್ನು ನಿಧಾನವಾಗಿ ಚಪ್ಪರಿಸಿಕೊಂಡು ಕುಡಿಯುವುದಕ್ಕಿಂತ ಗಟಗಟನೆ ಕುಡಿಯುವುದು ಒಳ್ಳೆಯದೆಂದು ವೈದ್ಯಕೀಯ ತಜ್ಞರ ಹೇಳಿಕೆ. ಬೇಗನೆ ಹಾಲನ್ನು ಕುಡಿಯುವುದರಿಂದ ಅದು ದೇಹದಲ್ಲಿ ಶೀಘ್ರವಾಗಿ ಜೀರ್ಣವಾಗಿ ರಕ್ತಗತವಾಗುತ್ತದೆ. ಹಾಲನ್ನು ನಿಧಾನವಾಗಿ ಚಪ್ಪರಿಸಿ ಕುಡಿಯುವುದರಿಂದ, ಹಾಲು ಹೊಟ್ಟೆಯಲ್ಲಿ ಹೆಪ್ಪುಗಟ್ಟಿಕೊಳ್ಳುತ್ತದೆ; ಮತ್ತು ಜೀರ್ಣವಾಗಲು ಹೆಚ್ಚು ಕಾಲ ಬೇಕಾಗುತ್ತದೆ.

**ಭಾರತೀಯ ವೈದ್ಯಕದಲ್ಲಿ ಹಾಲಿಗೆ ಅತಿಶಯ ಮಹತ್ವವೀಯಲಾಗಿದೆ. ವಾಗ್ಭಟನು 'ಅಷ್ಟಾಂಗ ಹೃದಯ' ದಲ್ಲಿ ಆಕಳ ಹಾಲಿನ ಗುಣವರ್ಣನೆ ಮಾಡುತ್ತ ಅದು ಧಾತುವರ್ಧಕ, ಗಾಯಗೊಂಡವರಿಗೂ ಕ್ಷೀಣರಿಗೂ ಹಿತ, ಬುದ್ಧಿಬಲವರ್ಧಕ; ಶ್ರಮ, ಭ್ರಮ, ಮದ, ಕಾಂತಿಹೀನತೆ, ಕೆಮ್ಮು, ದಮ್ಮು, ನೀರಡಿಕೆ, ಹಸಿವೆ ಇತ್ಯಾದಿಗಳನ್ನು ಕಳೆಯುತ್ತದೆಂದಿದ್ದಾನೆ.**

**ಆಯುರ್ವೇದದ ಪ್ರಕಾರ ಕರೀ ಆಕಳ ಹಾಲು ಸರ್ವಶ್ರೇಷ್ಠ! ಬೇರೆ ಬೇರೆ ಬಣ್ಣದ ದನಗಳ ಹಾಲಿಗೆ ಬೇರೆ ಬೇರೆ ಗುಣಗಳನ್ನು ಅವರು ಹೇಳಿದ್ದಾರೆ! ಆಕಳ ಆಹಾರ ಭೇದದಿಂದಲೂ ಹಾಲಿನ ಗುಣಭೇದಗಳಾಗುತ್ತವೆಂದು ಅವರ ಮತ.**

**ಆಡು, ಕುರಿ, ಎಮ್ಮೆಯ ಹಾಲುಗಳಲ್ಲದೆ ಕತ್ತೆ, ಕುದುರೆ, ಆನೆಗಳ ಹಾಲಿನ ಗುಣಗಳನ್ನೂ ಅವು ಎಂಥೆಂಥ ಪ್ರಕೃತಿಯವರಿಗೆ ಹಿತ-ಅಹಿತ ಎಂಬುದನ್ನೂ ಭಾರತೀಯ ವೈದ್ಯರು ವಿವರಿಸಿದ್ದಾರೆ.**

ಹಾಲು ಅಮೃತವೆನಿಸಿದ್ದರೂ ಅದು ಎಲ್ಲರಿಗೂ ಹಿತಮಾಡುವುದಿಲ್ಲ. ಐದು ಮಂದಿಗೆ ಒಬ್ಬನಂತೆ ಹಾಲನ್ನು ಜೀರ್ಣ ಮಾಡಿಕೊಳ್ಳುವ ಶಕ್ತಿಯಿರುವುದಿಲ್ಲ! ಹದಿನೈದು ಮಂದಿಯಲ್ಲಿ ಒಬ್ಬನಿಗೆ ಹಾಲು ವಿಷಪ್ರಾಯವಾಗಿ ಪರಿಣಮಿಸುತ್ತದೆ!

ಸುಪ್ರಸಿದ್ಧ ವೆನಿಸ್ ಪ್ರವಾಸಿ ಮಾರ್ಕೊ ಪೋಲೋವಿನ ಹೇಳಿಕೆಯ ಪ್ರಕಾರ ಹದಿನಾಲ್ಕನೇ ಶತಮಾತನದ ಮಂಗೋಲಿಯನ್ನರು ದೀರ್ಘ ಪ್ರವಾಸದ ಕಾಲದಲ್ಲಿ, ಹತ್ತು ಹತ್ತು ಪೌಂಡ್ ತೂಕದ ಒಣಗಿದ ಹಾಲಿನ ಇಟ್ಟಿಗೆ

ಗಳನ್ನು ತೆಗೆದುಕೊಂಡು ಹೋಗುತ್ತಿದ್ದರು! ಪ್ರತಿದಿನ ಪ್ರಾತಃಕಾಲ ಈ ಇಟ್ಟಿಗೆಯ ಚೂರನ್ನು ಚರ್ಮದ ಚೀಲದಲ್ಲಿಟ್ಟು, ಅದಕ್ಕೆ ನೀರು ಬೆರೆಸಿ, ತಮ್ಮಲ್ಲಿದ್ದ ಕತ್ತೆಗಳ ಜೀನಿನಿಂದ ಮಂಥನ ಮಾಡುತ್ತಿದ್ದರು. ಈ ರೀತಿ ಕೆಲವು ಮೈಲುಗಳ ಪ್ರವಾಸ ಮಾಡಿದ ನಂತರ ಹಾಲು ಸೇವನೆಗೆ ಸಿದ್ಧವಾಗುತ್ತಿತ್ತು.

ಹಾಲು ಸಿಡಿಲಿನ ಶಬ್ದದಿಂದ ಹುಳಿಯಾಗುವುದೆಂಬ ನಂಬಿಕೆ ಸರಿಯಲ್ಲ; ಸಿಡಿಲು ಹೊಡೆಯುವುದಕ್ಕೆ ಮುಂಚೆ ವಾತಾವರಣದಲ್ಲಿ ಉತ್ಪತ್ತಿಯಾಗುವ ಪ್ರಚಂಡ ಶಾಖದ ಪರಿಣಾಮವಾಗಿ ಹಾಲು ಹುಳಿಯಾಗುತ್ತದೆಂದು ತಜ್ಞರು ಹೇಳುತ್ತಾರೆ.

ಪ್ರತಿವರ್ಷವೂ ಹಸುಗಳ ನರದೌರ್ಬಲ್ಯದ ಫಲವಾಗಿ ಲಕ್ಷಾಂತರ ಗ್ಯಾಲನ್ ಹಾಲು ನಷ್ಟವಾಗುತ್ತದೆ. ಹಸುವನ್ನು ಹೆದರಿಸಿದರೆ, ಅಪರಿಚಿವಾದ ವಾತಾವರಣದಲ್ಲಿ ಕಟ್ಟಿದರೆ, ಮೊದಲು ಪ್ರೀತಿಯಿಂದ ಪಾಲಿಸಿ ಪೋಷಿಸಿ ಕ್ರಮೇಣ ಅನಾಸಕ್ತಿ ತೋರಿಸಿದರೆ, ಹಾಲಿನ ಪ್ರಮಾಣ ಕಡಿಮೆಯಾಗುತ್ತದೆ; ಎಷ್ಟೋ ಸಂದರ್ಭಗಳಲ್ಲಿ ಹಾಲು ಬತ್ತಿಹೋಗುವುದೂ ಉಂಟು. ಹಸುಗಳಿಗೆ ಹೊಟ್ಟೆಯ ತುಂಬ ಆಹಾರ ಮತ್ತು ನೀರು ಕೊಡುವುದರ ಜೊತೆಗೆ, ಸಂತೋಷದಾಯಕವಾಗಿರುವಂತೆ, ಸುಖವಾಗಿರುವಂತೆ ಅವುಗಳನ್ನು ನೋಡಿಕೊಳ್ಳಬೇಕೆಂಬುದನ್ನು ಹಸುಗಳ ಪಾಲಕರು ಮನಗಂಡಿದ್ದಾರೆ.

ಇಂತಹ ಉಜ್ವಲ ಇತಿಹಾಸವುಳ್ಳ ಹಾಲು, ದೇವತೆಗಳ ಮತ್ತು ಮನುಷ್ಯನ ಆರಾಧ್ಯವಸ್ತುವಾಗಿದೆ; ಅಮೃತವಾಗಿದೆ; ಮಕ್ಕಳ ಪ್ರಥಮ ಆಹಾರವಾಗಿದೆ. ದೇಹದ ಬೆಳವಣಿಗೆಗೆ ಮತ್ತು ವೃದ್ಧಾಪ್ಯದ ಸುಖಸಾಧನೆಗೆ ಮುಖ್ಯವಾದುದಾಗಿದೆ. ಸುಖಿ ರಾಜ್ಯದಲ್ಲಿ ಹಾಲು-ಜೇನುಗಳ ಹೊಳೆ ಹರಿಯುತ್ತಿತ್ತೆಂಬುದು ಅತಿಶಯೋಕ್ತಿಯಾಗಿರದೆ ವಸ್ತುಸ್ಥಿತಿಯಾಗಿತ್ತು.



## ಗೊತ್ತಿಲ್ಲದ ವಿದ್ಯೆ

ಲೋಭಿಯೊಬ್ಬನ ಮನೆಗೆ ಬೇಡಲು ಬಂದ ಭಿಕ್ಷುಕ ಕೆಲವು ಹಾಡುಗಳನ್ನು ಹೇಳಿದನು. "ಇದೇನು ಮಹಾ? ಹೀಗೆ ನಾನೂ ಹಾಡುತ್ತೇನೆ'' ಎಂದು ಲೋಭಿ ತಾನೂ ಕೆಲವು ಪದ್ಯಗಳನ್ನು ಹಾಡಿದ.

ಆಗ ಭಿಕ್ಷುಕ ಇಂದ್ರಜಾಲ ಮಾಡಿ ತೋರಿಸಿದನು. ಅದನ್ನು ತಾನೂ ಬಲ್ಲೆನೆಂದು ಲೋಭಿ ಪಟ್ಟುಹಿಡಿದನು.

ಈಗ ಭಿಕ್ಷುಕನಿಗೆ ಬೇಸರವಾಯಿತು. "ಅಯ್ಯೊ, ನೀವು ಸಮಸ್ತ ವಿದ್ಯೆಗಳನ್ನು ಕಲಿತಿರುವಿರಿ. ಆದರೆ ನನಗೆ ಬರುವ ಒಂದು ವಿದ್ಯೆ ನಿಮಗೆ ಬರುವುದಿಲ್ಲ. ನಾನು ಭಿಕ್ಷೆ ಬೇಡುತ್ತೇನೆ. ನಿಮಗೆ ಸಾಧ್ಯವೆ?''

ಲೋಭಿಗೆ ನಾಚಿಕೆಯಾಯಿತು. ಅವನು ತೆಪ್ಪಗೆ ಭಿಕ್ಷೆಹಾಕಿ ಭಿಕ್ಷುಕನನ್ನು ಕಳಿಸಿದನು.

—ವಿ. ಎಸ್. ಹೆಗಡೆ

ಅಜಂತದ ಗೋವಳರಲ್ಲಿ
ಪ್ರಚಲಿತವಾದ ಒಂದು
ಜಾನಪದ ಕಥೆ

# ಪಾರಿಜಾತ

ಸಿ. ಬಿ. ಸೀತಾರಾಂ

ಅಜಂತದ ಮಹಾಚೈತ್ಯದಿಂದ ಮಹಾಘಂಟಾನಾದ ಧೀರ ಗಂಭೀರವಾಗಿ ಕೇಳಿಬರುತ್ತಿತ್ತು. ಈ ಮಹಾನಾದ ದಿಕ್ಕು ದಿಕ್ಕುಗಳಲ್ಲಿ ಹಬ್ಬಿ, ಬೆಟ್ಟ ಬೆಟ್ಟಗಳಲ್ಲಿ ಮರುದನಿಯಾಗಿ, ತೊರೆಯ

'ಪ್ರಬುದ್ಧ ಕರ್ನಾಟಕ' ದಿಂದ

ನೊರೆಯಲ್ಲಿ ಬೆರೆತು, ಹಕ್ಕಿಗಳಿಂಚರದಲ್ಲಿ ಕಲೆತು, ಭೂವ್ಯೋಮಾಕಾಶಗಳನ್ನು ತುಂಬಿ ಸುತ್ತಣ ವಿಹಾರಗಳಲ್ಲಿ ನಿದ್ರಾವಶರಾಗಿದ್ದ ಬ್ರಹ್ಮಚಾರಿಗಳನ್ನು ಹೊಡೆದೆಬ್ಬಿಸುತ್ತಿತ್ತು.

ಕುಮಾರ ಜಯಪಾಲನು ಕಠಿಣವಾದ ಕಲ್ಲು ಹಾಸಿಗೆಯಿಂದ ಎಲ್ಲರಿಗಿಂತ ಮೊದಲೇ ಏಳುತ್ತಿದ್ದನು. ಪ್ರಾತಃಕಾಲದಲ್ಲಿ ವಾಘೋರೆ ನದಿಯ ತೀರದಲ್ಲಿ ಏಕಾಂಗಿಯಾಗಿ ಸಂಚಾರ ಹೊರಡುವುದು ಅವನ ಪದ್ಧತಿಯಾಗಿತ್ತು. ಬ್ರಹ್ಮಚರ್ಯದಿಂದ ಲಭಿಸಿದ ಶಕ್ತಿವಿಶೇಷದಿಂದ ಹುಲ್ಲೆಯಂತೆ ಚಿಮ್ಮಿ ನಡೆಯುತ್ತಿದ್ದನು. ನದಿಯ ತಿರುಗಣೆಯ ಬಳಿ ಅವನ ಪ್ರೀತಿಪಾತ್ರವಾದ ಅಶೋಕ ವೃಕ್ಷವೊಂದು ಮುಗಿಲು ಮುಟ್ಟುವಂತೆ ನಿಂತಿತ್ತು. ದೆಸೆದೆಸೆಗೆ ಹಬ್ಬಿದ್ದ ಅದರ ಕೊಂಬೆಗಳ ಕೆಳಗೆ ಕುಳಿತು ಭಗವಾನ್ ಬುದ್ಧನಲ್ಲಿ ಮನವನ್ನು ನೆಲೆಗೊಳಿಸಿ ಧ್ಯಾನಾಸಕ್ತನಾಗುತ್ತಿದ್ದನು.

ಜಯಪಾಲನು ಯುವಕನಾದರೂ ಅವನ ಇಂದ್ರಿಯನಿಗ್ರಹ ಅತಿಶಯವಾಗಿತ್ತು. ವೈರಾಗ್ಯ ಶಿಖರವನ್ನು ಮುಟ್ಟಿದ್ದ ಅವನಿಗೆ ಮಹಾಭಿಕ್ಷುವು ದೀಕ್ಷೆಯನ್ನು ಕೊಡಲು ಸಿದ್ಧನಾಗಿದ್ದನು. ಒಂದೆರಡು ಪರೀಕ್ಷೆಗಳನ್ನು ಯಶಸ್ವಿಯಾಗಿ ಮುಗಿಸಿದರೆ ಅವನು ಭಿಕ್ಷುಸಂಘವನ್ನು ಸೇರಲು ಅಡ್ಡಿಯಿರಲಿಲ್ಲ.

ಶರತ್ಕಾಲದ ಸುಪ್ರಭಾತ. ಸೂರ್ಯದೇವನು ಉದಯಗಿರಿಯನ್ನಡರಿ ಹೂ ತಳಿರುಗಳಿಗೆ ಕಚಗುಳಿಯಿಡುತ್ತಿದ್ದನು. ವೃಕ್ಷಮೂಲದಲ್ಲಿ ಗಭೀರ ಧ್ಯಾನದಲ್ಲಿ ಮುಳುಗಿದ್ದ ಜಯಪಾಲನ ಮನಸ್ಸು ಏಕೋ ಏನೋ ವಿಚಲಿತವಾಯಿತು. ಮನೋಹರವಾದ ಸುಗಂಧವೊಂದು ಉಷಃಕಾಲದವಾಯುವಿನಲ್ಲಿ ಅಲೆಅಲೆಯಾಗಿ ತೇಲಿಬಂದು ಅವನ ಮೂಗನ್ನು ಹೊಕ್ಕಿತು. ತತ್ಕ್ಷಣವೇ ಅದನ್ನು ತಡೆಗಟ್ಟಲು ಪ್ರಯತ್ನಿಸಿದನು. ವಿರಾಗಿಯಾಗಲು ಬಯಸುವವನು ಇಂತಹ ಇಂದ್ರಿಯಚಾಪಲ್ಯವನ್ನು ನಿಗ್ರಹಿಸಬೇಕಲ್ಲವೇ? ನಿಗ್ರಹಿಸಬೇಕು, ದಿಟ; ಆದರೆ ಮನಮೋಹಕವಾದ ಆ ಸುಗಂಧವು ನಮ್ಮ ಬ್ರಹ್ಮಚಾರಿಯನ್ನು ಮಂತ್ರಪಾಶದಂತೆ ಅಡಸಿ ಕಟ್ಟಿತು.

ಆತುರದಿಂದ ತನ್ನ ಪ್ರಾತಃಕಾಲದ ಧ್ಯಾನವನ್ನು ಪೂರೈಸಿ ವಶೀಕರವಾದ ಆ ಪರಿಮಳ ತೇಲಿಬರುತ್ತಿದ್ದ ದೆಸೆಯನ್ನು ಕುರಿತು ಹೊರಟನು. ನೂರು ಹೆಜ್ಜೆ ಹೋಗಿರಬಹುದು, ಅವನ ಎದುರಿನಲ್ಲಿ ಸುಂದರವಾದ ಒಂದು ಪಾರಿಜಾತದ ಪೊದೆ; ಅದರ ಮೇಲೆ ಏಕಮಾತ್ರವಾದ ಪಾರಿಜಾತದ ಕುಸುಮ; ಆ ಏಕಮಾತ್ರ ಕುಸುಮ ನೂರಾರು ಮಾರು ದೂರ ಇಡೀ ವಾಯುಮಂಡಲವನ್ನು ತನ್ನ ಪರಿಮಳದಿಂದ ತುಂಬಿ ಬ್ರಹ್ಮಚಾರಿಯನ್ನು ಮೋಹಗೊಳಿಸಿತ್ತು. ಜಯಪಾಲನು ಆ ಹೂವನ್ನು ಕಿತ್ತು ಇನ್ನೇನು ಅದರ ಸುವಾಸನೆಯನ್ನು ಹೀರಬೇಕು.

ಅಷ್ಟರಲ್ಲಿ ಥಟ್ಟನೆ ಒಂದು ಯೋಚನೆ ಹೊಳೆಯಿತು. ಇಲ್ಲ, ಆ ಪುಷ್ಪದ ಪರಿಮಳವನ್ನು ತಾನು ಹೀರುವವನಲ್ಲ. ಅದನ್ನು ಶುದ್ಧವಾಗಿ ತನ್ನ ಪೂಜ್ಯಗುರು ಭಿಕ್ಷು ಧರ್ಮಪಾಲನಿಗೆ ಅರ್ಪಿಸಬೇಕು. ಬೇಗ ಬೇಗ ಗುಹೆಗೆ ಹಿಂದಿರುಗಿ ಚೈತ್ಯದಲ್ಲಿ ಪ್ರಭಾತಪೂಜಾನಿರತನಾಗಿದ್ದ ಗುರುವಿಗೆ ಅಭಿವಂದಿಸಿ ಭಕ್ತಿಯಿಂದ ಆ ಪಾರಿಜಾತ ಕುಸುಮವನ್ನು ಅವನಿಗೆ ಅರ್ಪಿಸಿದನು. ಗುರು ಆ ಪುಷ್ಪವನ್ನು ಸ್ವೀಕರಿಸಿದನು. ಆದರೆ ಅವನು ಅದರ ಸುಗಂಧವನ್ನು ಆಘ್ರಾಣಿಸಲಿಲ್ಲ. ಧರ್ಮಪಾಲನು ಆ ಮಲರನ್ನು ಗರ್ಭಗೃಹದಲ್ಲಿನ ಭಗವಾನ್ ಬುದ್ಧನ ಮಹಾಮೂರ್ತಿಯ ಅಡಿದಾವರೆಗಳಲ್ಲಿ ನಿವೇದಿಸಿದನು.

ಈ ಸುದ್ದಿ ವಿಹಾರದಿಂದ ವಿಹಾರಕ್ಕೆ ವಿದ್ಯುದ್ವೇಗದಿಂದ ಹರಡಿತು. ನೂರಾರು ಮಂದಿ ಭಿಕ್ಷುಕರು ತಥಾಗತನ ಅಡಿದಾವರೆಗಳಲ್ಲಿ ಅರ್ಪಿತವಾಗಿದ್ದ ದಿವ್ಯ ಪುಷ್ಪವನ್ನು ನೋಡಲು ಗುಂಪುಗುಂಪಾಗಿ ಧಾವಿಸಿದರು. ಅದರ ಪರಿಮಳ ಎಲ್ಲೆಲ್ಲೂ ಹರಡಿ ವಿಹಾರಗಳನ್ನು ಆನಂದದಲ್ಲಿ ತಲ್ಲೀನಗೊಳಿಸಿತು.

ಪ್ರತಿ ದಿನ ಪ್ರಾತಃಕಾಲ ಜಯಪಾಲನು ವಾಘೋರೆಯ ತೀರದಲ್ಲಿ ಸಂಚಾರ ಹೊರಡುವನು. ಆ ಏಕಮಾತ್ರ ಕುಸುಮವನ್ನು ಕಾಣುವನು. ಅದನ್ನು ಕಿತ್ತು ಧರ್ಮಪಾಲನಿಗೆ ಒಪ್ಪಿಸು

ವಸು. ಅವನು ಅದನ್ನು ಭಗವಂತನ ದಿವ್ಯ ಚರಣಗಳಲ್ಲಿ ನಿವೇದಿಸುವನು. ಒಂದೊಂದು ದಿನ ಜಯಪಾಲನು ಹೊತ್ತು ಮೀರಿ ಏಳುತ್ತಿದ್ದನು. ಅಂದು ಇತರ ಬ್ರಹ್ಮಚಾರಿಗಳೂ ಭಿಕ್ಷುಗಳೂ ಅವನಿಗೆ ಮುಂಚೆ ಪಾರಿಜಾತ ಪೊದೆಯನ್ನು ಸೇರುತ್ತಿದ್ದರು. ಆದರೆ ಆ ಕುಸುಮ ಅವರ ಕಣ್ಣಿಗೆ ಬೀಳುತ್ತಿರಲಿಲ್ಲ. ಜಯಪಾಲನಿಗೆ ಮಾತ್ರ ಅದು ಗೋಚರವಾಗುತ್ತಿತ್ತು. ಇದರಿಂದ 'ಜಯಪಾಲನ ಪಾರಿಜಾತ' ವನ್ನು ಕುರಿತು ಯತಿಗಳು ಹಾಸ್ಯ ಮಾಡಲು ಮೊದಲುಮಾಡಿದರು.

ದಿನಗಳು ಉರುಳಿದವು. ಜಯಪಾಲನ ದೀಕ್ಷಾಸಮಯ ಬಳಿಸಾರುತ್ತಿತ್ತು. ಕಿರಿಯ ಸೋದರನೊಬ್ಬನು ಕಾಷಾಯವಸ್ತ್ರವನ್ನು ಧರಿಸುವ ಮಂಗಳಮೂಹೂರ್ತವನ್ನೇ ಎಲ್ಲರೂ ಉತ್ಸಾಹದಿಂದ ಎದುರುನೋಡುತ್ತಿದ್ದರು. ಆದರೆ ಜಯಪಾಲನಿಗೆ ಮಾತ್ರ ಉತ್ಸಾಹವಿರಲಿಲ್ಲ. ಅವನು ಸದಾ ಉತ್ಕಂಠಿತನಾಗಿಯೇ ಇರುತ್ತಿದ್ದನು. ಪಾರಿಜಾತದ ಗೂಢವಾದ ಪರಿಮಳ ಅವನ ಹೃದಯವನ್ನು-ಭಗವಂತನಿಗೆ ಸಂಪೂರ್ಣವಾಗಿ ಶರಣಾಗಬೇಕಾಗಿದ್ದ ಅವನ ಹೃದಯವನ್ನು-ವಜ್ರದ ಸಂಕಲೆಯಿಂದ ಬಿಗಿಯುತೊಡಗಿತ್ತು. ಒಂದು ದಿನ ಬೆಳಿಗ್ಗೆ ಬ್ರಹ್ಮಚಾರಿ ಅಶ್ರುಪೂರ್ಣ ಲೋಚನನಾಗಿ ಗುರುವಿನ ಬಳಿಗೆ ಹೋಗಿ ತನ್ನ ಸಂತಾಪವನ್ನು ತೋಡಿಕೊಂಡನು. ಮರುದಿನ ಬೆಳಿಗ್ಗೆ ಜಯಪಾಲನು ಎಂದಿನಂತೆ ಗುರುವನ್ನು ಕಾಣಲು ಹೋದಾಗ ಧರ್ಮಪಾಲನು "ಬಾ ವತ್ಸ, ಭಗವಂತನನ್ನು ಸಂದರ್ಶಿಸಿ ಅಭಿವಂದಿಸೋಣ" ಎಂದನು. ಹೀಗೆ ಹೇಳಿ ಜಯಪಾಲನನ್ನು ಭಗವಂತನ ಪವಿತ್ರತಮ ಸಾನ್ನಿಧ್ಯಕ್ಕೆ ಕರೆದೊಯ್ದನು.

ಅಂದು ಮಹಾಭಿಕ್ಷು ಪ್ರಭಾತ ಪೂಜಾಕಾರ್ಯದಲ್ಲಿ ನಿಮಗ್ನನಾಗಿದ್ದನು. ಅಲ್ಲಿನ ದೃಶ್ಯ ಜಯಪಾಲನಲ್ಲಿ ಭಯ ವಿಸ್ಮಯಗಳನ್ನು ಉದ್ದೀಪಿಸುವಂತಿತ್ತು. ದಿವ್ಯ ಲೋಕವೊಂದನ್ನು ಸೇರಿದಂತೆ ಅವನಿಗೆ ಭಾಸವಾಯಿತು. ಸಾಲುಸಾಲಾಗಿ ನಿಂತಿದ್ದ ಕಾಷಾಯವಸ್ತ್ರಧಾರಿಗಳಾದ ಭಿಕ್ಷುಗಳು ಗಂಭೀರಕಂಠದಿಂದ:

ಬುದ್ಧಂ ಸರಣಂ ಗಚ್ಛಾಮಿ,
ಸಂಘಂ ಸರಣಂ ಗಚ್ಛಾಮಿ,
ಧಮ್ಮಂ ಸರಣಂ ಗಚ್ಛಾಮಿ

ಎಂಬ ಮಂತ್ರರತ್ನಗಳನ್ನು ಉಚ್ಚರಿಸುತ್ತಿದ್ದರು. ಚೈತ್ಯಕ್ಕೆ ಚೈತ್ಯವೇ ಭಕ್ತಿಭಾವದಿಂದ ಸ್ಪಂದಿಸುತ್ತಿತ್ತು.

ಗುರುವೂ ಶಿಷ್ಯನೂ ಗರ್ಭಗೃಹವನ್ನು ಸೇರಿ ಮಹಾಭಿಕ್ಷುವಿಗೆ ವಂದಿಸಿದರು. ಅವನ ಅಂತರ್ಯದಲ್ಲಿ ಕುಡಿಗೊಂಡಿದ್ದ ಶಾಂತಿ, ಕಾಂತಿಯುಕ್ತವಾದ ಮುಖಮಂಡಲದಿಂದ ಹೊರಸೂಸುತ್ತಿತ್ತು. ಅವನು ಒಂದು ಕ್ಷಣ ಕಣ್ದೆರೆದು ಬೆರಳಿಂದ ಸನ್ನೆ ಮಾಡಿದನು. ಧರ್ಮಪಾಲನು ತತ್‌ಕ್ಷಣವೇ ಅದರ ಅರ್ಥವನ್ನು ಗ್ರಹಿಸಿ ಜಯಪಾಲನು ತಂದ ಹೂವನ್ನು ಬುದ್ಧದೇವನ ಅಡಿದಾವರೆಗಳಲ್ಲಿ ಅರ್ಪಿಸಿದನು. ಭಗವಂತನ ಮುಖದಲ್ಲಿ ಮಂದಹಾಸವೊಂದು ಅರೆಕ್ಷಣ ನಲಿದಾಡಿ ಗಾಂಭೀರ್ಯಸಮುದ್ರದಲ್ಲಿ ಮುಳುಗಿಹೋಯಿತು.

ಭಿಕ್ಷುಗಳೆಲ್ಲರೂ ಹೊರಟುಹೋದ ಮೇಲೆ ಮಹಾಭಿಕ್ಷುವು ಅವರನ್ನು ಸಮೀಪಕ್ಕೆ ಕರೆದು 'ವತ್ಸ, ನೀನು ಬಂದ ಉದ್ದೇಶ ನನಗೆ ಗೊತ್ತು. ಸಪ್ತ ಕುಂಡದ ಸಮೀಪದಲ್ಲಿರುವ ಅಶೋಕವೃಕ್ಷದ ಬಳಿ ಈ ರಾತ್ರಿ ನನ್ನನ್ನು ಸಂಧಿಸು' ಎಂದು ಅವರನ್ನು ಆಶೀರ್ವದಿಸಿ ಬೀಳ್ಕೊಟ್ಟನು.

ಜಯಪಾಲನೂ ಅವನ ಗುರುವೂ ಅಜಂತದ ಬೆಟ್ಟಗಳನ್ನು ಅಡರಿದರು. ಅಲ್ಲಿ ವಾಘೋರೆ ಕಾಳಿಯಂತೆ ಕನಲಿ ಮೊರೆದು, ಉರಗಿಯಂತೆ ಹಾರಿ ಕುಣಿದು, ಬಾಲೆಯಂತೆ ಬಳುಕಿ ನಲಿದು, ನಾಟ್ಯವಿನ್ಯಾಸದಿಂದ ಏಳು ಸೀಳುಗಳಲ್ಲಿ ಇಳಿಯುತ್ತದೆ. ನದಿಯ ಮೂಲದ ಬಳಿ ಪುರಾತನವಾದ ಅಶೋಕವೃಕ್ಷವೊಂದು ಗಗನಚುಂಬಿಯಾಗಿ ನಿಂತಿತ್ತು. ಅದರ ಅಡಿಯಲ್ಲಿ ಮಹಾಭಿಕ್ಷುವು ಆಸೀನನಾಗಿದ್ದನು. ನಮ್ಮ ಗೆಳೆಯರಿಗೆ ಸುಸ್ವಾಗತ ಲಭಿಸಿತು. ತರುವಾಯ ಮಹಾಭಿಕ್ಷು ತಾನು ಹೇಳುವ ಕಥೆಯನ್ನು ಗಮನವಿಟ್ಟು ಕೇಳುವಂತೆ

ಅಪ್ಪಣೆ ಮಾಡಿದನು :

"ಬಹಳ ಹಿಂದೆ ಔತ್ತರೇಯ ರಾಜ್ಯವೊಂದನ್ನು ಸುಜನಪೋಷಕನೆಂಬ ರಾಜನು ಪಾಲಿಸುತ್ತಿದ್ದನು. ಅವನಿಗೆ ದೇವೀಪ್ರಿಯನೆಂಬ ಪುತ್ರನು ಹುಟ್ಟಿದನು. ತನ್ನ ರಾಜ್ಯಕ್ಕೆ ಉತ್ತರಾಧಿಕಾರಿಯಾದ ಆ ಏಕಮಾತ್ರ ಪುತ್ರನನ್ನು ಸುಜನಪೋಷಕನು ತನ್ನ ಪ್ರಾಣಕ್ಕಿಂತ ಅಧಿಕವಾಗಿ ಪ್ರೀತಿಸುತ್ತಿದ್ದನು. ಅವನನ್ನು ಕ್ಷತ್ರಿಯೋಚಿತವಾದ ವಿದ್ಯೆಗಳಲ್ಲಿ ಪರಿಣತನನ್ನಾಗಿ ಮಾಡಲು ಸಂಕಲ್ಪಿಸಿದನು. ಆದರೆ ದೇವೀಪ್ರಿಯನು ಪ್ರಹ್ಲಾದನಂತೆ ತನ್ನ ಐದನೆಯ ವರ್ಷದಿಂದಲೂ ಪ್ರಾಪಂಚಿಕ ಸುಖಭೋಗಗಳಲ್ಲಿ ಜಿಹಾಸೆಯನ್ನು ಹೊಂದಿ ಭಗವಾನ್ ಬುದ್ಧನಲ್ಲಿ ಅನನ್ಯ ಭಕ್ತಿಯನ್ನು ಪ್ರಕಟಿಸುತ್ತಿದ್ದನು. ಮಗನಿಗೆ ಹದಿನೆಂಟು ವರ್ಷ ವಯಸ್ಸಾಗುವ ವರೆಗೂ ರಾಜನು ಅವನ ಮನವನ್ನು ತಿರುಗಿಸಿ ಕ್ಷತ್ರಿಯಯೋಗ್ಯವಾದ ವಿದ್ಯೆಗಳಲ್ಲಿ ಶಿಕ್ಷಣವನ್ನೀಯಲು ಪ್ರಯತ್ನಿಸಿದನು. ನಯಭಯಗಳಿಂದ ಅವನನ್ನು. ದಾರಿಗೆ ತರಲು ಮಾಡಿದ ಪ್ರಯತ್ನಗಳೆಲ್ಲವೂ ವ್ಯರ್ಥವಾದವು. ಕೋಪ ಸಂತಾಪಗಳಿಂದ ಉರಿಯುತ್ತಿದ್ದ ರಾಜನು ಅವನನ್ನು ರಾಜ್ಯದಿಂದ ಹೊರಕ್ಕೆ ಓಡಿಸಿದನು.

ರಾಜನ ಕ್ರೌರ್ಯದಲ್ಲಿ ಮಗನು ತನ್ನ ಶ್ರೇಯಸ್ಸನ್ನು ಕಂಡನು. ತನಗೆ ದೊರೆತ ನೂತನ ಸ್ವಾತಂತ್ರ್ಯಕ್ಕಾಗಿ ಸಂತೋಷಿಸುತ್ತ ಬುದ್ಧದೇವನ ಗುಣಕೀರ್ತನೆ ಮಾಡುತ್ತ ಅನೇಕ ದೇಶಗಳಲ್ಲಿ ಸಂಚರಿಸಿದನು. ಒಂದು ದಿನ ಪ್ರಮಾದವಶದಿಂದ ಬೌದ್ಧರ ವೈರಿಯಾದ ಜ್ವಾಲಾನೇತ್ರನ ರಾಜ್ಯವನ್ನು ಪ್ರವೇಶಿಸಿದನು. ದೇವೀಪ್ರಿಯನ ಸುದೈವಕ್ಕೆ ರಾಜನು ಬೇಟೆಗಾಗಿ ಕಾಡಿಗೆ ಹೋಗಿದ್ದನು. ತರುಣನು ಬುದ್ಧನನ್ನು ಸ್ತುತಿಸಿ ಅರಮನೆಯ ಮಹಾದ್ವಾರದ ಬಳಿ ಭಿಕ್ಷೆಯನ್ನು ಬೇಡಿದನು. ರಾಜಕುಮಾರಿ ಸರ್ವಮಂಗಳೆ ಸ್ನಾನಾಂತರ ಬಿಸಿಲು ಮಚ್ಚಿನಲ್ಲಿ ನಿಂತು ತಲೆಗೂದಲನ್ನು ಒಣಗಿಸಿಕೊಳ್ಳುತ್ತಿದ್ದಳು. ರಾಜಕುಮಾರಿ ಭಗವಂತನ ಅಂತರಂಗಭಕ್ತೆಯಾಗಿದ್ದಳು. ಭಿಕ್ಷುಕವೇಷದಲ್ಲಿದ್ದ ಸುಂದರ ಯುವಕನು ರಾಜಕುಮಾರನೇ ಆಗಿರಬೇಕೆಂದು ಅವಳಿಗೆ ಸ್ಫುರಿಸಿತು. ಓಲೆಗರಿಯೊಂದರ ಮೇಲೆ ಮೊನೆಯಾದ ಉಗುರುಗಳಿಂದ ಸಂದೇಶವೊಂದನ್ನು ಬರೆದು, ಆ ಭಿಕ್ಷುಕನ ಕಾಲಿನ ಬಳಿ ಹಾಕಿದಳು. "ಶತ್ರುರಾಜ್ಯದಲ್ಲಿದ್ದೀಯೆ, ಆದರೂ ಎದೆಗೆಡಬೇಡ. ದಿನವೆಲ್ಲಾ ಎಲ್ಲಿಯಾದರೂ ಮರೆಯಾಗಿದ್ದು ಅರ್ಧ ರಾತ್ರಿಯ ಸಮಯದಲ್ಲಿ ಸ್ಮಶಾನದಲ್ಲಿರುವ ಹಾಳು ಮಂಟಪದಲ್ಲಿ ನನ್ನನ್ನು ಸಂಧಿಸು.-ನಿನ್ನ ಮನದನ್ನೆ."

ದೇವೀಪ್ರಿಯನು ಆ ಓಲೆಯನ್ನು ಎತ್ತಿಕೊಂಡನು. ಅದನ್ನು ಯಾರು ಹಾಕಿರಬಹುದೆಂದು ತಿಳಿಯಲು ತಲೆಯೆತ್ತಿನೋಡಿದನು. ಅವನ ಕಣ್ಣು ಸರ್ವಮಂಗಳೆಯ ಮೇಲೆ ಬಿತ್ತು. ರಾಜಕುಮಾರಿಯ ಸೌಂದರ್ಯಾತಿಶಯವನ್ನು ಕಂಡು ಸ್ತಂಭಿತನಾದನು. ಅವಳ ನೇತ್ರಗಳಿಂದ ಹೊರಹೊಮ್ಮುತ್ತಿದ್ದ ಸಕರುಣ ಪ್ರೇಮವಾಹಿನಿಯನ್ನು ಕಂಡು ಮುಗ್ಧನಾದನು. ಸರ್ವಮಂಗಳೆ ತತ್ಕ್ಷಣವೇ ಅಟ್ಟಾಲಕದಿಂದ ಅಂತಃಪುರಕ್ಕೆ ನಡೆದುಬಿಟ್ಟಳು. ಆ ಓಲೆಯನ್ನು ಓದಿಕೊಳ್ಳಲು ದೇವೀಪ್ರಿಯನು ಗುಪ್ತವಾದ ಪ್ರದೇಶವೊಂದನ್ನು ಸೇರಿದನು.

ಅದರ ಒಕ್ಕಣೆಯನ್ನು ಓದಿಕೊಂಡಾಗ ಅವನ ವೈರಾಗ್ಯಭಾವನೆಗೂ ಸರ್ವಮಂಗಳೆಯ ಮೇಲಣ ನೂತನ ಪ್ರೇಮಕ್ಕೂ ಒಂದು ದೊಡ್ಡ ಹೋರಾಟವೇ ನಡೆಯಿತು. ಕಡೆಗೆ ದೇವೀಪ್ರಿಯನು ರಾಜಕುಮಾರಿಯನ್ನು ಸ್ಮಶಾನದಲ್ಲಿ ಸಂಧಿಸಲು ಸಂಕಲ್ಪಿಸಿದನು. ಮನಸ್ಸೂ ದೇಹವೂ ಆಯಾಸಗೊಂಡಿರಲು ರಾಜಕುಮಾರನು ಗಾಢ ನಿದ್ರಾಸಕ್ತನಾಗಿದ್ದನು. ಅವನು ಬೆಚ್ಚಿಬಿದ್ದು ಎದ್ದಾಗ ಅರ್ಧರಾತ್ರಿ ಮೀರಿ ಹೋಗಿದ್ದಿತು. ರಾಜಕುಮಾರಿಯನ್ನು ಸಂಧಿಸಲು ಗೊತ್ತಾಗಿದ್ದ ವೇಳೆ ಕಳೆದು ಹೋಗಿದ್ದಿತು.

ಈ ಮಧ್ಯೆ ಸರ್ವಮಂಗಳೆ ದಾಸಿಯಂತೆ ವೇಷಧರಿಸಿ ತನ್ನ ಪ್ರಿಯಸಖಿಯಾದ ಸುರುಚಿಯೊಡನೆ ರುದ್ರಭೂಮಿಯನ್ನು ಸೇರಿದಳು. ನಿರ್ಜನವಾದ ಆ ಮಂಟಪದಲ್ಲಿ ರಾಜಕುಮಾರನು ತನಗಾಗಿ ಕಾದಿರಬಹುದಲ್ಲವೇ? ಅದರಲ್ಲಿ ಲವಲೇಶವೂ ಸಂಶಯವಿಲ್ಲ. ಆದರೆ ಅವಳು ಅಲ್ಲಿ ಕಂಡದ್ದು ಯಾರನ್ನು? ಅಷ್ಟಾಂಗಮಾರ್ಗದ ಅನುಯಾಯಿ

ಗಳನ್ನು ಕ್ರೂರವಾಗಿ ಹಿಂಸಿಸುವಂತೆ ರಾಜನನ್ನು ಪ್ರೇರಿಸಿದ ಅಡ್ಡ ಮೂಗಿನ ಗಿಡ್ಡ ದೇಹದ ಗುಜ್ಜು ಗೂರಲಿನ ಹಟಂಗೋಗಿ ಏಕಜಟನನ್ನು ! ಸಿಡಿಲು ಹೊಡೆದಂತೆ ಸ್ತಂಭೀಭೂತಳಾಗಿ ನಿಂತುಬಿಟ್ಟಳು. ಅವಳ ಸ್ವಾಭಿಮಾನಕ್ಕೆ ಬಲವಾದ ಪೆಟ್ಟು ಬಿತ್ತು. ತನ್ನ ನಲ್ಲನಿಗಾಗಿ ಸುತ್ತಲೂ ನೋಡಿದಳು. ಎಲ್ಲಿಯೂ ಅವನ ಸುಳಿವಿಲ್ಲ.

ಇನ್ನು ಬದುಕಿದ್ದು ಪ್ರಯೋಜನವಿಲ್ಲ. ತಳುವಿದರೆ ಪ್ರಮಾದ ಸಂಭವಿಸಬಹುದು ಎಂದು ಧೈರ್ಯದಿಂದ ಅಡಿಯಿಡುತ್ತಾ ನದೀತೀರವನ್ನು ಸೇರಿದಳು. ಮಂಟಪದಿಂದ ದೀರ್ಘವಾದ ತಿರಸ್ಕಾರ ಸೂಚಕವಾದ ಪೈಶಾಚಿಕವಾದ ನಗೆಯೊಂದು ಕೇಳಿಸಿತು. ಒಡನೆ ಗರ್ರೆಂದು ತಿರುಗುತ್ತಿದ್ದ ಸುಳಿಯೊಂದರಲ್ಲಿ ಬಿದ್ದುಬಿಟ್ಟಳು.

ಸುರುಚಿಗೆ ತಲೆಸುತ್ತಲಾರಂಭಿಸಿತು. ಹುಚ್ಚು ಹಿಡಿದವಳಂತೆ ಆಡಿದಳು. ಇಷ್ಟರಲ್ಲಿ ರಾಜಕುಮಾರನು ಸರಸರನೇ ಅಲ್ಲಿಗೆ ಬಂದನು. ಸುರುಚಿಯೇ ರಾಜಪುತ್ರಿಯೆಂದರಿತು ಅವಳ ಬಳಿ ಸಾರಿದನು. ಹಾಲು ಚೆಲ್ಲಿದಂತಿದ್ದ ಬೆಳುದಿಂಗಳಲ್ಲಿ ಅವಳ ಮುಖಮಂಡಲವನ್ನು ನೋಡಿದನು. ತನ್ನ ತಪ್ಪಿನ ಅರಿವಾಯಿತು. ಹಾಗಾದರೆ ಸರ್ವಮಂಗಳೆಯೆಲ್ಲಿ? ಸುರುಚಿಗೆ ಇವನೇ ರಾಜಕುಮಾರನೆಂಬ ಅರಿವಾಯಿತು. ಕಟ್ಟೆಯೊಡೆದಂತೆ ಕಣ್ಣೀರು ಧಾರೆಧಾರೆಯಾಗಿ ಸುರಿಯಿತು. ಎದೆ ಬಿರಿಯುವಂತೆ ಬಿಕ್ಕಿಬಿಕ್ಕಿ ಅಳುತ್ತಾ ಅವನನ್ನು ಕಟುವಾಗಿ ನಿಂದಿಸಿದಳು. ಅವನನ್ನು ದ್ರೋಹಿಯೆಂದೇ ಬಗೆದು ಹಿಡಿಶಾಪ ಹಾಕಿದಳು. ದೇವೀಪ್ರಿಯನು ಈ ಖಂಡನೆಯ ಮಳೆಯಿಂದ ತತ್ತರಿಸಿ ಹೋದನು. ಸರ್ವಮಂಗಳೆಯ ಸಾವಿನ ಕಥೆಯನ್ನು ಸಖಿಯಿಂದ ಕಷ್ಟಪಟ್ಟು ಹೊರಡಿಸಿದನು. ಮರುಗಳಿಗೆಯಲ್ಲಿ ತಾನೂ ಅದೇ ಸುಳಿಯಲ್ಲಿ ಬಿದ್ದು ಪ್ರಾಣಬಿಟ್ಟನು.

ಜಯಪಾಲ, ಇಲ್ಲಿಗೆ ಕಥೆ ಮುಗಿಯಿತು. ಬುದ್ಧ ದೇವನ ಕರುಣೆಗೆ ಪಾರವುಂಟೆ? ನನ್ನ ದರ್ಶನದಲ್ಲಿ ಇದೆಲ್ಲವನ್ನು ಕಂಡುಕೊಂಡೆ. ಎಲ್ಲವೂ ಭಗವಂತನ ಕೃಪಾಕಟಾಕ್ಷದ ಫಲ. ನೀನೇ ಆ ದೇವೀಪ್ರಿಯ, ಜಯಪಾಲನಾಗಿ ಜನ್ಮವೆತ್ತಿದ್ದೀಯೆ. ಸರ್ವಮಂಗಳೆಯೇ ಆ ಪಾರಿಜಾತದ ಪೊದೆ. ಕಳೆದ ಜನ್ಮದಲ್ಲೇ ನಿನಗೆ ನಿರ್ವಾಣ ಲಭಿಸಬೇಕಾಗಿತ್ತು. ಸರ್ವಮಂಗಳೆಯ ಮೇಲಣ ಮೋಹದಿಂದ ಈ ಅವಕಾಶ ತಪ್ಪಿಹೋಯಿತು. ಪ್ರಾಪಂಚಿಕ ಆಶ್ವಾಸನಗಳಿಗೆ ಸಿಲುಕಿದ್ದರಿಂದ ನಿನಗೆ ಪುನರ್ಜನ್ಮವುಂಟಾಯಿತು. ಪಾರಿಜಾತದ ಗುಪ್ತ ಆಕರ್ಷಣೆಯ ರಹಸ್ಯ ಈಗ ತಿಳಿಯಿತೆ? ನೀನು ಆ ಪಾರಿಜಾತದ ಪೊದೆಯನ್ನು, ಕುಸುಮವನ್ನು ವಿಚಿತ್ರವಾದ ಭಾವನೆಯೊಂದರಿಂದ ಆಲಿಂಗಿಸಿಕೊಂಡೆ. ಆದರೆ ನಿನ್ನ ಹೃದಯ ಪರಿಶುದ್ಧವಾಗಿದೆ. ಭಗವಂತನು ಪೂರ್ವಜನ್ಮದ ವಾಸನೆಯನ್ನು ಸಂಪೂರ್ಣವಾಗಿ ತೊಡೆದು ಹಾಕಿದ್ದಾನೆ. ಹೋಗು, ಸಿದ್ಧನಾಗು. ನಾಳೆಯೇ ನಿನಗೆ ದೀಕ್ಷಾಪ್ರದಾನ ಮಾಡುತ್ತೇನೆ.

ಅವಳೂ-ಸರ್ವಮಂಗಳೆ ಸಹ ತನ್ನ ಪೂರ್ವಜನ್ಮದ ಕಾಮವಾಸನೆಯನ್ನೂ ಕಳೆದುಕೊಂಡು ಪರಿಶುದ್ಧಳಾಗಿದ್ದಾಳೆ. ಅವಳ ಭಕ್ತಿ ವೈರಾಗ್ಯಗಳಿಗೆ ಮೆಚ್ಚಿದ ಭಗವಂತನು ಅವಳಿಗೆ ಸಲ್ಲಿಸಬೇಕಾದ ಬಹುಮಾನವನ್ನು ಆಗಲೇ ಸಲ್ಲಿಸಿದ್ದಾನೆ. ಅವಳ ಆತ್ಮಕ್ಕೆ ಶಾಂತಿಯುಂಟಾಗಲಿ.''

ಜಯಪಾಲನು ವಾಘೋರೆಯ ತೀರದಲ್ಲಿ ಸಂಚಾರ ಹೊರಟನು. ಆದರೆ ಪಾರಿಜಾತದ ಪೊದೆಯೆಲ್ಲಿ? ಮೈಲುಗಳ ಪರ್ಯಂತ ಮನ ಮೋಹಕವಾದ ಸುಗಂಧವನ್ನು ಬೀರಿದ, ಆ ಪಾರಿಜಾತ ಕುಸುಮವೆಲ್ಲಿ? ಸರ್ವಮಂಗಳೆ ಭಗವಂತನ ದಿವ್ಯ ಚರಣಗಳಲ್ಲಿ ಐಕ್ಯವಾಗಿ ಬಿಟ್ಟಳು. ಧನ್ಯೆ ಸರ್ವಮಂಗಳೆ!

ಜಯಪಾಲನು ದೀಕ್ಷಾಬದ್ಧನಾಗಿ ಕಾಷಾಯ ವಸ್ತ್ರಗಳನ್ನು ಧರಿಸಿದನು. ಭಿಕ್ಷುವಾದನು. ಧರ್ಮಪಾಲನ ಪದಪಂಕಜಷಟ್ಪದವಾದನು. ಬುದ್ಧದೇವನ ಕರುಣೆತೊಟ್ಟಿಲ ಶಿಶುವಾದನು. ಅವನಿಗೆ ಶೀಘ್ರದಲ್ಲೆ ನಿರ್ವಾಣಪದ ಲಭಿಸಿತು.

ಜಯಪಾಲ ಸರ್ವಮಂಗಳೆಯರ ಹೆಸರು ಇಂದಿಗೂ ಅಜಂತದ ತುರುಗಾಹಿಗಳು ಉಲಿಯುವ ಜಾನಪದ ಕಥೆಗಳಲ್ಲಿ ಉಳಿದು ಅಮರವಾಗಿದೆ.

*

ನಿಸರ್ಗದ ನಂಬಲಾರದಷ್ಟು ಆಶ್ಚರ್ಯಕರ ವೈಪರೀತ್ಯ

# ಲಿಂಗ ಬದಲಿಸುವ ಜನರು

ಕೊಲ್ಹಾಪುರದಲ್ಲಿ ಈಚೆಗೆ ಒಬ್ಬ ಹುಡುಗಿ ಹುಡುಗನಾದಳೆಂದು ಪತ್ರಿಕೆಗಳಲ್ಲಿ ವರದಿ ಬಂದಿತು. ಒಂದು ಆಸ್ಪತ್ರೆಯ ಡಾಕ್ಟರರು ಅವಳ ಈ ಲಿಂಗಪರಿವರ್ತನೆಗೆ ನೆರವಾದರೆಂದು ಗೊತ್ತಾಗಿದೆ.

ಮೂರು ವರ್ಷಗಳ ಹಿಂದೆ ಒಬ್ಬ ಅಮೇರಿಕನ್ ಸೈನಿಕನನ್ನು ಹಾಲಂಡಿನ ಡಾಕ್ಟರರೊಬ್ಬರು ಹೆಣ್ಣಾಗಿ ಮಾಡಿದ ಸುದ್ದಿ ಜಗತ್ತಿನಲ್ಲೆಲ್ಲ ಆಶ್ಚರ್ಯವನ್ನುಂಟುಮಾಡಿತು. "ಜಾರ್ಜ"ಇದ್ದವನು "ಕ್ರಿಸ್ಟೈನ"ಳಾದ ಈ ಪ್ರಸಂಗದಿಂದ ಕೋಟ್ಯಂತರ ಜನರು ಲಿಂಗ ಪರಿವರ್ತನೆಯ ಬಗ್ಗೆ ಕಲ್ಪನಾ ವಿಲಾಸವನ್ನೇ ಕಟ್ಟತೊಡಗಿದರು.

೪೦ ವರ್ಷಕಾಲ ಹೆಣ್ಣಾಗಿದ್ದ ಸ್ಕಾಟ್ಲಂಡಿನ ಡಾಕ್ಟರಣಿಯೊಬ್ಬಳು ಗಂಡಸಾದಳೆಂಬ ವಾರ್ತೆಯೂ ಅಷ್ಟೇ ಕುತೂಹಲವನ್ನು ಕೆರಳಿಸಿತು. ಸಿಂಹಳದಿಂದಲೂ ಇಂಥದೇ ವರ್ತಮಾನವೊಂದು ಎರಡು ವರ್ಷಗಳ ಹಿಂದೆ ಬಂದಿತ್ತು.

"ಆಧುನಿಕ ಡಾಕ್ಟರರು ಬೇಕುಬೇಕಾದಂತೆ ಹೆಣ್ಣನ್ನು ಗಂಡು, ಗಂಡನ್ನು ಹೆಣ್ಣು ಮಾಡಬಲ್ಲರೆ? ಗಂಡೆಂದರೇನು ಹೆಣ್ಣೆಂದರೇನು? ಲಿಂಗ ಪರಿವರ್ತನೆ ಮನುಷ್ಯರಲ್ಲಿ ಎಷ್ಟು ಸಾಧ್ಯ? ಗಂಡ ಹೆಂಡಿರು ಕೈಕೈ ಹಿಡಿದು ಆಸ್ಪತ್ರೆಯನ್ನು ಹೊಕ್ಕು ಹೆಂಡತಿ ಗಂಡನಾಗಿ, ಗಂಡಹೆಂಡತಿಯಾಗಿ ಹೊರಬರಬಲ್ಲರೆ?'' ಇಂಥ ಪ್ರಶ್ನೆಗಳನ್ನು ಜನರು ಕೇಳುತ್ತಾರೆ.




ಅನೇಕ ವರ್ಷಗಳ ಹಿಂದೆ ಅಮೇರಿಕದ ಡಾ. ಎಚ್. ಎಚ್. ಯಂಗ್ ಅವರು ಕೆಲ ಜನರಿಗೆ ಲಿಂಗ ಬದಲಿಸಲು ನೆರವಾದರು. ಅವರಲ್ಲೊಬ್ಬಳು ೨೦ ವರ್ಷಗಳ ವರೆಗೆ "ಹೆಣ್ಣಾ"ಗಿದ್ದು ಆ ಆಮೇಲೆ ತನ್ನ ಲಿಂಗದ ಬಗ್ಗೆ ಸಂಶಯ ತಾಳಿ ಗಂಡಸರ ವೇಷ-ಭೂಷೆ ಧರಿಸತೊಡಗಿದಳು. ಡಾ. ಯಂಗರು ಅವಳನ್ನು ಸುದೀರ್ಘವಾಗಿ ಆಸ್ಪತ್ರೆಯಲ್ಲಿರಿಸಿಕೊಂಡು ಗಂಡಾಗಿ ಪರಿವರ್ತಿಸಿದರು. ಆಸ್ಪತ್ರೆಯಲ್ಲಿದ್ದಾಗ ಈ "ರೋಗಿ" ದಾದಿಯೊಬ್ಬಳಲ್ಲಿ ಅನುರಕ್ತನಾಗಿ ಕೊನೆಗೆ ಅವಳನ್ನೇ ಮದುವೆಯಾಗಿ ಸುಖವಾಗಿ ಜೀವಿಸಿದನು.

ಈ ಪ್ರಸಂಗದಲ್ಲಿ ಆದದ್ದು ಲಿಂಗಪರಿವರ್ತನೆಯಲ್ಲ—ಕೇವಲ ಲಿಂಗಭ್ರಾಂತಿ. ಇದನ್ನು ನಾವು "ಶಿಖಂಡಿಕಲ್ಪ" ಎಂದು ಕರೆಯೋಣ.

**ಗೋವಿಂದ ಬಿಹಾರಿ ಲಾಲರ ಲೇಖದ ರೂಪಾಂತರ**

"ಶಿಖಂಡಿಕಲ್ಪ"ದಲ್ಲಿ ಮಗುವಿನ ಬಾಹ್ಯ ಚಿಹ್ನಗಳನ್ನು ನೋಡಿದರೆ ನಿಜವಾಗಿ ಗಂಡಿದ್ದ ದ್ದನ್ನು ಹೆಣ್ಣೆಂದು ಅಥವಾ ಹೆಣ್ಣಿದ್ದದ್ದನ್ನು ಗಂಡೆಂದು ಭ್ರಮಿಸುವಂತಾಗುವುದು.

ಪ್ರತಿ ೧,೦೦೦ ಜನನಗಳಲ್ಲಿ ಒಂದರಂತೆ "ಶಿಖಂಡಿ ಕಲ್ಪ"ದ ಉದಾಹರಣೆ ಸಿಗುತ್ತದೆಂದು ಡಾ. ಯಂಗರು ಹೇಳುತ್ತಾರೆ. ಕೆಲ ನೈಸರ್ಗಿಕ ವಿಕೃತಿಗಳಿಂದ ಮಗುವಿನ ಲಿಂಗದ ಬಗ್ಗೆ ಹೀಗೆ ಭ್ರಾಮಕ ಕಲ್ಪನೆ ಉಂಟಾಗುತ್ತದೆ.

ಒಂದು ಸರಳ ಉದಾಹರಣೆ. ಗಂಡು ಮಗುವಿನ ಪ್ರಧಾನ ಲಕ್ಷಣವೇನು? ಅಂಡಕೋಶ. ಕೆಲವೇಳೆ ಇದು ಉದರದ ಪೊಳ್ಳಿನಲ್ಲಿ ಒಳಸೇರಿಕೊಂಡು ಹೊರಗೆ ಕಾಣಿಸದೇ ಹೋಗುತ್ತದೆ. ಆಗ ಗಂಡು ಮಗು ಹೆಣ್ಣೆಂದು ಭ್ರಮೆ ಹುಟ್ಟುತ್ತದೆ.

ಹೀಗೇಕಾಗುತ್ತದೆ? ಅಂಡಕೋಶ (gonads) ಗಳು ಗಂಡು ಹೆಣ್ಣುಗಳೆರಡಲ್ಲಿಯೂ ಇರುವ ಇಂದ್ರಿಯ. ಅವುಗಳ ಕಾರ್ಯ ಮಾತ್ರ ಬೇರೆಬೇರೆ. ಮಗು ಗರ್ಭದಲ್ಲಿರುವಾಗ ಪ್ರಾರಂಭಿಕ ಅವಸ್ಥೆಯಲ್ಲಿ ಉದರದ ಪೊಳ್ಳಿನೊಳಗೇ ಇವು ಸೇರಿಕೊಂಡಿರುತ್ತವೆ. ಭ್ರೂಣ ಬೆಳೆದಾಗ ಗಂಡಿನಲ್ಲಿ ಅವು ಕೆಳಗಿಳಿದು ಗೋಚರಾವಸ್ಥೆಗೆ ಬರುತ್ತವೆ. ಆದರೆ ಒಂದೊಂದು ಸಾರೆ ಏನಾದರೂ ಅಡಚಣೆಯಿಂದ ಅದು ಕೆಳಗಿಳಿಯದೆ ಒಳಗೇ ಹುದುಗಿರುತ್ತದೆ. ಆಗ ಮಗು ಹೆಣ್ಣೆಂಬ ಭ್ರಾಂತಿಯುಂಟಾಗುತ್ತದೆ.

ಹೆಣ್ಣಾಗಿದ್ದವಳೊಬ್ಬಳು ೧೮-೨೦ ನೇ ವಯಸ್ಸಿನ ವರೆಗೂ ಗಂಡೆಂಬ ಭ್ರಾಂತಿಯಲ್ಲಿದ್ದ ಉದಾಹರಣೆಯನ್ನು ಡಾ. ಎಲ್ಮರ್ ಹೆಸ್ಸರೆಂಬವರು ಪ್ರಕಟಿಸಿದ್ದಾರೆ.

"ಅವನು ದಿನವೂ ಕ್ಷೌರ ಮಾಡಿಕೊಳ್ಳುತ್ತಿದ್ದನು. ಅವನ ಮುಖ ಮತ್ತು ದೇಹದ ಮೇಲೆಲ್ಲ ಗಂಡಸರಂತೆ ದಟ್ಟವಾಗಿ ರೋಮ ಬೆಳೆದಿತ್ತು. ಟೊಂಕ, ಎದೆಗಳೂ ಗಂಡಸರಂತೆ ಇದ್ದವು. ಹೆಣ್ಣು ಪ್ರಾಯಕ್ಕೆ ಬರುವಾಗಿನ ಲಕ್ಷಣಗಳೇನೂ ಅವನಲ್ಲಿ ಇರಲಿಲ್ಲ. ಅಂಡವೂ ಗಂಡಸರದನ್ನೇ ಹೋಲುತ್ತಿತ್ತು.

ಆದರೂ ಆ ವ್ಯಕ್ತಿ ನಿಜವಾಗಿ ಹುಡುಗಿಯೇ ಇದ್ದಳು. ಅವಳ ಆಡ್ರೆನಾಲ್ ಗ್ರಂಥಿಯಲ್ಲಿ ಒಂದು ಗಂಟಿದ್ದಿತ್ತು. ಶರೀರದ ಅತಿ ಮಹತ್ವದ ಹಲವು ಹೋರ್ಮೋನು(ರಸ)ಗಳನ್ನು ಸ್ರವಿಸುವ ಗ್ರಂಥಿ ಅದು. ಅದರಲ್ಲಿ ಗಂಟಿದ್ದುದರಿಂದ ಆಂಡ್ರೋಜೆನ್ ಎಂಬ ಹೋರ್ಮೋನು ಅವಳ ಶರೀರದಲ್ಲಿ ಮಿತಿಮೀರಿ ಉತ್ಪತ್ತಿಯಾಗುತ್ತಿತ್ತು. ಈ ಹೋರ್ಮೋನು ಹೆಚ್ಚಾಗಿ ಸ್ರವಿಸುವುದು ಪುರುಷರಲ್ಲಿ ಸಹಜ. ಅದರಿಂದಲೇ ಪುರುಷ ಲಕ್ಷಣಗಳು ಕಾಣಿಸಿದ್ದು. ಆ ಗಂಟನ್ನು ಕತ್ತರಿಸಿ ತೆಗೆದ ನಂತರ ಅವೆಲ್ಲ ಮಾಯವಾದವು. ಗಡ್ಡ ಮೀಸೆ ಬೆಳೆಯುವುದು ನಿಂತಿತು. ಮೊಲೆಗಳೂ ತುಂಬಿಕೊಂಡವು. ಅನಂತರ ಅವಳು ಹೆಂಗಸಿನಂತೆ ಬಾಳತೊಡಗಿದಳು.

ಆದರೆ "ಉಭಯಲಿಂಗಿ"ಗಳ ವಿಚಾರ ಬೇರೆ. ಅವರ ಸಂಖ್ಯೆ ಕಡಿಮೆ. ಆದರೆ ಅವರ ಪ್ರಕರಣಗಳು ಕಠಿನವಾದವು.

ಇವರನ್ನು "ಅರ್ಧನಾರಿ"ಯರೆನ್ನಬಹುದು. ಯಾಕಂದರೆ ಅವರಲ್ಲಿ ಪುರುಷ ಮತ್ತು ಸ್ತ್ರೀ ಇಂದ್ರಿಯಗಳೆರಡೂ ಇರುತ್ತವೆ.

ಕೆಲವರಲ್ಲಿ ಒಂದು ಪಕ್ಕದಲ್ಲಿ ಗಂಡು ಅಂಡಕೋಶ ಇನ್ನೊಂದರಲ್ಲಿ ಹೆಣ್ಣು ಅಂಡಾಶಯ ಇರುತ್ತದೆ. ಕೆಲವರಲ್ಲಿ ಎರಡೂ ಪಕ್ಕಗಳಲ್ಲಿ ಎರಡೂ ವಿಧದ ಇಂದ್ರಿಯಗಳಿರುವುದುಂಟು. ಮತ್ತೆ ಕೆಲವರಲ್ಲಿ ಗಂಡು ಮತ್ತು ಹೆಣ್ಣು ಅಂಡಕೋಶ-ಅಂಡಾಶಯಗಳೆರಡೂ ಕೂಡಿಕೊಂಡಿರುತ್ತವೆ.

ಹೀಗೆ ಹೆಣ್ಣು ಗಂಡುಗಳೆರಡರ ಇಂದ್ರಿಯಗಳನ್ನು ಪೂರ್ಣವಾಗಿ ಇಲ್ಲವೆ ಅಂಶತಃ ಪಡೆದವರಾದರೂ ಈ "ಉಭಯಲಿಂಗಿ"ಗಳು ತಾವೇ ಏಕಕಾಲದಲ್ಲಿ ತಂದೆ-ತಾಯಿ ಎರಡೂ ಆಗಿ ವರ್ತಿಸಲಾರರು. ಬದಲಿಗೆ ತಂದೆಯೂ ಆಗಲಾರದ ತಾಯಿಯೂ ಆಗಲಾರದ ಅವಸ್ಥೆಯಲ್ಲಿ ಅವರಿರುತ್ತಾರೆ. (ಉಭಯಲಿಂಗಿಗಳಾಗಿ ಸಂತಾನೋತ್ಪಾದನೆ ಮಾಡಲು ಎರೆ ಹುಳಗಳಂಥ ಕೆಲ ನಿಮ್ನ ಪ್ರಾಣಿಗಳಷ್ಟೆ ಶಕ್ತವಾಗುತ್ತವೆ.)

ಕುಶಲ ಡಾಕ್ಟರರು ಶಸ್ತ್ರಕ್ರಿಯೆಯಿಂದ

ಇಂಥ ಪ್ರಕರಣಗಳಲ್ಲಿ ಕೆಲವೊಮ್ಮೆ ಯಶಸ್ವಿಯಾಗಿ ನೆರವಾಗಿದ್ದುಂಟು. ಅವರು ಈ ಉಭಯ ಲಿಂಗಿಗಳಲ್ಲಿರುವ ಯಾವುದಾದರೊಂದು ಲಿಂಗದ ಇಂದ್ರಿಯಗಳನ್ನೆಲ್ಲ ಕತ್ತರಿಸಿ ತೆಗೆದು ಇನ್ನೊಂದು ಲಿಂಗದ ಇಂದ್ರಿಯಗಳಿಗೆ ಬೆಳೆಯಲು ಅವಕಾಶ ಮಾಡಿಕೊಡುತ್ತಾರೆ.

ಹೀಗೆ ಮಾಡುವಾಗ ಡಾಕ್ಟರರು ಹೆಚ್ಚಾಗಿ ರೋಗಿಯ ಸ್ವಭಾವ ಮತ್ತು ವರ್ತನೆಯಲ್ಲಿ ಪುರುಷತ್ವ ಹೆಚ್ಚು ವ್ಯಕ್ತವಾಗುತ್ತದೋ ಸ್ತ್ರೀತ್ವವೋ ಎಂಬುದನ್ನು ಗಮನಿಸಿ ಆಯಾ ರೋಗಿಯನ್ನು ಪೂರ್ತಿಯಾಗಿ ಆ ಲಿಂಗಕ್ಕೇ ಪರಿವರ್ತಿಸುತ್ತಾರೆ.

ಇಂಥ ಲೈಂಗಿಕ ಕಲಬೆರಕೆ ಯಾಕಾಗುತ್ತದೆ? ವಿಜ್ಞಾನಿಗಳ ಮತದಲ್ಲಿ ಯಾವ ಮನುಷ್ಯನ ಪ್ರಕೃತಿ-ಪ್ರವೃತ್ತಿಗಳೂ ಪೂರ್ಣ ಗಂಡಸಿನದು ಇಲ್ಲವೆ ಪೂರ್ಣ ಹೆಂಗಸಿನದಾಗಿರುವುದಿಲ್ಲ. ಗಂಡಸಿನಲ್ಲಿ ಸ್ವಲ್ಪ ಹೆಣ್ತನವೂ ಹೆಂಗಸಿನಲ್ಲಿ ಅಷ್ಟಿಷ್ಟು ಗಂಡುತನವೂ ಇದ್ದೇ ಇರುತ್ತದೆ. ಅರ್ಥಾತ್ ಒಂದು ವ್ಯಕ್ತಿಯಲ್ಲಿ ಗಂಡುತನ ಹೆಚ್ಚಾಗಿದ್ದರೆ ಅವನು ಗಂಡಸು, ಹೆಣ್ಣುತನ ಅಧಿಕವಿದ್ದರೆ ಅವಳು ಹೆಂಗಸು ಎನ್ನುವುದು ದೇಹಶಾಸ್ತ್ರ ಹಾಗು ಮಾನಸಶಾಸ್ತ್ರ ದೃಷ್ಟಿಯಿಂದ ಸತ್ಯವಾದುದು.

ಗರ್ಭಾಶಯದಲ್ಲಿ ಗಂಡು ಹೆಣ್ಣು ನಿರ್ಮಾಣವಾಗುವ ರೀತಿ ಎಷ್ಟು ಸೂಕ್ಷ್ಮವೆಂದು ನೋಡಿದರೆ* ಇಂಥ ಕಲಬೆರಕೆಯಾಗುವುದು ಆಶ್ಚರ್ಯವೆನಿಸುವದಿಲ್ಲ. ಬದಲಿಗೆ ಇಷ್ಟು ಜನರು ಸ್ತ್ರೀ ಅಥವಾ ಪುರುಷ ಕರ್ತವ್ಯವನ್ನು ಪೂರೈಸುವಷ್ಟು ಸ್ಪಷ್ಟವಾದ ಲಿಂಗಲಕ್ಷಣಗಳೊಡನೆ ಹುಟ್ಟುವದೇ ಆಶ್ಚರ್ಯವೆನಿಸೀತು.

ತಿರ್ಯಕ್ ಜಂತುಗಳನ್ನು ನೋಡಿದರೆ ಅವುಗಳಲ್ಲಿ ಸುಲಭವಾಗಿ ಲಿಂಗಪರಿವರ್ತನೆಯಾಗುವುದು ಕಾಣಿಸುವುದು. ಹಕ್ಕಿಗಳಲ್ಲಂತೂ ಇದು ಸಹಜವಾಗಿ ಆಗುವುದುಂಟು; ಹೋರ್ಮೋನುಗಳನ್ನು ಅವುಗಳಿಗೆ ಕೊಟ್ಟು ಕೃತಕವಾಗಿ ಕೂಡ ಲಿಂಗ ಪರಿವರ್ತನೆ ಮಾಡಿಸಲು ಸಾಧ್ಯವಿದೆಯೆಂದು ವಿಜ್ಞಾನಿಗಳು ಕಂಡುಹಿಡಿದಿದ್ದಾರೆ.

ಕೆಲ ವರ್ಷಗಳ ಹಿಂದೆ ಇಂಗ್ಲಂಡಿನಲ್ಲಿ ಒಂದು ಹೆಣ್ಣು ಕೋಳಿ ಮೂರೂವರೆ ವರ್ಷ ಕಾಲ ತತ್ತಿ ಇಟ್ಟನಂತರ ಅದರ ಯಾವುದೊ ಒಂದು ಗ್ರಂಥಿಯಲ್ಲಿ ಏನೋ ವಿಕಾರವಾಯಿತು. ಅಂದಿನಿಂದ ಅದು ಹುಂಜದಂತೆ ವರ್ತಿಸತೊಡಗಿತು. ಕೆಲ ಕಾಲದ ಮೇಲೆ ಅದರ ತಲೆಯ ಮೇಲೆ ಜುಟ್ಟು ಬೆಳೆದು ಅದು ಪೂರ್ತಿ ಹುಂಜವೇ ಆಗಿಬಿಟ್ಟಿತಲ್ಲದೆ ತಂದೆಯೂ ಆಯಿತು.

ಕೆಲಜಾತಿಯ ಸಿಂಪಿ ಜೀವಿಗಳಲ್ಲಿ(oysters) ಕಾಲಕಾಲಕ್ಕೆ ಲಿಂಗಪರಿವರ್ತನೆಯಾಗುತ್ತಲೇ ಇರುತ್ತದೆ. ಪುಣ್ಯಕ್ಕೆ ಮನುಷ್ಯರಲ್ಲಿ ಇಷ್ಟು ಲೀಲಾಜಾಲವಾಗಿ ಲಿಂಗ ಪರಿವರ್ತನೆಯಾಗುವುದಿಲ್ಲ. ಇಲ್ಲದಿದ್ದರೆ ಗೊಂದಲವೋ ಗೊಂದಲವಾಗುತ್ತಿತ್ತು.

ತೀರ ಈಚೆಗೆ ಅಂತಾರಾಷ್ಟ್ರೀಯ ಪ್ರಸಿದ್ಧಿ ಪಡೆದ "ಲಿಂಗಾಂತರ"ದ ಉದಾಹರಣೆಯೆಂದರೆ ಜಪಾನದ ಕಾಯೋ ಯೋಶಿಕಾವಾ (ವಯಸ್ಸು ೩೫) ಎಂಬ ಗಾಯಕಿಯದು. ೩೪ ವರ್ಷ ಕಾಲ ಅವಳು ಕೋಯುಚಿ ಯೋಶಿಕಾವಾ ಎಂಬ ಹೆಸರಿನಿಂದ ಪುರುಷನಾಗಿದ್ದಳು. ಯುದ್ಧಕಾಲದಲ್ಲಿ ಕೋಯುಚಿ ಸೈನ್ಯದಲ್ಲಿ ಸೇರಿದನು. ಯುದ್ಧ ಮುಗಿದ ಮೇಲೆ ಟೋಕಿಯೋದಲ್ಲಿ ಸಂಗೀತ ಶಿಕ್ಷಕನಾದನು.

೧೯೪೯ ರಷ್ಟು ಹೊತ್ತಿಗೆ ಅವನು ತನ್ನಲ್ಲಿ ಆಗುತ್ತಿದ್ದ ಪರಿವರ್ತನೆಗಳನ್ನು ನೋಡಿ ಗಾಬರಿಯಾದನು. ಅವನ ಎದೆ ಉಬ್ಬತೊಡಗಿತು, ಟೊಂಕ ಮತ್ತು ನಿತಂಬಗಳು ಪುಷ್ಟವಾಗಹತ್ತಿದವು. ಅವನ ಚಲನವಲನಗಳು ಸ್ತ್ರೀ ಸಹಜ ಲಾವಣ್ಯವನ್ನು ಪ್ರದರ್ಶಿಸತೊಡಗಿದವು. ಅಲ್ಲದೆ ಆಗಾಗ್ಗೆ ಅವನ ತಲೆ ತಿರುಗತೊಡಗಿತು.

ಕೊನೆಗೆ ಅವನು ಡಾಕ್ಟರರ ಸಲಹೆ ಪಡೆದನು. ೧೯೫೪ ರಿಂದೀಚೆಗೆ ಮೂರು ಶಸ್ತ್ರಕ್ರಿಯೆಗಳ ನಂತರ ಅವಳೀಗ ಸಂಪೂರ್ಣ ಹೆಂಗಸಾಗಿದ್ದಾಳೆ.

✲

* ಗರ್ಭೋತ್ಪತ್ತಿಯ ಬಗ್ಗೆ "ಕಸ್ತೂರಿ" ಸೆಪ್ಟಂಬರ ೧೯೫೬ ಸಂಚಿಕೆ ನೋಡಿರಿ.



ಕರ್ನಾಟಕದ ಒಂದು ವ್ಯಾಪಾರವಿಚಕ್ಷಣ
ಮುಸ್ಲಿಂ ಜನಾಂಗ—

# ಉತ್ತರ ಕನ್ನಡದ ನವಾಯತರು

ಎಸ್. ವಿ. ಪಾಟೀಲ

ಕರ್ನಾಟಕದ ಕರಾವಳಿಯ ಅತ್ಯುತ್ತಮ ಸ್ವಾಭಾವಿಕ ಬಂದರವಾದ ಭಟಕಳಕ್ಕೆ ಹೋದವರು ಊರಿಂದ ಪ್ರತ್ಯೇಕವಾಗಿ ಸಮುದ್ರ ತೀರದಲ್ಲಿ ಕೆಲ ಭವ್ಯ ಮನೆಗಳಿರುವುದನ್ನು ನೋಡುತ್ತಾರೆ. ಹಳೆಗಾಲದ ಮನೆಗಳೇ ಬಹಳವಾಗಿರುವ ಈ ಊರಲ್ಲಿ ಈ ಮನೆಗಳು ಮಾತ್ರ ಮುಂಬಯಿಯ ಮಲಬಾರ ಹಿಲ್ಲಿನವುಗಳಂತೆ ಕಟ್ಟಲ್ಪಟ್ಟಿರುವುದನ್ನು ಕಂಡು ಸೋಜಿಗವಾಗುವದು. ಈ ಜನರು ಯಾರು? ಊರಿಂದ ಯಾಕೆ ಬೇರೆಯಾಗಿರುವರು? ಎಂದು ಕುತೂಹಲವಾಗುವದು.

ಈ ಜನರು ನವಾಯತರು. ಅವರು ಉತ್ತರ-ದಕ್ಷಿಣ ಕನ್ನಡ ಜಿಲ್ಲೆಗಳ ಕರಾವಳಿ ಪ್ರದೇಶಗಳಲ್ಲಿ ಮುಖ್ಯವಾಗಿ ಕಂಡುಬರುವರು. ಅವರ ಕೇರಿಗಳಿಗೆ ನವಾಯತಕೇರಿಗಳೆಂದೇ ಹೆಸರು. ಗೌರವರ್ಣದ ಈ ಜನಾಂಗದವರು ಧರ್ಮದಿಂದ ಮುಸ್ಲಿಮರು. ಆದರೆ ಅವರ ರೀತಿನೀತಿ, ಆಚಾರ ವಿಚಾರಗಳು ಸುತ್ತಲಿನ ಹಿಂದುಗಳಿಗಿಂತ ಮಾತ್ರವಲ್ಲ, ಇತರ ಭಾರತೀಯ ಮುಸ್ಲಿಂ ಸಮಾಜಗಳಿಗಿಂತಲೂ ಭಿನ್ನವಾಗಿದೆ.

ನವಾಯತರು ಪೂರ್ಣ ಭಾರತೀಯ ಜನಕಟ್ಟಿನವರಲ್ಲ; ಹಾಗೆಂದು ಅವರನ್ನು ತೀರ ಈಚೆಗೆ ನೆಲೆಸಿದ ವಿದೇಶಿ ಜನಾಂಗವೂ ಅಲ್ಲ. ಭಾರತದ ಆಂಗ್ಲೋ-ಇಂಡಿಯನ್ನರಂತೆ ಇವರೂ ಮಿಶ್ರ ಕುಲದವರು. ಆಂಗ್ಲೋ-ಇಂಡಿಯನ್ನರ ಸಂಸ್ಕೃತಿ ಅನ್ಯ ಭಾರತೀಯ ಕ್ರೈಸ್ತರದಕ್ಕಿಂತ ಭಿನ್ನವಾಗಿರುವಂತೆ ನವಾಯತರದೂ ತನ್ನದೇ ವೈಶಿಷ್ಟ್ಯಗಳನ್ನು ಬೆಳೆಸಿಕೊಂಡಿದೆ.

ಕೆಲ ಮುಸ್ಲಿಮ ಪಂಡಿತರು ಅವರ ಮೂಲ

ಧಾರವಾಡದ ಕನ್ನಡ ಸಂಶೋಧನ ಸಂಸ್ಥೆಯವರು ಪ್ರಕಟಿಸಿದ ವಿಕ್ಟರ ಡಿಸೋಜರ 'Navayats of Kanara' ಆಧಾರದಿಂದ

ಪುರುಷನು ಸಾಕ್ಷಾತ್ ಪೈಗಂಬರ ಮಹಮ್ಮದರ ನಿಕಟ ಬಂಧು ಎಂದು ಹೇಳುತ್ತಾರೆ. ಇತರ ಕಥೆಗಳಲ್ಲಿ ಅವರು ಅರಬಸ್ತಾನದ ಅರಸರ ಅನ್ಯಾಯದ ಧಾರ್ಮಿಕ ದಬ್ಬಾಳಿಕೆಗೊಳಪಟ್ಟು ದೇಶಬಿಟ್ಟ ಒಂದು ಕುಲದ ಪೀಳಿಗೆಯವರೆಂದು ಪ್ರತಿಪಾದಿಸಲಾಗಿದೆ. ಈ ಕಥೆಗಳನ್ನು ಇತಿಹಾಸ ಸಂಶೋಧಕರು ಸಂಪೂರ್ಣ ಒಪ್ಪುವದಿಲ್ಲ. ಅವರು ಅರಬ ಮೂಲದವರೆಂಬದಷ್ಟೇ ಈ ಐತಿಹ್ಯಗಳಲ್ಲಿರುವ ಸತ್ಯಾಂಶ.

'ನವ್ವಾತಿ' ಎಂದರೆ ಅರಬಿ ಭಾಷೆಯಲ್ಲಿ ನಾವಿಕರೆಂದರ್ಥ. ನವಾಯತರು ಅರಬ ನಾವಿಕರ ಕುಲದವರೆಂಬುದರಿಂದಲೇ ಅವರಿಗೀ ಹೆಸರು ಬಂದಿದೆ. ಸಾಹಸಿಗಳಾದ ಅರಬರು ಸಾವಿರಾರು ವರ್ಷಗಳಿಂದ ಭಾರತಕ್ಕೆ ವ್ಯಾಪಾರಕ್ಕಾಗಿ ಬರುತ್ತಿದ್ದರು. ಇಲ್ಲಿ ಅವರು ಶಾಶ್ವತ ವಸತಿ ಮಾಡುತ್ತಿರಲಿಲ್ಲ. ಅವರು ಕೆಲಕಾಲ ಕರಾವಳಿಯಲ್ಲಿ ತಂಗಿರುತ್ತಿದ್ದರು. ಆಗ ಅವರು ಇಲ್ಲಿಯ ಸ್ತ್ರೀಯರನ್ನು ಮದುವೆಯಾಗುತ್ತಿದ್ದರು ; ಇಲ್ಲವೆ ಅವರೊಡನೆ ತಾತ್ಪೂರ್ತಿಕ ಸಂಬಂಧ ಬೆಳಸುತ್ತಿದ್ದರು. ಇದರಲ್ಲಿ ಹುಟ್ಟಿದ ಮಕ್ಕಳೇ ಇಂದಿನ ನವಾಯತರ ಮೂಲ ಪುರುಷರೆಂದು ಸಂಶೋಧಕರ ಮತ. ಮುಸ್ಲಿಂ ಧಾರ್ಮಿಕ ಅನುಮತಿಯಂತೆ ನಡೆಯುತ್ತಿದ್ದ ಈ ವಿವಾಹ ವ್ಯವಸ್ಥೆಯಲ್ಲಿ ಅರಬ ನಾವಿಕರಿಗೆ ಶಾಶ್ವತ ಆಸ್ಥೆ ಇದ್ದಿಲ್ಲ. ಬೇಗನೇ ಅವರು ತೆರಳಿಬಿಡುತ್ತಿದ್ದರು. ತಾಯಂದಿರೇ ಮಕ್ಕಳನ್ನು ಪೋಷಿಸುವ ಭಾರ ಹೊರಬೇಕಾಗುತ್ತಿತ್ತು. ಆದರೆ ಹಿಂದೂ ಧರ್ಮದಲ್ಲಿ ಅವರಿಗೆ ಆಶ್ರಯ ಸಿಗುವುದು ಸಾಧ್ಯವಿದ್ದಿಲ್ಲ. ಅತ್ತ ಧರ್ಮದಿಂದ ಮುಸ್ಲಿಮರೆನಿಸಿದರೂ ಹಿಂದೂ ಧರ್ಮದಲ್ಲಿ ಪಳಗಿ ಕೇವಲ ತಾತ್ಕಾಲಿಕವಾಗಿ ಮುಸ್ಲಿಮ ವ್ಯಾಪಾರಿಗಳ ಸಂಬಂಧ ಮಾಡಿ ಬಳಿಕ ಅವರಿಂದ ಅಗಲಿದ ಇವರ ತಾಯಂದಿರ ಮೂಲ ಹಿಂದೂ ಸಂಪ್ರದಾಯಗಳಲ್ಲಿ ಕೆಲವು ನವಾಯತರ ಸಂಸ್ಕೃತಿಯಲ್ಲಿ ನುಸುಳಿಕೊಂಡಿವೆ. ಮಲಬಾರಿನ ಮಾಪಿಳ್ಳೆಗಳೂ ಹೀಗೇ ರೂಪುಗೊಂಡ ಜನಾಂಗವಾಗಿದ್ದಾರೆ. ನವಾಯತ ಸಮಾಜ ಅಸ್ತಿತ್ವಕ್ಕೆ ಬಂದ ಕಾಲ ಕ್ರಿ. ಶ. ಸುಮಾರು ೧೪ ನೇ ಶತಕವೆಂದು ತೀರ್ಮಾನಿಸಲಾಗಿದೆ. ೧೫ ನೇ ಶತಮಾನಕ್ಕಿಂತಲೂ ಮೊದಲಿನ ಇವರ ಒಂದು ಮಸೀದೆ ಇಂದಿಗೂ ಭಟಕಳದಲ್ಲಿದೆ.

ಇವರ ಮನೆಗಳು ಭವ್ಯವಾಗಿದ್ದರೂ ಎಲ್ಲವೂ ಒಂದೇ ತೆರನಾಗಿರುವವು. ಪ್ರತಿ ಮನೆಗೂ ನಾಲ್ಕು ಭಾಗಗಳು. ಇವರ ಹೆಣ್ಣು ಮಕ್ಕಳು ಕಟ್ಟಾಗೋಷಾ ಪದ್ಧತಿಗೆ ಒಳಪಟ್ಟದ್ದರಿಂದ ಮನೆಗಳರಚನೆ ಅದಕ್ಕೆ ಅನುಕೂಲವಾಗುವಂತೆ ಇದೆ. ಮೊದಲಿನದು 'ವಾಸರೂ'—ಪೂರ್ತಿ ಗಂಡಸರ ರಾಜ್ಯ. ಅತಿಥಿ ಅಭ್ಯಾಗತರೂ ಅಲ್ಲೇ ಉಳಿಯುವರು. ಎರಡನೆಯದು 'ಘರ'. ವಿಶೇಷ ಸಮಾರಂಭಗಳು ನೆರವೇರುವ ವಿಶಾಲವಾದ ಕೋಣೆ. ಮೂರನೆಯದು 'ಮಝುಘರ' ಅಥವಾ ನಡುಮನೆ. ಅದರ ಅಕ್ಕಪಕ್ಕಗಳಲ್ಲಿರುವ ಎರಡು ಕೋಣೆಗಳು ನವದಂಪತಿಗಳ ಅಥವಾ ಮದುವೆಯಾಗಿ ಇನ್ನೂ ಗಂಡನ ಮನೆಗೆ ಹೋಗದ ಹೆಣ್ಣುಮಕ್ಕಳಿಗಾಗಿ. ನಾಲ್ಕನೆಯದೂ ಸ್ತ್ರೀಯರ ರಾಜ್ಯವೇ. ಅದರಲ್ಲಿ ಒಂದು ಭಾಗ ಅಡುಗೆ ಮನೆ, ಇನ್ನೊಂದು ವಿಶ್ರಾಂತಿಯ ಕೋಣೆ. ಎರಡನೇ ಕೋಣೆಯಿಂದಲೇ ಹೆಂಗಸರ ವ್ಯಾಪ್ತಿ ಪ್ರಾರಂಭವಾಗುವದರಿಂದ ಅದರ ಬಾಗಿಲಿಗೇ ಬಿದಿರ ಚಾಪೆಯ ಪರದೆ ತೂಗಬಿದ್ದುದನ್ನು ನೋಡಬಹುದು.

ಅರಬ ವ್ಯಾಪಾರಿ ಪೂರ್ವಜರ ವ್ಯವಹಾರ ಚಾತುರ್ಯ ನವಾಯತರಲ್ಲಿ ರಕ್ತಗತವಾಗಿದೆ. ಅವರು ಸರಕಾರಿ ನೌಕರಿ ಸೇರುವುದು ತೀರ ವಿರಳ. ಇಂಗ್ಲೀಷು ಶಿಕ್ಷಣದಲ್ಲಿ ಆಸ್ಥೆ ಕಡಿಮೆಯಿರುವದು ಇದಕ್ಕೊಂದು ಕಾರಣವಾಗಿದ್ದರೂ ಅವರ ವಾಣಿಜ್ಯಕೌಶಲ ಮುಖ್ಯ ಕಾರಣ. ಅವರಿಗೆ ಉದ್ದಿಮೆಗಳಲ್ಲಿಯೂ ಆಸಕ್ತಿಯಿಲ್ಲ. ಕ್ರಯವಿಕ್ರಯದಲ್ಲಿ ಮಾತ್ರ ಅವರು ನೀರಲ್ಲಿ ಮೀನಿದ್ದಂತೆ. ಎಲ್ಲಿ ಕರಾಚಿ, ಮುಂಬಯಿ, ಎಲ್ಲಿ ಬೆಂಗಳೂರು, ಕೊಲಂಬೋ ವರೆಗೂ ಅವರ ವ್ಯಾಪಾರ ಕ್ಷೇತ್ರವಿದೆ. ಕೆಲವರು ಹೋಟೆಲುಗಳನ್ನಿಟ್ಟಿದ್ದಾರೆ; ಹೋಟೆಲಿನಲ್ಲಿ ದುಡಿಯುವವರೂ

ಇದ್ದಾರೆ. ನೌಕರರನ್ನಿಟ್ಟುಕೊಳ್ಳುವಾಗ ತಮ್ಮವರನ್ನೇ ಇಟ್ಟುಕೊಳ್ಳುವದು ಇವರ ಕ್ರಮ.

ನವಾಯತರ ಐಕಮತ್ಯವೆಷ್ಟು ಗಾಢವೋ ಅವರ ಉದ್ಯೋಗಪರತೆ, ಸ್ವಾಭಿಮಾನಗಳೂ ಅಷ್ಟೇ ಅಭಿನಂದನೀಯ. ಬಡವರಿಗೆ ಶ್ರೀಮಂತರು ಸಾಧ್ಯವಿದ್ದಷ್ಟು ನೆರವಾಗುವರು; ಇಸ್ಲಾಮದ ಆಜ್ಞೆಯನ್ನು ಶಿರಸಾವಹಿಸಿ ಬಡ್ಡಿ ತೆಗೆದುಕೊಳ್ಳುವುದಿಲ್ಲ. ಸಹಾಯ ಸ್ವೀಕರಿಸಿದವರೂ ಅದನ್ನು ಧರ್ಮವೆಂದು ತೆಗೆದುಕೊಳ್ಳದೆ ಕಡವಾಗಿಯೇ ತೆಗೆದುಕೊಂಡು ತಮಗೆ ಆದ ಲಾಭದಲ್ಲೊಂದು ಅಂಶವನ್ನು ಕಡವಿತ್ತವರಿಗೆ ಕೊಡುವರು.

ನವಾಯತರ ಸಂಚಾರಿ ಜೀವನವು ಅವರಲ್ಲಿ ವಿಶಿಷ್ಟವಾದ, ಇತರರಿಗೆ ವಿಲಕ್ಷಣವೆನಿಸಬಹುದಾದ ರೂಢಿ ಸಂಪ್ರದಾಯಗಳಿಗೆ ಎಡೆಗೊಟ್ಟಿದೆ. ಪರಸ್ಥಳಗಳ ನವಾಯತರೊಂದಿಗೆ ಬಂಧು-ಪ್ರೇಮದಿಂದ ನಡೆದುಕೊಂಡರೂ ಅವರೊಡನೆ ವಿವಾಹ ಸಂಬಂಧ ಮಾಡುವ ರೂಢಿ ಇಲ್ಲದ್ದರಿಂದ ಗಂಡಸರು ಮದುವೆಯಾಗಿ ಕೆಲ ಕಾಲದ ವರೆಗೆ, ಒಂದೆರಡು ಮಕ್ಕಳಾಗುವ ವರೆಗೆ, ಹೆಂಡಂದಿರನ್ನು ತವರುಮನೆಯಲ್ಲೇ ಬಿಡುವರು. ಹೆಂಡತಿ ತವರಿನಲ್ಲಿದ್ದಷ್ಟು ಕಾಲ ಅವಳ ಹಾಗು ಮಕ್ಕಳ ವೆಚ್ಚದ ಚಿಂತೆ ಅವನು ಮಾಡಬೇಕಾಗಿಲ್ಲ. ಪರವೂರಿಂದ ಮನೆಗೆ ಬಂದಾಗ ಏನಾದರೂ ಶೃಂಗಾರ ಸಾಧನಗಳನ್ನಷ್ಟೇ ತಂದುಕೊಡುತ್ತಾನೆ. ಅವನ ಗಳಿಕೆಯೆಲ್ಲ ಆ ವರೆಗೆ ತಾಯಿಯ ಕೈಗೇ ಹೋಗತಕ್ಕದ್ದು. ತವರಿನವರು ಬಡವರಿದ್ದರೆ ಗಳಿಕೆಯ ಒಂದಂಶ ಹೆಂಡತಿಗೆ ಸಿಗಬಹುದಾದರೂ ಅದು ಅತ್ತೆಯ ಮುಖಾಂತರವೇ ಬರಬೇಕಲ್ಲದೆ ನೇರ ಹಾದಿ ಅಲ್ಲ.

ಈ ತವರಿನ ನಚ್ಚು ನವಾಯತರಲ್ಲಿ ಎಷ್ಟು ಬಲವಾಗಿದೆಯೆಂದರೆ, ಮದುವೆಯಾದೊಡನೆ ಗಂಡನ ಮನೆಗೆ ಹೋಗುವುದು ಅತ್ಯಂತ ಆಚಾರ ಭ್ರಷ್ಟತೆಯೆನಿಸುವದು. ಗಂಡ ಊರಲ್ಲೇ ಇರುವಾಗಲೂ ನವವಿವಾಹಿತೆ ಅವನ ಮನೆಗೆ ಹೋಗಲಾರಳು. ರಾತ್ರಿ ತನ್ನ ಮನೆಯಲ್ಲಿ ಊಟ ಮುಗಿಸಿಕೊಂಡು ಅವಳ ಮನೆಗೆ ಮಲಗಲು ಅವನು ಹೋಗಬೇಕು. ಕನಿಷ್ಠ ಪಕ್ಷ ಒಂದು ತಿಂಗಳಾದರೂ ಈ ನಿಯಮ ಅನುಸರಿಸಲೇಬೇಕು. ಹೀಗಿರುವದರಿಂದ ಕೇರಿಯೊಳಗೇ ಸಂಬಂಧವಾಗುವ ಪರಿಪಾಠ ಬಿದ್ದುಹೋಗಿದೆ. ಗಂಡ ಸತ್ತರೆ ಆಮೇಲೆ ಎಂದೂ ಅವಳು ಅತ್ತೆಯೊಡನೆ ವಾಸಿಸುವುದಿಲ್ಲ. ತವರು ಮನೆಯಲ್ಲಿಯೇ ಉಳಿಯುವಳು. ತಂದೆ ತಾಯಿ ಸತ್ತಿದ್ದರೆ ಅಣ್ಣತಮ್ಮಂದಿರೊಡನಾದರೂ ಉಳಿಯುವಳು.

ನವಾಯತರ ಸಾಮಾಜಿಕ ವ್ಯವಹಾರದಲ್ಲಿ ಆಳು-ಒಡೆಯ ಭೇದವಿಲ್ಲದಿದ್ದರೂ ಹಿಂದೂ ಪ್ರಭಾವದಿಂದಲೋ ಏನೋ ಕೆಲ ಕುಲಗಳು ಶ್ರೇಷ್ಠ, ಕೆಲವು ಕನಿಷ್ಠವೆಂಬ ಭಾವನೆ ಬಲವಾಗಿದೆ. ಇದು ಪ್ರಕಟಕ್ಕೆ ಬರುವದು ಮುಖ್ಯವಾಗಿ ವಿವಾಹ ಸಂಬಂಧದಲ್ಲಿ. ಧನವು ಈ ಕುಲದ ಅಂತಸ್ತನ್ನು ನಿರ್ಣಯಿಸುವುದಿಲ್ಲ. ಕೀಳೆನಿಸುವವರಲ್ಲಿಯೂ ಧನವಂತರಿದ್ದಾರೆ. ಮದುವೆಗಳು ಸಮಾನ ಅಂತಸ್ತಿನವರಲ್ಲಿಯೇ ಜರಗುವವು.

ವೇಷಭೂಷೆಗಳಲ್ಲಿಯೂ ನವಾಯತರು ವಿಶಿಷ್ಟ ಮಾದರಿಯನ್ನನುಸರಿಸುತ್ತಾರೆ. ಲುಂಗಿ, ಶರ್ಟ್' ಬಿಳಿ ಟೊಪ್ಪಿಗೆ ಇವು ಗಂಡಸರ ಸಾಮಾನ್ಯ ಉಡುಪು. ಈಗೀಗ ಮುಸ್ಲಿಮರು ಹೆಚ್ಚಾಗಿ ಧರಿಸುವ ತುರ್ಕಿ ಟೊಪ್ಪಿಗೆ ಮತ್ತು ಯೂರೋಪ್ಯ ಮಾದರಿಯ ಉಡುಪು ಇವರಲ್ಲಿ ಪ್ರಸಾರಕ್ಕೆ ಬರುತ್ತಿದ್ದರೂ ಮದುವೆಯ ಕಾಲದಲ್ಲಿ ನವಾಯತ ಜನಾಂಗದ ಪರಂಪರಾಗತ ಉಡುಪನ್ನೇ ಧರಿಸಬೇಕಾಗುವದು.

ಸ್ತ್ರೀಯರಲ್ಲಿ ನಿಷ್ಠುರ ಗೋಷಾ ಪದ್ಧತಿ ಇದೆ. ಲಂಗ ಹಾಕಿಕೊಂಡು ಮೇಲೆ ಸೀರೆಯುಟ್ಟು ತಲೆಗೆ ಸೆರಗೆಳೆದುಕೊಳ್ಳುವರು. ಇಡಿ ಕೈಯ ಬ್ಲೌಜ್ ತೊಡುವರು. ಗೋಷೆಗೆ ಬುರುಕೆ ಉಪಯೋಗಿಸದೆ 'ವೊಡವಿ' ಎಂಬ ಒಂದು ತರದ ಬಟ್ಟೆಯನ್ನುಪಯೋಗಿಸುವರು. ಕೆಂಪಂಚಿನ ಬಿಳಿ ರೇಶಿಮೆ ಸೀರೆಯೇ ಮದುವೆಯಲ್ಲಿ ವಧುವಿನ ವೇಷ.

ನವಾಯತ ಸ್ತ್ರೀಯರು ಮೂಗು ಕಿವಿ

ಕೊರಳು ಭುಜ ಕೈ ಬೆರಳುಗಳಲ್ಲೆಲ್ಲ ಆಭರಣ ಧರಿಸುವರು. ಹಿಂದುಗಳಂತೆ ಕೈಯಲ್ಲಿ ಕಾಜಿನ ಹಾಗೂ ಬಂಗಾರದ ಬಳೆಗಳನ್ನು ಹಾಕಿಕೊಳ್ಳುತ್ತಾರೆ. ಆದರೆ ಅವರ ವೈಶಿಷ್ಟ್ಯ ಕಿವಿಯಲ್ಲಿ ೫, ೭ ಅಥವಾ ೯ ಹೆಜ್ಜಗಳನ್ನು ಕೊರೆದು ವಿವಿಧ ಆಭರಣಗಳನ್ನು ಧರಿಸುವುದು. ಇದರಲ್ಲಿ ಅವರು ತಮ್ಮ ಧರ್ಮಬಂಧುಗಳಾದ ಮಾಪಿಳ್ಳೆಗಳಂತೆಯೇ ಇದ್ದಾರೆ.

ನವಾಯತರಿಗೆ ಮದುವೆ ಅತಿ ಮಹತ್ವದ ಘಟನೆ. ವಿವಾಹವಿಚ್ಛೇದದ ಹಕ್ಕು ಇದ್ದರೂ ವಿವಾಹ ಮುರಿಯಬಾರದ ಪವಿತ್ರ ಬಂಧನ ವೆಂದೇ ಅವರ ಭಾವನೆ. "ಕರಿಮನಿಯಾ ಲಾಸೊ" ಎಂಬ ಕರಿಮಣಿ ಸರವನ್ನು ವಧು ಧರಿಸಲೇಬೇಕೆಂಬುದು ಹಿಂದೂ ಪದ್ಧತಿಯ ಅನುಸರಣೆಯಿರಬೇಕು. ಮದುವೆ ನಿಶ್ಚಯ ತೊಟ್ಟಿಲಲ್ಲೇ ಆದಂತೆ ಆಗುವದುಂಟಾದರೂ ಹುಡುಗಿಗೆ ೮-೧೦, ಈಗೀಗ ೧೩-೧೬ ವರ್ಷಗಳಾದ ಮೇಲೆಯೇ ವಿವಾಹ ವಿಧಿ ಜರಗುವುದು. ಹುಡುಗನಿಗೆ ಕನಿಷ್ಠ ೧೬ ವರ್ಷಗಳಾಗದೆ ಮದುವೆಯಿಲ್ಲ.

ಲಗ್ನದ ಸೂಚನೆ ವರನ ಕಡೆಯಿಂದಲೇ ಪ್ರಾರಂಭವಾಗಬೇಕು. ವರನು ವಧುವನ್ನು ನೋಡುವಂತಿಲ್ಲ. ಅವನ ತಾಯಿ, ಅಕ್ಕತಂಗಿಯರು ನೋಡಿಕೊಂಡು ಬಂದ ನಂತರ ವರನ ತಂದೆ ಕಾಜಿಯನ್ನೂ ಕೆಲ ಸ್ನೇಹಿತರನ್ನೂ ಕರೆದುಕೊಂಡು ವಧೂಗೃಹಕ್ಕೆ ಹೋಗಿ ವಿವಾಹ ನಿಶ್ಚಯಮಾಡಬೇಕು. ಅಲ್ಲಿ ಸಿಹಿ ಹಂಚುವಾಗ ಯಾರಾದರೂ "ಇದೇಕೆ?" ಎಂದು ಪ್ರಶ್ನಿಸಬೇಕು. ಆಗ ವಧುವಿನ ತಂದೆ ತನ್ನ ಮಗಳನ್ನು ಇಂಥವನ ಮಗನಿಗೆ ಲಗ್ನ ಮಾಡಿಕೊಡಲು ನಿಶ್ಚಯಿಸಿದ್ದಾಗಿ ಉತ್ತರವೀಯಬೇಕು. ಬಂದವರಿಗೆ ಅಂದು ಅಲ್ಲೇ ಆತಿಥ್ಯ. ಮರುದಿನ ಇದೇ ವಿಧಿ ವರನ ಮನೆಯಲ್ಲಿಯೂ ನಡೆಯುವದು.

ನವಾಯಿತರಲ್ಲಿ ವಿವಾಹದ ವೆಚ್ಚವೆಲ್ಲ ಹಿಂದುಗಳಲ್ಲಿ ಹೇಗೊ ಹಾಗೆ ಹೆಣ್ಣಿನ ಕಡೆಯವರೇ ಹೊರತಕ್ಕದ್ದು. ನಿಕಾದ ೧೦ ದಿನ ಮೊದಲು ಪ್ರಾರಂಭವಾದ ಸಮಾರಂಭಗಳು ೩೦ ದಿನಗಳ ವರೆಗೆ ಸಾಗುತ್ತಿರುವವು.

ವಿವಾಹವು ಕಾಜಿಯ ಕುರಾಣ ಪಠನದೊಡನೆ ಕೇವಲ ಹತ್ತು ನಿಮಿಷಗಳಲ್ಲಿ ಮುಗಿದುಹೋಗುವ ಸರಳ ಮುಸ್ಲಿಂ ವಿಧಿಯಾದರೂ ಅದರ ಪೂರ್ವಾಪರ ಸಮಾರಂಭ ಸಂಭ್ರಮಗಳಲ್ಲಿ ಹಿಂದೂ ಪದ್ಧತಿಯ ಬೀಳಲುಗಳು ಸುತ್ತಿಕೊಂಡಿವೆ. ಈ ವಿವಾಹ ವಿಧಿ ನಡೆಯುವದು ವರನ ಮನೆಯಲ್ಲಿ;ಅಲ್ಲಿ ಅನುಕೂಲವಿಲ್ಲದಿದ್ದರೆ ಮಸೀದೆಯಲ್ಲಿ—ಹೊರತು ವಧುವಿನ ಮನೆಯಲ್ಲಲ್ಲ. ಅದರಲ್ಲಿ ವಧು ಹಾಜರಿರುವದೇ ಇಲ್ಲ. ವರ, ವಧುವಿನ ತಂದೆ-ಪಾಲಕ, ಕಾಜಿ, ಸಾಕ್ಷಿದಾರರು ಇಷ್ಟೇ ಜನರಿಗೆ ಅಲ್ಲಿ ಕೆಲಸ.

ಇದು ಮುಗಿದ ನಂತರ ಹಿಂದೂ ವಿಧಿಯಾದ ಕರಿಮಣಿ ಕಟ್ಟುವುದು ಬರುತ್ತದೆ. ಆದರೆ ಕರಿಮಣಿ ಸರ ವಧುವಿನ ಕೊರಳಿಗೆ ಕಟ್ಟುವವನು ವರನಲ್ಲ ; ಅವನ ತಾಯಿ ಅಥವಾ ಅಕ್ಕತಂಗಿಯರು ಹೋಗಿ ವಧುವಿನ ಮನೆಯಲ್ಲೇ "ತಾಳಿಕಟ್ಟಿ" ಬರಬೇಕು. ಮತ್ತೆ ಈ ತಾಳಿಕಟ್ಟುವವರು ವಿಧವೆಯರಾಗಿರದೆ "ಮುತ್ತೈದೆ" ಯರೇ ಇರತಕ್ಕದ್ದು !

ಮದುವೆಗೆ ಹತ್ತು ದಿನಗಳ ಮೊದಲೇ ಎರಡೂ ಮನೆಗಳಲ್ಲಿ ಸಂಭ್ರಮ ಪ್ರಾರಂಭವಾಗುತ್ತದೆ. ಮೊದಲನೇ "ರತ್ಥಾ" ದ ದಿನ ವರನ ಮನೆಯಲ್ಲಿ ಕರಿಮಣಿ ಸರ ಪೋಣಿಸಲು ಮುಹೂರ್ತವಾದರೆ ವಧುವಿನ ಮನೆಯಲ್ಲಿ ವಿವಾಹ ಮಂಚ (ಅದಕ್ಕೆ ಮಂಟಪವೆನ್ನುತ್ತಾರೆ) ದ ಶೃಂಗಾರ ಮುಹೂರ್ತವಾಗುತ್ತದೆ. ಈ ಮಂಟಪ ಬಹಳ ಎತ್ತರವಾಗಿದ್ದು ಒಂದರಮೇಲೊಂದರಂತೆ ಏಳು ಚಾಪೆಗಳನ್ನು ಅದರ ಮೇಲೆ ಹಾಸಿರುತ್ತಾರೆ. ವಧೂವರರು ಸ್ಟೂಲಿನ ಸಹಾಯದಿಂದಲೇ ಇದನ್ನೇರಬೇಕಾಗುವದು. ನಿಕಾದ ದಿನದಿಂದ ನಾಲ್ಕು ದಿವಸ ಕಾಲ ನಿರಂತರವಾಗಿ ವಿವಾಹ ಮಂಟಪದ ಬಳಿ ನಂದಾದೀಪ ಉರಿಯಬೇಕು, ದೀವಟಿಗೆ ಸೇವೆಯಾಗಬೇಕು. ಮದುವೆಯ ಸಂಬಂಧದ ಹಾಡುಗಳನ್ನು

ಹಾಡಲು 'ಜಾಗರಣೆ' ಎಂಬೊಂದು ರಾತ್ರಿ ಸಮಾರಂಭವೇ ಇದೆ. ಇನ್ನೊಂದು ದಿನ ಪೈಗಂಬರರ ಜೀವನವನ್ನು ಕುರಿತ ಹಾಡು ಹಾಡುವರು. ಮದುವೆಗೆ ೫ ದಿನ ಮೊದಲೇ ವಧೂವರರಿಗೆ ಎಣ್ಣೆ ಹಚ್ಚಿ ಎರೆಯುವದೇ ಮೊದಲಾದ ಭಾರತೀಯ ಸಂಪ್ರದಾಯಗಳೂ ಉಳಿದುಕೊಂಡಿವೆ.

ವಧೂವರರ ಭೆಟ್ಟಿಯಾಗುವುದು ನಿಕಾದ ಮರುದಿನ. ಅಂದು ಬೆಳಿಗ್ಗೆ ವಧುವಿನ ಉಡುಪಾದ 'ಜೀಹಾಜ' ಸಹಿತವಾಗಿ ವರನು ಮೆರವಣಿಗೆಯಲ್ಲಿ ಮಧುವಿನ ಮನೆಗೆ ಹೊರಡುತ್ತಾನೆ. ದಾರಿಯಲ್ಲಿ ಬಂಧುಮಿತ್ರರು ಹಾಲು-ಸಿಹಿತಿನಿಸು ಕೊಡುವರು. ಅದರಲ್ಲಿ ಸ್ವಲ್ಪವನ್ನು ಬಾಯಲ್ಲಿರಿಸಿಕೊಂಡೇ ವರನು ವಧೂಗೃಹಕ್ಕೆ ಬಂದು ಅಲ್ಲಿ ಅದನ್ನು ಪೀಕದಾನಿಯಲ್ಲಿ ಉಗುಳಿ ಬಾಯಿ ತೊಳೆದುಕೊಂಡು ಮಾವನ ಆತಿಥ್ಯ ಸ್ವೀಕರಿಸುವನು. ಅನಂತರ ಇತರ ಉಪಚಾರಗಳು.

'ಘರ ಬೋರೋವ್ನಿ' (ಮನೆ ತುಂಬಿಕೊಳ್ಳುವುದು) ಕೂಡ ಹಿಂದೂ ಪದ್ಧತಿಯ ಪ್ರತಿಬಿಂಬ. ಅದೂ ನಿಕಾದ ಮರುದಿನ ರಾತ್ರಿಯೇ. ವರನ ತಾಯಿ ವಧುವನ್ನು ಬರಮಾಡಿಕೊಂಡು ಬಾಗಿಲಲ್ಲಿ ಹಾಲಿನಿಂದ ಕಾಲು ತೊಳೆಯಿಸಿ, ಬಲಗಾಲು ಮುಂದಾಗಿ ಮನೆಯೊಳಗೆ ಪ್ರವೇಶಗೊಳಿಸುತ್ತಾಳೆ. ಆಗ ವಧುವಿಗೆ ಹಣ ಮತ್ತು ಒಡವೆಗಳನ್ನು ಉಡುಗರೆ ಕೊಡುವರು.

ಅನಂತರ ಆ ರಾತ್ರಿ ವಧುವಿನ ತಂದೆಯ ಆಮಂತ್ರಣದಮೇರೆಗೆ ವರನೊಬ್ಬನೇ ಬರುವನು. ಅಂದೇ ಪ್ರಸ್ತ. ಊಟ ಉಪಚಾರಗಳ ನಂತರ ವರನು ವೈವಾಹಿಕ ಮಂಚವುಳ್ಳ ಕೋಣೆಯಲ್ಲಿ ಪ್ರವೇಶಿಸುವನು. ವೃದ್ಧೆಯೊಬ್ಬಳು ವಧುವನ್ನು ಕರೆತಂದು ಕೋಣೆ ಸೇರಿಸಿ ಹೋಗುವಳು. ದಂಪತಿಗಳು ಮರುದಿನ ಬೆಳಗ್ಗೆ ಬೇಗ ಏಳಬೇಕು. ವರ ಸ್ನಾನ ಮಾಡಿ ಫಲಹಾರ ಮುಗಿಸಿ ಎರಡನೆಯವರು ನೋಡುವ ಮೊದಲೇ ತನ್ನ ಮನೆಗೆ ಹಿಂದಿರುಗಬೇಕು.

ನವಾಯತರು ಅರಬ ವಂಶಜರಾದರೂ ದೇಶೀಯ ಸಂಪ್ರದಾಯ-ಸಂಸ್ಕೃತಿಗಳು ಅವರ ಮೇಲೆ ಎಷ್ಟು ಪ್ರಭಾವ ಬೀರಿವೆಯೆಂಬುದಕ್ಕೆ ಮೇಲಿನ ನಿದರ್ಶನಗಳು ಸಾಕು. ಅವರ ಭಾಷೆಯಾದರೂ ಕೊಂಕಣಿಯ ಒಂದು ಪ್ರಕಾರವೆನ್ನಬಹುದಾದ ನವಾಯತಿ. ಹೀಗಿದ್ದರೂ ನವಾಯತರಲ್ಲಿ ಪ್ರತ್ಯೇಕತಾಭಾವನೆ ಇನ್ನೂ ದೂರವಾಗಿಲ್ಲ. ಶಿಕ್ಷಣ ವಿಷಯದಲ್ಲಿ ಸಾಕಷ್ಟು ಮುಂದುವರಿಯದ ಈ ಸಮಾಜದ ಪ್ರಮುಖರು ಈಚೆಗೆ ಎಚ್ಚೆತ್ತು ಈ ದಿಶೆಯಲ್ಲಿ ಹೆಜ್ಜೆಯಿಡತೊಡಗಿದ್ದಾರೆ. ವ್ಯಾಪಾರದಲ್ಲಿ ವಿಚಕ್ಷಣರಾದ ನವಾಯತರು ದೇಶದ ಪ್ರಮುಖಧಾರೆಯಲ್ಲಿ ಸಮರಸರಾದಾಗ ಕರ್ನಾಟಕದಲ್ಲಿ ಅವರ ಪ್ರಭಾವ ಬೆಳೆಯುವದರಲ್ಲಿ ಸಂಶಯವಿಲ್ಲ. ದೇಶವೂ ಅವರಿಂದ ತುಂಬಪ್ರಯೋಜನ ಪಡೆಯದಿರದು.



**ಮುಗುಳಾಗಿರೆ ಮುಚ್ಚುವ ನರುಗಂಪನು**
**ಅರಲಾದರೆ ಮುಚ್ಚಲು ಬಹುದೇ ?**
**ಮುಗುದತನದೊಳಿದೆಮುಚ್ಚಿರೆ ಹರೆಯದೆ**
**ತೆರೆಯದೆ ? ಅದ ನಚ್ಚಲುಬಹುದೇ ?**

—ಕಡಂಗೋಡ್ಲು ಶಂಕರಭಟ್ಟ
(ಹೊನ್ನಿಯ ಮದುವೆಯಿಂದ)

ಸಿಡಿಲು-ಮಿಂಚುಗಳಿಂದ ಉಪಕಾರವಿದೆಯಾದರೂ
ಅವು ಮುನಿದರೆ ಭಯಂಕರ

# ಅಪಾಯಕರ ಮಿತ್ರ—ಮಿಂಚು

ಪಾವೆಂಆ

ನೀವು ಈ ಲೇಖವನ್ನೋದುತ್ತಿದ್ದಂತೆ ಈ ಭೂಮಿಯ ಸುತ್ತ ಒಟ್ಟು ೨,೦೦೦ ದಷ್ಟು ಸಿಡಿಲುಗಳು ಎರಗಿರುತ್ತವೆ. ಒಮ್ಮೆ ಉಸಿರೆಳೆದುಕೊಂಡು ಹೊರಬಿಡುವಷ್ಟು ಅವಕಾಶದಲ್ಲಿ ೧೦೦ ಮಿಂಚುಗಳು ಗಾಳಿಯನ್ನು ಸೀಳುತ್ತವೆ.

ವರ್ಷಕ್ಕೆ ೧ ಕೋಟಿ ೬೦ ಲಕ್ಷ ಸಿಡಿಲುಗಳು ಬಡಿಯುತ್ತವೆಂದು ತಜ್ಞರು ಅಂದಾಜು ಮಾಡಿದ್ದರೂ ಅವು ಭೂಮಿಯ ಎಲ್ಲ ಪ್ರದೇಶಗಳಲ್ಲಿ ಒಂದೇ ಪ್ರಮಾಣದಲ್ಲಿ ಬಡಿಯುವುದಿಲ್ಲ. ಜಾವಾ ದ್ವೀಪವನ್ನು ಮಿಂಚು ಸಿಡಿಲುಗಳ ತವರೂರೆನ್ನಬಹುದು. ಅಲ್ಲಿ ವರ್ಷಕ್ಕೆ ೨೨೩ ದಿನ ಗುಡುಗುಗಳ ಗರ್ಜನೆ ಇರುತ್ತದೆ. ಮಧ್ಯ ಆಫ್ರಿಕ, ಮಧ್ಯ ಅಮೇರಿಕ, ಬ್ರೇಜಿಲ್, ಮಡಗಾಸ್ಕರ ದ್ವೀಪ ಮೊದಲಾದ ಕಡೆಗಳಲ್ಲಿಯೂ ಮಿಂಚು-ಸಿಡಿಲುಗಳ ಅಬ್ಬರ ಬಹಳ.

ಸಿಡಿಲು-ಮಿಂಚುಗಳು ಅನಾದಿಯಿಂದಲೂ ಮನುಷ್ಯನನ್ನು ಚಮಕಿತನನ್ನಾಗಿ ಮಾಡಿವೆ; ಸಂಗಡಲೇ ಭಯವಿಹ್ವಲನನ್ನಾಗಿಯೂ ಮಾಡಿವೆ. ಸಿಡಿಲು ಇಂದ್ರನ ಆಯುಧ; ಅದು ಬರುವಾಗ ಅವನ ಮಗನಾದ ಅರ್ಜುನನನ್ನು ನೆನೆದರೆ ಅದು ನಮ್ಮ ಮೇಲೆರಗಲಾರದೆಂಬ ನಂಬಿಕೆ ಭಾರತದಲ್ಲಿದೆ.

ಸಿಡಿಲಿನ ಭಯ ಮನುಷ್ಯನಿಗೆ ಉಂಟಾದದ್ದು ನಿಷ್ಕಾರಣವೆನ್ನಲು ಬರುವದಿಲ್ಲ. ಪ್ರತಿ ವರ್ಷ ಸಿಡಿಲು ಬಡಿದು ಸತ್ತಷ್ಟು ಜನ ನೆರೆಹಾವಳಿ, ಬಿರುಗಾಳಿ, ಭೂಕಂಪಾದಿ ವಿಪ್ಲವಗಳಿಂದ ಸಾಯುವುದಿಲ್ಲ.

ಸಿಡಿಲು-ಮಿಂಚುಗಳು ಹೀಗೆ ಭಯಂಕರವೆನಿಸಿದರೂ ಅವುಗಳ ಬಗ್ಗೆ ವೈಜ್ಞಾನಿಕ ಶೋಧ ಪ್ರಾರಂಭವಾದದ್ದು ಕೇವಲ ೨೦೦ ವರ್ಷಗಳ ಹಿಂದೆ. ಆಗ ಅಮೇರಿಕದ ಲೇಖಕ-ವಿಜ್ಞಾನಿ ಬೆಂಜಾಮಿನ್ ಫ್ರಾಂಕ್ಲಿನ್ನನು ಮಿಂಚೆಂದರೆ ವಿದ್ಯುತ್ತೇ ಇರಬೇಕೆಂದು ತರ್ಕಿಸಿ, ಒಂದು ರೇಶ್ಮೆಯ ಗಾಳಿಪಟವನ್ನು ಮುಗಿಲಿಗೆ ಹಾರಿಸಿದನು. ಅದರ ದಾರದ

ಕೆಳತುದಿಗೆ ರೇಶ್ಮೆಯ ನೂಲಿಂದ ಒಂದು ಬೀಗದ ಕೈ ಕಟ್ಟಿದನು. ಅದಕ್ಕೆ ಆಗಾಗ್ಗೆ ಲೋಹದ ತುಂಡನ್ನು ತಗಲಿಸಿದನು. ಎಷ್ಟೋ ವೇಳೆ ಅದರಿಂದ ಕಿಡಿಗಳು ಹಾರಿದವು. ಮಿಂಚು ವಿದ್ಯುತ್ತೇ ಎಂದೂ ಅದು ಮೋಡದಿಂದ ಗಾಳಿಪಟದ ದಾರದ ಗುಂಟ ಹರಿದುಬಂದಿತೆಂದೂ ಇದರಿಂದ ಸಿದ್ಧವಾಯಿತು.

ಬೆಂಜಾಮಿನ್ ಫ್ರಾಂಕ್ಲಿನ್ ಚಾಣಾಕ್ಷ ವ್ಯವಹಾರಸ್ಥನಾದರೂ ಈ ಪ್ರಯೋಗದಲ್ಲಿ ಅವನು ಹುಂಗಾಟವನ್ನೇ ಮಾಡಿದ್ದನು. ವಿದ್ಯುತ್ತಿನ ಆಘಾತದಿಂದ ಪ್ರಾಣಕ್ಕೆರವಾಗದಿದ್ದುದು ಅವನ ಪುಣ್ಯ. ಯಾಕೆಂದರೆ ಒಂದು ಬಲವಾದ ಮಿಂಚು ಹಿರೋಶಿಮಾದಲ್ಲಿ ಒಗೆದ ಪರಮಾಣು ಬಾಂಬಿಗಿಂತ ೧೦೦ ಪಟ್ಟು ಶಕ್ತಿಯುಳ್ಳದ್ದೆಂದು ವಿಜ್ಞಾನಿಗಳು ಊಹಿಸಿದ್ದಾರೆ.

ಸಿಡಿಲು ಬಡಿದು ಗಿಡಗಳು ಉರಿಯುವದನ್ನೂ ಮನುಷ್ಯರು ತತ್‌ಕ್ಷಣ ಸಾಯುವುದನ್ನೂ ಎಲ್ಲರೂ ನೋಡಿದ್ದಾರೆ. ಕೆಲವರು ಆಶ್ಚರ್ಯಕರವೆನಿಸುವಂತೆ ಹತ್ತಿರವಿದ್ದರೂ ಬದುಕಿ ಉಳಿಯುವುದುಂಟು. ಅಮೇರಿಕದಲ್ಲಿ ಒಮ್ಮೆ ಸುತ್ತಲೂ ಇದ್ದ ೮೩೫ ಕುರಿಗಳು ಸಿಡಿಲು ಬಡಿದು ಸತ್ತರೂ ನಡುವೆ ಇದ್ದ ಕುರುಬ ಮಾತ್ರಹೇಗೋ ಬದುಕಿ ಉಳಿದಿದ್ದ.

ಸಿಡಿಲು ನಮಗಿಷ್ಟು ಅಪಾಯಕರವಾಗಿದ್ದರೂ ಅದು ನಮಗರಿಯದಂತೆ ಅಪಾರ ಉಪಕಾರವನ್ನೂ ಮಾಡುತ್ತದೆಂದು ತಿಳಿದುಬಂದಿರುವುದು ಈಚೀಚೆಗೆ ಮಾತ್ರ. ಮಳೆಯನ್ನುಂಟುಮಾಡುವುದಂತಿರಲಿ, ನಮ್ಮ ಆಹಾರವನ್ನು ಉತ್ಪಾದಿಸುವ ಮತ್ತು ನಾವು ಉಸಿರಾಡಿಸುವ ಗಾಳಿಯನ್ನು ಪರಿಶುದ್ಧವಾಗಿಡುವ ಕಾರ್ಯದಲ್ಲಿ ಸಿಡಿಲು-ಮಿಂಚುಗಳು ನಂಬಲಾರದಷ್ಟು ಸಹಾಯ ಮಾಡುತ್ತವೆ.

ಪ್ರತಿಯೊಂದು ಮಿಂಚು ಗಾಳಿಯನ್ನು ಭೇದಿಸಿ ಹೋಗುತ್ತಿರುವಾಗ ಕಲ್ಪನಾತೀತವೆನಿಸುವಷ್ಟು ಉಷ್ಣತೆಯನ್ನುಂಟುಮಾಡುತ್ತದೆ. ಇದರಿಂದ ಪ್ರಾಣವಾಯು (ಆಕ್ಸಿಜನ್) ಮತ್ತು ಸಾರಜನಕ (ನೈಟ್ರೋಜನ್) ಪರಮಾಣುಗಳು ಸಂಯೋಗವಾಗಿ ಸಾರಜನಕ ಭಸ್ಮ (ನೈಟ್ರೋಜನ್ ಆಕ್ಸೈಡ್) ಉಂಟಾಗುತ್ತದೆ. ಇದು ಇನ್ನಷ್ಟು ಪ್ರಾಣವಾಯುವಿನೊಡನೆ ಕೂಡಿಕೊಂಡು ನೀರಿನಲ್ಲಿ ಸೇರಿ ಸಾರಜನಕಾಮ್ಲ ಮತ್ತು ಇತರ ಸಾರಜನಕ ಸಂಯುಕ್ತಗಳಾಗಿ ಮಳೆಯೊಡನೆ ನೆಲಕ್ಕೆ ಬೀಳುತ್ತದೆ. ಸಸ್ಯ ಜೀವನಕ್ಕೆ ಅತ್ಯಗತ್ಯವಾದ ಈ ಸಂಯುಕ್ತಗಳನ್ನು ವರ್ಷಕ್ಕೆ ೧೦ ಕೋಟಿ ಟನ್ನುಗಳಷ್ಟು ಸಿಡಿಲು-ಮಿಂಚುಗಳೇ ಉತ್ಪಾದಿಸುತ್ತವೆ. ಇವಿಲ್ಲದಿದ್ದರೆ ಭೂಮಿಯ ಮೇಲೆ ಸಸ್ಯ ಜೀವನವೂ ಸಂಗಡಲೇ ಪ್ರಾಣಿ ಜೀವನವೂ ಸಾವಕಾಶವಾಗಿ ಲುಪ್ತವಾಗಬೇಕಾದೀತು.

ಸಿಡಿಲು-ಮಿಂಚುಗಳ ಪರಿಶೀಲನೆಯಿಂದ ಹವಾಮಾನ ಭವಿಷ್ಯ ಹೇಳಲಿಕ್ಕೂ ಅನುಕೂಲವಾಗುತ್ತದೆ.

ಸಿಡಿಲು-ಮಿಂಚುಗಳು ಯಾಕೆ ಉಂಟಾಗುತ್ತವೆ: ಸರಿಯಾಗಿ ಯಾರಿಗೂ ಗೊತ್ತಿಲ್ಲ. ಹೇಗೆ ಉಂಟಾಗುತ್ತವೆಂದು ತಕ್ಕಮಟ್ಟಿಗೆ ಗೊತ್ತಿದೆ.

ಕೆಲವೊಮ್ಮೆ ವೈಮಾನಿಕರು ಅನಿವಾರ್ಯವಾಗಿ ವಿದ್ಯುನ್ಮೇಘಗಳನ್ನು ಹೊಕ್ಕು ಹೊರಡಬೇಕಾಗುತ್ತದೆ. ಆಗ ಅವರು ಅಲ್ಲಿ ಅಗಾಧವಾದ ಉತ್ಪಾತ ನಡೆಯುವುದನ್ನು ಕಾಣುತ್ತಾರೆ. ಬಿಸಿ ಗಾಳಿಯ ಮೇಲ್ಗತಿ ಮತ್ತು ತಂಪು ಗಾಳಿಯ ಕೀಳ್ಗತಿಗಳು ಒಮ್ಮೊಮ್ಮೆ ತಾಸಿಗೆ ೧೬೦ ಮೈಲು ವೇಗದಿಂದ ಅಲ್ಲಿ ಆಗುತ್ತಿರುತ್ತವೆ. ಅವುಗಳ ನಡುವೆ ಮಳೆಹನಿ, ಆಣೆಕಲ್ಲು, ಮಂಜಿನ ರೇಕುಗಳು ಸೇರಿಕೊಂಡಿರುತ್ತವೆ. ದೊಡ್ಡ ಮಿಂಚಿನ ಮೋಡವೊಂದರಲ್ಲಿ ೩,೦೦,೦೦೦ ಟನ್ ವರೆಗೂ ನೀರಿನ ಕಣಗಳಿರಬಹುದು. ಇವೆಲ್ಲವೂ ಗಾಳಿಯ ಸುಳಿದಾಟದಲ್ಲಿ ಸಿಲುಕಿ ಪುರಾಣದ ಸಮುದ್ರಮಥನದಂಥ ತುಮುಲಕ್ರಿಯೆ ಜರಗುತ್ತದೆ.

ಈ ತುಮುಲದಲ್ಲಿ ವಿದ್ಯುತ್ತು ಉತ್ಪನ್ನವಾಗುತ್ತದೆ. ಮೊದಮೊದಲು ಅದರಲ್ಲಿ ಋಣ ವಿದ್ಯುತ್ತು ಮತ್ತು ಧನವಿದ್ಯುತ್ತು ಸಮಸಮ ಪ್ರಮಾಣದಲ್ಲಿರುತ್ತವೆ. ಆದರೆ ತುಮುಲ

ಕೋಲಾಹಲ ಹೆಚ್ಚಿದಹಾಗೆ, ಮೋಡ ಭೂಮಿಯಿಂದ ಸುಮಾರು ೭ ಮೈಲೆತ್ತರದಲ್ಲಿದ್ದಾಗ ಧನ ಮತ್ತು ಋಣ ವಿದ್ಯುತ್ತುಗಳು ಬೇರ್ಪಟ್ಟು ಋಣ ವಿದ್ಯುತ್ತು ಮೋಡದ ಕೆಳಭಾಗದಲ್ಲಿಯೂ ಧನವಿದ್ಯುತ್ತು ಮೇಲ್ಭಾಗದಲ್ಲಿಯೂ ಶೇಖರಗೊಳ್ಳುತ್ತವೆ.

ಇತ್ತ ಭೂಮಿಯಲ್ಲಿ ಧನವಿದ್ಯುತ್ತು ಶೇಖರವಾಗುತ್ತಿರುತ್ತದೆ. ಮೋಡದ ಕೆಳಭಾಗದಲ್ಲಿ ಶೇಖರವಾದ ಋಣ ವಿದ್ಯುತ್ತು ಪ್ರಬಲವಾದಾಗ ಭೂಮಿಯಲ್ಲಿನ ಧನವಿದ್ಯುತ್ತು ಮೋಡದ ಕಡೆ ಆಕರ್ಷಣೆ ಹೊಂದುತ್ತದೆ. ಮೋಡ ಆಕಾಶದಲ್ಲಿ ತೇಲುತ್ತಹೋದಂತೆ ಭೂಮಿಯ ಧನ ವಿದ್ಯುತ್ತು ಅದರ ಬೆನ್ನು ಹತ್ತಿ ಹಾವಿನಂತೆ ಹರಿಯುತ್ತದೆ. ಕಾಗದದ ಹಾಳೆಯ ಆಚೆಗೆ ಅಯಸ್ಕಾಂತವನ್ನಾಡಿಸಿದರೆ ಈಚೆಗಿರುವ ಸೂಜಿ ಹರಿಯುವ ಹಾಗೆ. ಇದು ನಿಮ್ಮ ಕಾಲುಗಳ ಮೇಲೆ ಹರಿದು ಹೋದರೂ ನಿಮಗೆ ತಿಳಿಯಲಾರದಷ್ಟು ಮಂದವಾಗಿರುವುದರಿಂದ ಅದರ ವ್ಯಾಪಾರ ಅದೃಶ್ಯವಾಗಿರುತ್ತದೆ.

ಇದು ಸ್ವಲ್ಪ ಕಾಲ ಮಾತ್ರ. ಬೇಗನೆ ಈ ಆಕರ್ಷಣೆ ತೀರಬಲಗೊಂಡು ಮೋಡದ ಋಣ ವಿದ್ಯುತ್ತು ಭೂಮಿಯ ಧನ ವಿದ್ಯುತ್ತನ್ನು ತನ್ನೆಡೆಗೆ ಸೆಳೆದುಕೊಳ್ಳಲು ವಾತಾವರಣದಲ್ಲಿ ಮಾರ್ಗ ಹುಡುಕಿಕೊಳ್ಳುತ್ತದೆ. ಮಿಂಚಿನ ಉದಯ ಆಗಿನಿಂದಲೇ.

ಮೋಡದ ಋಣ ವಿದ್ಯುತ್ತು ಭೂಮಿಯ ಧನ ವಿದ್ಯುತ್ತನ್ನು ಮುಟ್ಟಲು ಮಾಡಿದ ದಾರಿಗುಂಟ ಭೂಮಿಯ ಧನವಿದ್ಯುತ್ತು ಸಳಕ್ಕನೆ ಮೇಲೆ ಹಾರುತ್ತದೆ. ಸಿಡಿಲು ಮೋಡದಿಂದ ಭೂಮಿಗೆ ಬಡಿಯಿತೆನ್ನುತ್ತೀರಲ್ಲ; ಇದು ಶುದ್ಧ ಕಣ್ಮಸಕು. ನಿಜವಾಗಿ ಭೂಮಿಯಿಂದ ಮೋಡಕ್ಕೇ ಮಿಂಚು ಹರಿಯುತ್ತದೆ. ಅದರ ವೇಗ ತಾಸಿಗೆ ೨ ಕೋಟಿ ೨೦ ಲಕ್ಷ ಮೈಲಿನಷ್ಟಿರುತ್ತದೆ. ಅಂದರೆ ಶಬ್ದವೇಗಕ್ಕಿಂತ ಮಿಂಚಿನ ವೇಗ ೧ ಲಕ್ಷ ಪಟ್ಟು ಹೆಚ್ಚು.

ಮಿಂಚಿನಲ್ಲಿ ಎರಡು ಬಗೆಯುಂಟು. ಒಂದು ಬಡಿದರೆ ಬೆಂಕಿ ಏಳುವುದಿಲ್ಲ. ಅದು ಗೋಡೆಯನ್ನು ಒಡೆಯಬಹುದು, ಗಿಡವನ್ನು ಸೀ[ಳ]ಬಹುದು; ಆದರೆ ಅದು ತೀರ ಕ್ಷಣಿಕ ಆಘಾತ. ಅದರ ಹೊಡೆತ ಒಂದು ಸೆಕೆಂದಿನ ೧೦,೦೦[೦]ದಲ್ಲೊಂದು ಅಂಶದಷ್ಟು ಹೊತ್ತಿನಲ್ಲಿ ಮುಗಿದು ಹೋಗುತ್ತದೆ. ಆದ್ದರಿಂದ ಬೆಂಕಿ ಹತ್ತುವುದಿಲ್ಲ.

ಇನ್ನೊಂದು ಬಗೆಯದು "ಬಿಸಿ" ಮಿಂಚು. ಅದು ೧/೧೦೦ ದಿಂದ ೧/೧೦ ಸೆಕೆಂದಿನ ವರೆ[ಗೆ] ನಿಲ್ಲುವ ವಿದ್ಯುತ್ ಆಘಾತವಾದ್ದರಿಂದ ತಾನು ಮುಟ್ಟಿದ್ದನ್ನು ಸುಟ್ಟುಹಾಕುತ್ತದೆ. ಅದರ ಕಾವು ಸೂರ್ಯನ ಹೊರಮೈಗಿಂತಲೂ ಹೆಚ್ಚು, ಸುಮಾರು ೨೭,೦೦೦° ಫೆರನ್ಹೈಟ್‌ವರೆಗೂ ಏರಬಹುದು. ಹಸಿ ಮರಗಳು ಕೂಡ ಸಿಡಿಲು ಬಡಿದು ಧಗಧಗನೆ ಉರಿಯಲು ಇದೇ ಕಾರಣ.

ಆದರೆ ಗುಡುಗು-ಸಿಡಿಲೆಂದರೇನು? ಮಿಂಚು ಅಪಾರ ಉಷ್ಣತೆಯನ್ನುಂಟುಮಾಡಿ ಗಾಳಿಯನ್ನು ಸೀಳಿಕೊಂಡು ಏರುತ್ತದೆಂದು ಹೇಳಿದೆವಲ್ಲ. ಒಂದು ಬೆರಳಿನಷ್ಟು ದಪ್ಪವಾದ ಈ ಮಿಂಚಿನ ಪಥ ಮುಂದೆ ಸಾಗುತ್ತ ಒಂದು ಕಾಲಿನಷ್ಟು ದಪ್ಪವಾಗಿ ಸ್ಫೋಟಗೊಳ್ಳುತ್ತದೆ. ಅದರ ಅಪಾರ ಉಷ್ಣತೆಯಿಂದ ಗಾಳಿ ಉಬ್ಬಿ ಅನಂತರ ತಣಿದು ಕುಗ್ಗುತ್ತದೆ. ಆಗ ಸುತ್ತಣಗಾಳಿ ಅಲ್ಲಿಗೆ ಧಾವಿಸುತ್ತದೆ. ಈ ಪ್ರಕಾರ ಗಾಳಿಯಲ್ಲಿರುವ ಕೋಟಿಗಟ್ಲೆ ಇಲೆಕ್ಟ್ರಾನುಗಳ ತಾಕಲಾಟದಿಂದ ಪ್ರಚಂಡ ಶಬ್ದವುಂಟಾಗುತ್ತದೆ. ಅದೇ ಗುಡುಗು-ಸಿಡಿಲು. ಪರಮಾಣು ಬಾಂಬು ಸ್ಫೋಟವಾದಾಗಲೂ ಇದೇ ಕಾರಣದಿಂದ ಶಬ್ದವಾಗುತ್ತದೆ.

ಮಿಂಚು ವಿದ್ಯುತ್ತೇ ಆಗಿದ್ದ ಮೇಲೆ ಅದನ್ನೇಕೆ ನಾವು ನಮ್ಮ ದೀಪಗಳನ್ನು ಉರಿಸಲು ಮತ್ತು ಯಂತ್ರಗಳನ್ನು ತಿರುಗಿಸಲು ಉಪಯೋಗಿಸಬಾರದು? ಅಮೇರಿಕದ ಜನರಲ್ ಇಲೆಕ್ಟ್ರಿಕದ ಮೆನೇಜರರಾದ ಜೂಲಿಯಸ್ ಹಗೆನ್‌ಗತ್ ಇವರು ಈ ವಿಷಯದಲ್ಲಿ ಸಾಕಷ್ಟು ಸಂಶೋಧನೆ ನಡೆಸಿ, ಮೋಡಗಳ ವಿದ್ಯುತ್ತಿನಿಂದ ಎಂದಾದರೂ ಒಂದೇ ಒಂದು ದೀಪ ಉರಿಸಲು ಬರಲಿಕ್ಕಿಲ್ಲವೆಂಬ ಅಭಿಪ್ರಾಯಕ್ಕೆ ಬಂದಿದ್ದಾರೆ.

ಹೀಗೇಕೆ? ಮಿಂಚಿನ ನಡೆವಳಿಕೆ ತೀರ ಅನಿಶ್ಚಿತವಾಗಿದೆ. ಅದು ಎಲ್ಲಿ ಬಡಿಯಬಹುದೆಂದು ಗಣಿತ ಬಲದಿಂದ ನಾವು ಸರಿಯಾಗಿ ಅಂದಾಜು ಮಾಡಬಹುದು. ಆದರೆ ನಮ್ಮ ಗಣಿತವನ್ನು ದುರ್ಲಕ್ಷಿಸಿ ಮಿಂಚು ವರ್ಷಗಟ್ಟಳೆ ನಾವು ಎಣಿಸಿದ ಸ್ಥಳಕ್ಕೆ ಭೆಟ್ಟಿಯನ್ನೇ ಕೊಡದಿರಬಹುದು. ಇಷ್ಟೆಲ್ಲ ಕಷ್ಟಪಟ್ಟು ವಿದ್ಯುತ್ತು ಸಿಕ್ಕಿದರೂ ಅದು ಲಾಭದಾಯಕವಾಗಲಾರದು.

ಮಿಂಚು ಮಾಡುವ ಪುಣ್ಯಕಾರ್ಯಗಳನ್ನು ನಾವು ಮರೆಯಬಾರದಾದರೂ ಅದರ ಭಯ ನಮ್ಮನ್ನೇನೂ ಬಿಡುವಂತಿಲ್ಲ. ಅದು ಅಪಾಯಕರ ಮಿತ್ರನೆಂಬಲ್ಲಿ ಸಂಶಯವಿಲ್ಲ. ಆದ್ದರಿಂದ ಸಿಡಿಲಿನ ಅಬ್ಬರ ಪ್ರಾರಂಭವಾಯಿತೆಂದರೆ ನೀವು ಕೂಡಲೆ ಈ ಕೆಳಗಿನ ಸಂರಕ್ಷಣೋಪಾಯಗಳನ್ನು ಕೈಕೊಳ್ಳುವದು ಒಳಿತು.

೧. ಸಿಡಿಲಿನ ಅಬ್ಬರ ಪ್ರಾರಂಭವಾದಾಗ ನೀವು ಹೊರಗಿದ್ದರೆ ಓಡಿಹೋಗಿ ಯಾವುದಾದರೂ ಕಟ್ಟಡದಲ್ಲಿ ಆಶ್ರಯ ಪಡೆಯಿರಿ. ಬಯಲಲ್ಲಿ ನಿಲ್ಲಬೇಡಿರಿ. ಬಯಲಲ್ಲಿ ನಿಂತರೆ ಸಿಡಿಲು ನಿಮಗೇ ಬಡಿಯುವ ಸಂಭವ ಹೆಚ್ಚು. ಭೂಮಿಯಿಂದ ಮೋಡಕ್ಕೆ ಜಿಗಿಯಲು ಹಂಬಲಿಸುತ್ತಿರುವ ವಿದ್ಯುತ್ತಿಗೆ ಗಾಳಿಯೊಂದು ಪಿಡ್ಡೂರವಾಗಿರುತ್ತದೆ. ನೀವು ಬಯಲಲ್ಲಿ ನಿಂತಿದ್ದರೆ ಅಷ್ಟು ಮಟ್ಟಿಗೆ ಗಾಳಿ ಖಾಲಿಯಾದಂತೆ ಮತ್ತು ವಿದ್ಯುತ್ತಿಗೆ ಹರಿಯಲು ಸ್ಥಳ ಸಿಕ್ಕಿದಂತೆ. ಆಗ ಮಿಂಚು ನಿಮ್ಮ ಕಾಲಿಂದ ತಲೆಗೇರಿ ಮೋಡಕ್ಕೆ ಹಾರಲು ಯತ್ನಿಸುವುದು. ಅಂದಗೆ ಅದರ ಹೊಡೆತಕ್ಕೆ ನೀವು ಗುರಿಯಾಗಬಹುದು.

೨. ಹತ್ತಿರ ಕಟ್ಟಡ ಯಾವುದೂ ಕಾಣಿಸದಿದ್ದರೆ ನೆಲದ ಮೇಲೆ, ಆದಷ್ಟು ತಗ್ಗಿನಲ್ಲಿ ಮಲಗಿಬಿಡಿರಿ. ಸಿಡಿಲಿನ ಗೊಂದಲ ನಿಂತಮೇಲೆ ಎದ್ದು ಹೋಗಿರಿ.

೩. ನೀವು ಆಶ್ರಯ ಪಡೆಯುವ ಕಟ್ಟಡದಲ್ಲಿ ಕಬ್ಬಿಣದ ಅಂಶ ಸ್ವಲ್ಪವಾದರೂ ಇರಲಿ. ಸಿಡಿಲು ಗುಡುಗುಡಿಸುತ್ತಿರುವಾಗ 'ಹೊರಗೆ ಕತ್ತಿಯನ್ನು ಒಗೆಯುತ್ತಿದ್ದ ನಮ್ಮ ಪೂರ್ವಿಕರು ತೀರ ಹೆಡ್ಡರಾಗಿರಲಿಲ್ಲ. ಬರಿ ಕಟ್ಟಿಗೆಯ ಮನೆಯಲ್ಲಿ ಸಾಕಷ್ಟು ಸುರಕ್ಷಿತತೆಯಿಲ್ಲ.

೪. ಮರಗಿಡಗಳ ಕೆಳಗೆ ನಿಲ್ಲಬೇಡಿರಿ; ಅದೂ ಒಂಟಿ ಮರಗಳ ಕೆಳಗೆ. ಸಿಡಿಲು ಬಡಿದು ಸಾಯುವವರಲ್ಲಿ ಮೂರಕ್ಕೊಬ್ಬರು ಮರದ ಕೆಳಗೆ ನಿಂತವರು. ಸಿಡಿಲಿಗೆ ಮರಗಳೆಂದರೆ ಪ್ರೀತಿ. ತೋಟಗಳು ಒಂಟಿ ಮರಗಳಿಗಿಂತ ವಾಸಿ. ಅದೇ ಪ್ರಕಾರ ಗುಡ್ಡದ ಶಿಖರ ಮೊದಲಾದ ಬಯಲು ಸ್ಥಳಗಳಿಂದಲೂ ದೂರವಾಗಿರಿ.

೫. ನೀವು ಆಶ್ರಯ ಪಡೆಯುವ ಕಟ್ಟಡ ಎಷ್ಟು ದೊಡ್ಡದಾಗಿದೆಯೋ ಅಷ್ಟು ಹೆಚ್ಚು ಸುರಕ್ಷಿತ.

೬. ಮನೆಯಲ್ಲಿದ್ದರೆ ಕಿಟಕಿ, ಬಾಗಿಲು, ಒಲೆಗಳಿಂದ ದೂರವಿರಿ.

೭. ಸಿಡಿಲು ಗರ್ಜಿಸುತ್ತಿರುವಾಗ ಸ್ನಾನಕ್ಕೆ ಇಳಿಯಬೇಡಿರಿ. ಹೊಳೆ ಕೆರೆಗಳಲ್ಲಿದ್ದರೆ ಬೇಗನೆ ಮೇಲೆ ಬಂದು ಒಣನೆಲ ಸೇರಿರಿ.

೮. ಮೋಟಾರು, ಬಸ್ಸು, ರೇಲು ಗಾಡಿಗಳಲ್ಲಿರುವಾಗ ಸಿಡಿಲು ಗರ್ಜಿಸತೊಡಗಿದರೆ ಗಾಬರಿಯಾಗಬೇಕಿಲ್ಲ. ಅಲ್ಲಿ ನೀವು ಸಾಕಷ್ಟು ಸುರಕ್ಷಿತರಾಗಿದ್ದೀರಿ. ಸಂಪೂರ್ಣ ಲೋಹಮಯವಾದ ವಿಮಾನಗಳಂತೂ ಅತಿ ಸುರಕ್ಷಿತವಾಗಿವೆ.

ಈ ನಿಯಮಗಳನ್ನು ಪಾಲಿಸಿದರೆ ಮಿಂಚು ನಿಮ್ಮನ್ನು ಮುತ್ತಿಡಲು ಯತ್ನಿಸಲಿಕ್ಕಿಲ್ಲ. ಆದರೆ ಗ್ಯಾರಂಟಿಯಿಲ್ಲ, ಅನ್ನಿರಿ.

(ವಿವಿಧ ಆಧಾರಗಳಿಂದ)

---

**ಕತ್ತಲೆಯು ನಿನ್ನನ್ನು ಆವರಿಸದಿರಲೆಂದು ಬೆಳಕಿರುವಾಗಲೇ ನೀನು ಮುಂದೆ ನಡೆ.**

**— ನ್ಯೂ ಟೆಸ್ಟಮೆಂಟ್**

**ಕೇಳಿದ್ದೀರಾ ? ೨೭ ಫೂಟುದ್ದದ ಖಡ್ಗಮೃಗ, ೧೫೦ ಟನ್ ಭಾರದ ತಿಮಿಂಗಿಲ, ೧೨ ಫೂಟೆತ್ತರದ ಹಕ್ಕಿ, ೬೦ ಫೂಟಿನ ಮೀನ, ೩೦ ಫೂಟುದ್ದದ ಓತಿ?—**

# ಭೂಮಿಯ ಮಹಾ ಪ್ರಾಣಿಗಳು

ವಿಲಿ ಲೀ



ಬ್ರೊಂಟೋಸಾರಸ್

ಇಂದು ಪ್ರಪಂಚದಲ್ಲಿ ಅತಿ ದೊಡ್ಡ ಭೂನಿವಾಸಿ ಪ್ರಾಣಿಯೆಂದರೆ ಆನೆ. ಭಾರತೀಯ ಆನೆ ಬಹುಶಃ ಜಗತ್ತಿನಲ್ಲೆಲ್ಲ ಅತ್ಯಂತ ತರಬೇತಿ ಹೊಂದಿದ ಸುಂದರ ಮಹಾಪ್ರಾಣಿಯೆಂಬುದು ನಿಜ. ೧೦–೧೦|| ಫೂಟೆತ್ತರದ ೫–೭ ಟನ್ ತೂಗುವ ನಮ ಗಜರಾಜ ಎಲ್ಲ ದೇಶಗಳಲ್ಲಿ ಜನಪ್ರಿಯ ನಾಗಿದ್ದಾನೆ. ಆದರೆ ಅವನು ಎತ್ತರ ಮತ್ತ ತೂಕದಲ್ಲಿ ಪ್ರಥಮ ಸ್ಥಾನ ಪಡೆದವನಲ್ಲ.

ಎತ್ತರ ಮತ್ತು ತೂಕದಲ್ಲಿ ಇಂದಿನ ಅ

" ಗ್ಯಲಾಕ್ಸಿ ಸಾಯನ್ಸ್ ಫಿಕ್ಶನ್ "ನಿಂದ

ದೊಡ್ಡ ಭೂಪ್ರಾಣಿಯೆಂದರೆ ಆಫ್ರಿಕದ ಆನೆ. ಭಾರತೀಯ ಆನೆಗಿಂತ ಸರಾಸರಿ ಒಂದು ಫೂಟು ಎತ್ತರ ಮತ್ತು ಒಂದು ಟನ್ ಹೆಚ್ಚು ಭಾರವಾಗಿದೆ, ಆಫ್ರಿಕದ ಮಲೆಗಳ ಈ ಅರಸ. ಸುಮಾರು ೧೧ ಫೂಟೆತ್ತರ, ೬-೮ ಟನ್ ಭಾರ ಅದರದು. ಕೆಲ ಬೇಟೆಗಾರರು ೧೧॥ ಫೂಟೆತ್ತರದ ಗಂಡಾನೆಗಳನ್ನು ಕಂಡದ್ದಾಗಿಯೂ ಹೇಳುತ್ತಾರೆ.

ಸ್ವಲ್ಪ ಪುರಾತನ ಕಾಲದಲ್ಲಿ ಹಣಕಿದರೆ ಮಾತ್ರ ಆಫ್ರಿಕದ ಆನೆ ಕೂಡ ಎರಡನೇ ನಂಬರದ್ದಾಗಿಯೇ ಕಾಣಿಸುತ್ತದೆ. ಯುರೋಪಿನಲ್ಲಿ ಇಂದು ಆನೆಗಳಿಲ್ಲ. ಆದರೆ ಆಸ್ಟ್ರಿಯದಲ್ಲಿ ಪುರಾತನ ಕಾಲದಲ್ಲಿದ್ದ ಈ ಜಾತಿಯ ಮಹಾಪ್ರಾಣಿಯು ಆಫ್ರಿಕದ ಆನೆಗಿಂತ ೩೦ ಇಂಚು ಎತ್ತರ ಇತ್ತು. ಇಂಥ ಒಂದು ಪ್ರಾಣಿಯ ಅವಶೇಷಗಳು

ಆಫ್ರಿಕದ ಆನೆ

ಸಿಕ್ಕಿದ್ದು, ಅದು ಸ್ಟುಡ್ಗಾರ್ಟಿನ ಪ್ರದರ್ಶನಾಲಯದಲ್ಲಿದೆ. ಇದು ಕೂಡ ಪುರಾತನ ಭೂಚರ ಪ್ರಾಣಿಗಳ ಅರಸನೆನಿಸುತ್ತಿರಲಿಲ್ಲ— ನೈಋತ್ಯ ಜರ್ಮನಿಯ ವೀಸ್‌ಬೇಡನ್ ಬಳಿ ದೊರೆತ ಒಂದು ಆನೆಯ ಅವಶೇಷಗಳಿಂದ ಅದು ಆಸ್ಟ್ರಿಯದ ಮಹಾಪ್ರಾಣಿಗಿಂತಲೂ ೧೦ ಇಂಚು ಉನ್ನತವಾಗಿರಬೇಕೆಂದು ಅಂದಾಜುಮಾಡಲಾಗಿದೆ. ಆದರೆ ಇಂದು ಈ ಜಾತಿಯ ಆನೆಗಳು ನಿರ್ವಂಶವಾಗಿ ಬಿಟ್ಟಿವೆ.

ಗತಕಾಲದ ಪ್ರಪಂಚದಲ್ಲಿ ಈ ಅದ್ಭುತ ಆನೆಗೆ ಕೂಡ ಸಸ್ತನಿ ಪ್ರಾಣಿಗಳಲ್ಲಿ ಪ್ರಥಮ ಸ್ಥಾನ ಸಿಗುವಂತಿಲ್ಲ. ಈಗ ತಿಳಿದ ಮಟ್ಟಿಗೆ ಆ ಸ್ಥಾನವು ಈಗ ಲುಪ್ತವಾದ ಕೋಡಿಲ್ಲದ ಒಂದು ಬಗೆಯ ಖಡ್ಗಮೃಗಕ್ಕೆ ಸಿಗಬೇಕು. ದಕ್ಷಿಣ ಏಶಿಯದಲ್ಲಿದ್ದ ಈ ಪ್ರಾಣಿಜಾತಿ (ಅದಕ್ಕೆ ಬಲುಚಿತೇರಿಯಂ ಎಂದು ಹೆಸರು) ಸುಮಾರು ೧೮ ಫೂಟೆತ್ತರ, ೨೭ ಫೂಟು ಉದ್ದ ಇದ್ದಿರಬೇಕು. ಇಂದಿನ ಭಾರತೀಯ ಖಡ್ಗಮೃಗವು ಅದರ ಹೊಟ್ಟೆಯ ಕೆಳಗೆ ಸರಾಗವಾಗಿ ನುಸುಳಿ ಹೋಗಬಹುದಾಗಿತ್ತು.

ಇದು ಭೂನಿವಾಸಿ ಸಸ್ತನಿ ರಕ್ಕಸರ ಮಾತಾಯಿತು. ನೀರಿನಲ್ಲಿ ವಾಸಿಸುವ ಕೆಲಸಸ್ತನಿ ಪ್ರಾಣಿಗಳ ಮುಂದೆ ಇವು ಕೂಡ ಕುಬ್ಜವಾಗಿ ಕಾಣಿಸಬಹುದು. ಇವುಗಳ ಮುಂದೆ ಗತಕಾಲದ ದೈತ್ಯರಾದ ಪೆಡಂಭೂತ(dinosaur)ಗಳೆಂಬ ಸಪಾದ ಉರಗಗಳು ಕೂಡ ತಲೆ ತಗ್ಗಿಸಲೇಬೇಕು.

ತಿಮಿಂಗಲ (whale) ವನ್ನೇ ತೆಗೆದುಕೊಳ್ಳಿರಿ. ನೀಲ ರೋರ್‍ಕ್ವಾಲವೆಂಬ ಜಾತಿಯ ತಿಮಿಂಗಿಲವು ಏನಿಲ್ಲೆಂದರೂ ೮೦-೮೫ ಫೂಟುದ್ದ ಮತ್ತು ೧೫೦ ಟನ್ ಭಾರವಾಗಿರಬೇಕೆಂದು ತಜ್ಞರು ಲೆಕ್ಕ ಹಾಕಿದ್ದಾರೆ. ಇಂದು ನಿರ್ವಂಶವಾಗಿರುವ ಪೆಡಂಭೂತ ಜಾತಿಯಲ್ಲಿ ರಕ್ಕಸನೆಂದೆಣಿಸಲಾದ, ಅಮೇರಿಕದಲ್ಲಿ ಅವಶೇಷಗಳನ್ನು ಬಿಟ್ಟುಹೋದ ಬ್ರೊಂಟೊಸಾರಸ್ (Brontosaurus) ಉರಗ (ಉದ್ದ ೬೦ ಫೂಟು, ಎತ್ತರ ೧೦ ಫೂಟು) ಕೂಡ ಬರಿ ೩೮ ಟನ್ ಮಾತ್ರ ತೂಗುತ್ತಿತ್ತೆಂದು ಅಂದಾಜು ಮಾಡಲಾಗಿದೆ.

ಸಮುದ್ರವಾಸಿ ಸಸ್ತನಿಗಳಿಗೂ ಭೂನಿವಾಸಿಗಳಿಗೂ ಒಂದು ವೈಪರೀತ್ಯವಿದೆ. ಭೂವಾಸಿ ಮಹಾ ಪ್ರಾಣಿಗಳು ಬಹುಶಃ ನಿರ್ವಂಶವಾಗಿವೆ; ಜೀವಂತವಿರುವ ಜಾತಿಗಳು ನಷ್ಟವಾದವುಗಳಿಗಿಂತ ಚಿಕ್ಕವು. ಆದರೆ ತಿಮಿಂಗಿಲಗಳು ಹಾಗಲ್ಲ. ಗತಕಾಲದ ತಿಮಿಂಗಿಲಗಳಿಗಿಂತ ಈಗಿನವುಗಳು ಬಹಳ ದೊಡ್ಡವಾಗಿವೆ.

## ಪಕ್ಷಿಲೋಕದಲ್ಲಿ

ಹಕ್ಕಿಗಳಲ್ಲಿನ "ದೈತ್ಯ" ರನ್ನು ತೋರಿಸುವಾಗ ಗಾತ್ರವನ್ನನುಸರಿಸಬೇಕೋ ತೂಕವನ್ನೋ ಎಂಬ ಸಮಸ್ಯೆ ಬರುತ್ತದೆ. ಗಾತ್ರ ನೋಡಿದರೆ ಇಂದು ದಕ್ಷಿಣ ಅಮೇರಿಕದಲ್ಲಿರುವ ಸಂಚಾರಿ ಅಲ್ಬತ್ರಾಸ ಪಕ್ಷಿಗೆ ಪ್ರಥಮ ಸ್ಥಾನ ಸಿಗಬೇಕು.



ನ್ಯೂಜೀಲಂಡಿನ ಮೋವಾ

ಅದರ ತೂಕ ೧೫ ಪೌಂಡು ಮಾತ್ರವಾದರೂ ರೆಕ್ಕೆಗಳನ್ನು ಬಿಚ್ಚಿದರೆ ಅದರ ವ್ಯಾಪ್ತಿ ೧೨ ಫೂಟಿನಷ್ಟಾಗುತ್ತದೆ.

ಅದರ ನಂತರ ದಕ್ಷಿಣ-ಉತ್ತರ ಅಮೇರಿಕಗಳಲ್ಲಿ ಕಾಣಿಸುವ ರಣಹದ್ದು ( ಕಂಡೋರ ) ಪಕ್ಷಿ ಬರುತ್ತದೆ. ಅದರ ರೆಕ್ಕೆಗಳ ವ್ಯಾಪ್ತಿ ೧೧ ಫೂಟುಗಳ ವರೆಗೂ ಇರುತ್ತದೆ. ಆದರೆ ತೂಕ ೩೧ ಪೌಂಡು. ಆದರೆ ಹಿಂದಿನ ಕಾಲದಲ್ಲಿ ಕೆಲಿಫೋರ್ನಿಯದಲ್ಲಿದ್ದ ರಣಹದ್ದು ಪಕ್ಷಿಗಳು ಅಲ್ಬಟ್ರಾಸಕ್ಕಿಂತಲೂ ದೊಡ್ಡವಾಗಿದ್ದವು. ಅವು ಇಂದಿನ ರಣಹದ್ದುಗಳಿಗಿಂತಲೂ ಭಾರವಾಗಿದ್ದಿರಬೇಕು.

ಇದು ಹಾರುವ ಹಕ್ಕಿಗಳ ಮಾತಾಯಿತು. ಹಾರದ ಹಕ್ಕಿಗಳಲ್ಲಿ ಅವುಗಳಿಗಿಂತ ದೊಡ್ಡವಿವೆ. ಇಂದಿನ ಅಫ್ರಿಕನ್ ಉಷ್ಟ್ರಪಕ್ಷಿ ( ಘೇಂಡಾಮೃಗ) ಗಳಲ್ಲಿ ದೊಡ್ಡವುಗಳು ೮ ಫೂಟೆತ್ತರ ಮತ್ತು ೧೬೦ ಪೌಂಡು ಭಾರ ಇರುತ್ತವೆ.

ಕೆಲ ಶತಮಾನಗಳ ಹಿಂದೆ ಉಷ್ಟ್ರಪಕ್ಷಿಯನ್ನು ಮೀರುವ ಭೂಚರ ಹಕ್ಕಿಗಳಿದ್ದವು. ನ್ಯೂಜೀಲಂಡಿನಲ್ಲಿದ್ದ ಮೋವಾ ಪಕ್ಷಿಗಳು ೧೨ ಫೂಟಿನ ವರೆಗೂ ಎತ್ತರವಾಗಿದ್ದು ೩೦೦ ಪೌಂಡುಗಳಿಗಿಂತಲೂ ಭಾರವಾಗಿರಬೇಕೆಂದು ಅವಶೇಷಗಳಿಂದ ತರ್ಕಿಸಲಾಗಿದೆ. ಕ್ರಿ. ಶ. ೧೬೦೦ - ನಂತರ ಮೋವಾದ ವಂಶ ನಾಶವಾಯಿತು.

ಮಡಗಾಸ್ಕರ ಪಕ್ಷಿ ೧೦ ಫೂಟೆತ್ತರವಾಗಿದ್ದರೂ ಮೋವಾಕ್ಕಿಂತ ಹಗುರಾಗಿತ್ತು. ಅದರ ತತ್ತಿಗಳು ಮಾತ್ರ ವಿಜ್ಞಾನಿಗಳ ಗಮನಕ್ಕೆ ಬಂದ ತತ್ತಿಗ... ಲ್ಲೆಲ್ಲ ದೊಡ್ಡದು. ೧೪ ಇಂಚುದ್ದದ ಈ ತತ್ತಿಗ... ಘನ ಪರಿಮಾಣ ೭ ಉಷ್ಟ್ರಪಕ್ಷಿಗಳ ತತ್ತಿಗಳಷ... ಮತ್ತು ೧೮೫ ಕೋಳಿ ತತ್ತಿಗಳಷ್ಟಿತ್ತು.

ಇಂದು ನಿರ್ವಂಶವಾಗಿರುವ ಪುರಾತನ ಹ... ಗಳಲ್ಲಿ ಅತಿ ದಷ್ಟಪುಷ್ಟವಾದುದೆಂದರೆ ವ್ಯೋಮಿ... ಗದ ( ಅಮೇರಿಕ ) " ದಯಾತ್ರಿಮಾ ಗೈಜಾ... ಟಿಯಾ '' ಎಂಬುದು. ಇದು ಕೊಕ್ಕರೆ ಜಾತಿ... ದೆಂದು ನಂಬಲಾಗಿದೆ. ಅದರ ತಲೆ ೨೦ ಇಂ... ಉದ್ದವಾಗಿತ್ತು. ಎತ್ತರ ೭ ಫೂಟಾದರೂ ತೂ... ೩೦೦ ಪೌಂಡಿಗಿಂತ ಹೆಚ್ಚಾಗಿತ್ತು.

## ಮೀನಗಳು

ಮೀನಲೋಕದಲ್ಲಿ ಗತ ವೈಭವವು ಇಂದಿಗ... ಸಾಕಷ್ಟು ಉಳಿದಿದೆ. ಶಾರ್ಕ್ ಮೀನು ಅ... ಗಳಲ್ಲಿ ಮಹಾಪ್ರಾಣಿ. ಇದು ಪುರಾತನ ಜಾ... ಈ ಭೀಕರ ಪ್ರಾಣಿಜಾತಿಯಲ್ಲಿ ಸಮುದ್ರ ತೀರದ... ನೆಲಕ್ಕೇರಿ ಬಂದು ಸಿಕ್ಕಿದವರನ್ನು ನುಂಗು... ''ಬಿಸಿಲು ಕಾಯಿಸುವ'' ಶಾರ್ಕ್‌ಗಳ... ೩೦—೩೫ ಫೂಟುದ್ದದ ವರೆಗೂ ಇರು... ದುಂಟು. ತಿಮಿಂಗಿಲ ಶಾರ್ಕ್ ಎಂಬ ಇನ್ನೊಂ... ಜಾತಿಯಲ್ಲಿ ೪೫ ಫೂಟುದ್ದದವು ಕಾಣಿ... ಕೊಂಡಿವೆ. ಅವು ೬೦ ಫೂಟುದ್ದದ ವರೆಗೂ ಇ... ಬಹುದೆಂದು ನಂಬಲಾಗಿದೆ.

*

ಬೆನ್ನೆಲುಬಿಲ್ಲದ ಪ್ರಾಣಿಗಳು ಸ್ವಾಭಾವಿಕವಾ... ಚಿಕ್ಕವು. ಆದರೆ ಅವುಗಳಲ್ಲಿಯೂ ಅಪರೂ... ವಾಗಿ " ಮಹಾಪ್ರಾಣಿ " ಗಳು ಇರುವುದುಂಟು... ಆಫ್ರಿಕನ್ ಬಸವನ ಹುಳುಗಳು ೯ ಇಂಚು... ವಾಗಿರುತ್ತವೆ. ಅವನ್ನು " ದೈತ್ಯ ಬಸವನ ಹುಳ... ಗಳೆನ್ನುತ್ತಾರೆ.

ಆದರೆ ಈಗ ಗೊತ್ತಿದ್ದ ಮಟ್ಟಿಗೆ ಇಂದಿನ ಮತ್ತ... ಹಿಂದಿನ ಬೆನ್ನೆಲುಬಿಲ್ಲದ ಪ್ರಾಣಿಗಳಲ್ಲೆಲ್ಲ, ಫಿಲಿ... ಪೈನ್ಸ್ ಬಳಿಯಲ್ಲಿ ಮತ್ತು ಆಸ್ಟ್ರೇಲಿಯದಲ್ಲಿರು... ಚಿಪ್ಪು ಮೀನು ( clam ) ಅತಿ ದೊಡ್ಡದ...

ಆಮೆ ಚೆನ್ನಾಗಿ ಬೆಳೆದರೆ ೫ ಫೂಟು ದೊಡ್ಡದು ಮತ್ತು ೫೦೦ ಪೌಂಡ್ ತೂಕದ್ದಾಗಿರಬಲ್ಲದು.

## ಉರಗಗಳು

ಉರಗ ಕುಲದ ಪ್ರಾಣಿಗಳಲ್ಲಿ ಗತ ವೈಭವದ ಮುಂದೆ ಇಂದಿನ ಸ್ಥಿತಿ ತುಚ್ಛವಾಗಿ ಕಾಣಿಸುತ್ತದೆ. ಆದರೆ ಪರಿಸ್ಥಿತಿ ಇನ್ನೂ ನೀವೆಣಿಸುವಷ್ಟು ಅವನತಿಗೆ ಬಂದಿಲ್ಲ.

ಭಾರತದ ಮೊಸಳೆಗಳನ್ನು ನೋಡಿರಿ. ಪೆಡಂಭೂತಗಳು ನಮ್ಮ ಗ್ರಹದ ಸ್ವಾಮಿಗಳಾಗಿದ್ದ ಕಾಲದಲ್ಲಿ ಕೂಡ ಇವು ಅಲ್ಪ ಪ್ರಾಣಿಗಳೆನಿಸುತ್ತಿದ್ದಿಲ್ಲ. ಉಪ್ಪು ನೀರಿಗೆ ಮೆಚ್ಚಿ ಸಮುದ್ರದಲ್ಲಿ ಬಹುಕಾಲ ಈಸುವ ಈ ಮೊಸಳೆಗಳಲ್ಲೊಂದರ ತಲೆಬುರುಡೆ ಬ್ರಿಟಿಶ ಮ್ಯೂಜಿಯಮಿನಲ್ಲಿದೆ. ಆ ಮೊಸಳೆಯ ಉದ್ದ ೩೩ ಫೂಟು, ಸುತ್ತಳತೆ ೧೩ ಫೂಟು ೮ ಇಂಚು!

ಭಾರತದ ಮೊಸಳೆ

ನಿಮ್ಮ ಬಾವಿಯ ಆಮೆಗಳನ್ನು ನೋಡಿ ಇವು ಕ್ಷುದ್ರ ಪ್ರಾಣಿಗಳೆಂದುಕೊಳ್ಳಬೇಡಿರಿ. ಸಮುದ್ರ ನಿವಾಸಿ "ಚರ್ಮ ಪೃಷ್ಠ" (leather back) ಕೂರ್ಮಜಾತಿಯೊಂದು ೯ ಫೂಟುದ್ದಕ್ಕೆ ಬೆಳೆಯಬಲ್ಲದು. ಅದರ ತೂಕ ೧,೪೫೦ ಪೌಂಡು (ಅರ್ಧ ಟನ್ನಿಗಿಂತ ಜಾಸ್ತಿ) ಗಳಷ್ಟಾಗುವುದು.

ಸರ್ಪಗಳಲ್ಲಿ ದಕ್ಷಿಣ ಅಮೇರಿಕದ "ಅನಕೊಂಡ" ಅಗಾಧ ಗಾತ್ರದ್ದು. ಅದರ ಉದ್ದ ೨೦-೨೫ ಫೂಟುಗಳವರೆಗೂ ಹೋಗಬಹುದು. ಒಂದು ಅನಕೊಂಡವಂತೂ ಸತ್ತಮೇಲೆ ಅಳೆದಾಗ ೩೦ ಫೂಟೆನಿಸಿತ್ತಂತೆ.

ಓತಿಜಾತಿಯ ಉರಗಗಳಲ್ಲಿ ಪೂರ್ವ ಇಂಡೀಜ ದ್ವೀಪಗಳಲ್ಲಿರುವ "ಮೊನಿಟರ" ಎಂಬ ಹಲ್ಲಿಗಳು ೧೦ ಫೂಟುದ್ದವಾಗಿದ್ದರೆ ಸುಂದ ಸಮುದ್ರದ ಕೋಮೋಡೊ ಎಂಬ ದ್ವೀಪದಲ್ಲಿ ೧೨, ೧೩ ಯಾಕೆ ೧೪ ಫೂಟುದ್ದದ ಹಲ್ಲಿಗಳಿವೆ. ಇವುಗಳ ಬಾಲ ಅತಿ ಉದ್ದವಾಗಿರುವುದರಿಂದ ಸ್ವಲ್ಪ ತಪ್ಪುಕಲ್ಪನೆಯಾಗಬಹುದು. ಆದರೂ ಒಂದು ದೊಡ್ಡ ಕೊಮೋಡೋ ಮಾನಿಟರವನ್ನು ತೂಗಿದಾಗ ಅದು ೧೦೦ ಪೌಂಡ್ ಇತ್ತು.

ಈ ರಕ್ಕಸ ಓತಿಗಳು ಕೂಡ ಗತಕಾಲದ ಓತಿಗಳೆದುರು ಕುಳ್ಳ ಎನಿಸಬಹುದು. ೨೦,೦೦೦ ವರ್ಷಗಳ ಹಿಂದೆ ಅಸ್ಟ್ರೇಲಿಯದಲ್ಲಿದ್ದ ಮಾನಿಟರ ಓತಿಗಳು ೨೦ ರಿಂದ ೩೦ ಫೂಟುದ್ದದ ವರೆಗೂ ಬೆಳೆಯುತ್ತಿದ್ದವು.

ಆದರೆ ನಿಜವಾದ ದೈತ್ಯ ಉರಗಗಳು ಇಂದು ನಿರ್ವಂಶವಾಗಿವೆ. ಪೆಡಂಭೂತವರ್ಗದ ಬ್ರೊಂಟೊಸಾರಸ್ ಜಾತಿಯ ಸರಟಪಾದ ದಿನೋಸಾರಗಳು ಇವುಗಳಲ್ಲಿ ಅತಿ ದೊಡ್ಡವೆನ್ನಬಹುದು. ದಿಪ್ಲೊಡೋಕಸ್ ಎಂಬ ಪೆಡಂಭೂತದ ಬಾಲ ಅತಿ ದೀರ್ಘವಿದ್ದುದರಿಂದ ಅದು ಅತಿ ಉದ್ದವಾದ ಪೆಡಂಭೂತವೆನಿಸಿತ್ತು. ಈ ಮಹಾಪ್ರಾಣಿಯ ಮೂಗಿನಿಂದ ಬಾಲದ ತುದಿ ವರೆಗೆ ಅಳೆದರೆ ೭೦-೭೫ ಫೂಟ್ ಆಗುತ್ತಿತ್ತು.

ಇದಕ್ಕಿಂತ ಉದ್ದವಲ್ಲದಿದ್ದರೂ ಗಡುತರವಾದ ಆಫ್ರಿಕದ ಬ್ರಾಚಿಯೋಸಾರಸ್ ಪ್ರಾಣಿಯು ಪೆಡಂಭೂತಗಳಲ್ಲೆಲ್ಲ ಭಾರವಾದ ಪ್ರಾಣಿ. ಅದರ ಭುಜದ ಮೂಳೆಯೇ ೮೪ ಇಂಚು ಉದ್ದವಾಗಿತ್ತು. (ಮೇಲೆ ಹೇಳಿದ ದಿಪ್ಲೊಡೋಕಸ್‌ನ ಮೂಳೆ ೪೭॥ ಇಂಚು ಮಾತ್ರ). ಈ ಮಹಾ ಪ್ರಾಣಿ ೪೦ ಫೂಟು ಆಳವಾದ ಸರೋವರದ ತಳದಲ್ಲಿ ನಡೆಯುತ್ತಿದ್ದರೆ ಅದರ ಮೂಗು ಇನ್ನೂ ನೀರಿನ ಹೊರಗೇ ಉಳಿಯುತ್ತಿತ್ತು.

ಪೆಡಂಭೂತಗಳಲ್ಲಿ ಮಾಂಸಾಹಾರಿ ಜಾತಿಯ ಟಿರಾನೋಸಾರಸ್ ಎಂಬುದು ಜಗತ್ತಿನ ಸೃಷ್ಟಿಯಿಂದ ಈ ವರೆಗಾದ ಮಾಂಸಾಹಾರಿ ಜೀವಿಗಳಲ್ಲೆಲ್ಲ ದೊಡ್ಡದು.

ನಾವು ಅದ್ಭುತವಾದ ಚರ್ಮಪೃಷ್ಠ ಕೂರ್ಮದ ವಿಷಯ ಹೇಳಿದೆವಲ್ಲ; ೬ ಕೋಟಿ ವರ್ಷಗಳ ಹಿಂದೆ ಅಮೇರಿಕದ ಕನ್ಸಾಸಿನಲ್ಲಿದ್ದ ಅಖೀಲಾನ



ಮಾಂಸಾಹಾರಿ ಪೆಡಂಭೂತ ಟಿರಾನೊಸಾರಸ್

ಎಂಬ ಆಮೆಯ ಜಾತಿ ಇದಕ್ಕಿಂತಲೂ ಪ್ರಚಂಡ ವಾದದ್ದು. ಅದರ ಉದ್ದ ೧೩॥ ಪೂಟು, ಭಾರ ೩,೫೦೦ ಪೌಂಡಿದ್ದಿರಬೇಕು.

ಅರ್ಖೀಲಾನ್ ಆಮೆಯೊಡನೆ ಈಸುವ "ಹಲ್ಲಿ" ಮೊಸಾಸಾರಸ್ ಇತ್ತು. ಅದಕ್ಕೆ ನಾಲ್ಕು ಹುಟ್ಟು ಗಳಂಥ ಕಾಲುಗಳು, ಚಪ್ಪಟೆ ಬಾಲ, ಉದ್ದ ಹಲ್ಲುಗಳು. ಈ ಪ್ರಾಣಿಯ ಉದ್ದ ೨೦ ಪೂಟು.

ಈ ಎರಡು ಪ್ರಾಣಿಗಳು ಮೀನಿನ ಬೇಟೆಗೆ ಸ್ಪರ್ಧಿಸುತ್ತಿದ್ದಾಗ ಅದೇ ಉರಗ ಜಾತಿಯ, ಆದರೆ ಹಾರಬಲ್ಲ, ಪ್ತರನಡಾನ್ ಎಂಬ ಜೀವಿ ಆಕಾಶದಲ್ಲಿ ಸುತ್ತುತ್ತ ಮೀನುಗಳಿಗಾಗಿ ಬೇಟೆಯಾಡುತ್ತಿತ್ತು. ಇದರ ರೆಕ್ಕೆಗಳು ಚರ್ಮ ಮಯ; ಅವುಗಳ ಅಳತೆ ೨೫ ಪೂಟು ವರೆಗೂ ಇತ್ತು; ತಲೆ ಮಾತ್ರ ತೀರ ತೆಳ್ಳಗೆ. ಕೊಕ್ಕು ಉದ್ದ. ಇದು ಭೂಮಿಯ ಇತಿಹಾಸದಲ್ಲೇ ಅತಿ ದೊಡ್ಡ ಆಕಾಶಗಾಮಿ ಪ್ರಾಣಿ. ಆದರೆ ಅದೂ ಈಗ ನಿರ್ವಂಶವಾಗಿದೆ.

ಉಭಯಚರ (ಸ್ಥಲ-ಜಲ) ಪ್ರಾಣಿಗಳು ಇಂದು ಒಟ್ಟಿನ ಮೇಲೆ ಚಿಕ್ಕವು. ಆದರೆ ಸಾಮಾನ್ಯವಾಗಿ ೧೦ ಇಂಚಿಗಿಂತ ಉದ್ದ ವಿಲ್ಲದ, ನೀರು ನೆಲಗಳೆರಡರಲ್ಲೂ ಬದುಕುವ ಸಲಮಾಂಡರ ಜಾತಿಯ (ಒಂದು ಓತಿ ಕ್ಯಾತದಂಥ) ಪ್ರಾಣಿ ೫ ಪೂಟುದ್ದವಿದೆ. ಆದರೆ ಪೆಡಂಭೂತಗಳಿಗಿಂತಲೂ ಹಿಂದಕ್ಕಿದ್ದ ಲಬಿರಿಂಥೊಡಾನ್ಸ್ ಎಂಬ ಉಭಯಚರ ಉರಗವೊಂದು ೧೨ ಪೂಟುದ್ದವಿತ್ತು.

ಕವಚಧಾರಿ ಅಸ್ಥಿರಹಿತ ಪ್ರಾಣಿಗಳಲ್ಲಿ ಸಮುದ್ರನಿವಾಸಿ "ಕ್ರಾಕೆನ್" ಎಂಬ ಪ್ರಾಣಿ ಪ್ರಥಮ ಸ್ಥಾನ ಪಡೆಯುತ್ತದೆ. ೧೮೬೧ ರಲ್ಲಿ ಫ್ರೆಂಚ್ ನಾವಿಕರು ೫೦ ಪೂಟಿಗಿಂತಲೂ ಉದ್ದವಾದ ಇಂಥ ಪ್ರಾಣಿಯನ್ನು ಸಮುದ್ರದಲ್ಲಿ ನೋಡಿದ್ದರು. ಆಸ್ಟ್ರೇಲಿಯದಲ್ಲಿರುವ ಒಂದು ಜಾತಿಯ ಎರೆ (ಮಳೆ) ಹುಳ ೧೨ ಪೂಟು ಉದ್ದವಾಗಿದೆ!

## ಕೀಟ ಪ್ರಪಂಚ

ಕೀಟಗಳಲ್ಲಿ ಇಂದು ಉಳಿದುಕೊಂಡ ಜಾತಿಗಳಲ್ಲಿ ಪತಂಗಗಳೇ ದೊಡ್ಡವು. ದಕ್ಷಿಣ ಅಮೇರಿಕದ "ಗೂಗೆ ಪತಂಗ"ವು ರೆಕ್ಕೆ ಬಿಡಿಸಿದರೆ ೧೧ ಇಂಚುದ್ದವಾಗುತ್ತದೆ. ಇದರ ನಂತರ ದಕ್ಷಿಣ ಏಶಿಯದ ಅಟ್ಲಾಸ ಪತಂಗ (೧೦ ಇಂಚು)

ಪ್ತರನಡಾನ್

ಬರುತ್ತದೆ. ಅದರ ರೆಕ್ಕೆಗಳ ಅಗಲ ಮಾತ್ರ ಗೂಗೆ ಪತಂಗಕ್ಕಿಂತಲೂ ಹೆಚ್ಚು.

ಗತಕಾಲದ ಕೀಟಗಳಲ್ಲಿ ಕೊಡತಿಹುಳ ( dragon-fly ) ಗಳಿಗೆ ಪ್ರಥಮಸ್ಥಾನವಿದೆ. ಇಂದು ಈ ಹುಳಗಳ ಗಾತ್ರ ೬-೭ ಇಂಚಿಗಿಂತ ಹೆಚ್ಚಾಗಿಲ್ಲ. ಈಗ ನಿರ್ವಂಶವಾಗಿರುವ ಟೈಟಾನೋಫಾಸ್ಮಾ ಎಂಬ ಕೊಡತಿಹುಳ ಹಿಂದೆ ಯುರೋಪಿನಲ್ಲಿತ್ತು. ಅದು ರೆಕ್ಕೆ ಬಿಡಿಸಿದರೆ ೧೮ ಇಂಚಿನಷ್ಟಾಗುತ್ತಿತ್ತು. ಆದರೆ ಇದಕ್ಕಿಂತಲೂ ದೊಡ್ಡ ಹುಳವೊಂದು ಅಮೇರಿಕದ ಕಾನ್ಸಾಸಿನಲ್ಲಿ ಪುರಾತನ ಕಾಲದಲ್ಲಿ ಇತ್ತು. ಅದಕ್ಕೆ ಪ್ರೊಟೊಡೊನಾಟಾ ಎಂದು ಹೆಸರು. ರೆಕ್ಕೆ ಬಿಡಿಸಿದರೆ ಅದರ ಗಾತ್ರ ೩೦ ಇಂಚು ಆಗುತ್ತಿತ್ತು !

ಆದರೆ ಜೇಡನಂಥ ಸಂದುಗಾಲಿನ ಪ್ರಾಣಿಗಳಲ್ಲಿ ಜಪಾನದ " ಜೇಡ ಏಡಿ " ಯೇ ಎಲ್ಲಕ್ಕಿಂತ ದೊಡ್ಡದು. ಅದು ಸಮುದ್ರ ತಳದಲ್ಲಿ ವಾಸಿಸುತ್ತದೆ. ಅದರ ದೇಹವೇ ೧೮ ಇಂಚು ಇದೆ. ಕಾಲುಗಳು ೬ ಫೂಟುದ್ದವಾಗಿರುತ್ತವೆ !

*

ಜಗತ್ತಿನ " ಮಹಾ " ಪ್ರಾಣಿಗಳನ್ನು ಗಣಿಸುವಾಗ ಮನುಷ್ಯನನ್ನು ಮರೆತೀರಿ ಮತ್ತೆ. ಮನುಷ್ಯ ಪೆಡಂಭೂತವಾಗಿರಲಿಕ್ಕಿಲ್ಲ. ಆದರೆ ಈ ಭೂಮಿಯ



ಜಪಾನ ಸಮುದ್ರದ "ಜೇಡ–ಏಡಿ"
( ಆಕೃತಿಯನ್ನು ಮನುಷ್ಯನ ಗಾತ್ರದೊಡನೆ ಹೋಲಿಸಿರಿ )

ಲಕ್ಷಾಂತರ ಜೀವಜಾತಿಗಳಿಗಿಂತ ಅವನು ದೊಡ್ಡವನು. ೫॥ ಫೂಟು ಸರಾಸರಿ ಎತ್ತರ ೧೩೦ ಪೌಂಡು ತೂಕ ಇದು ಪ್ರಾಣಿಲೋಕದಲ್ಲಿ ಸಣ್ಣ ಆಕೃತಿಯಲ್ಲ. ಕೆಲ ಅಪರೂಪ ಪ್ರಸಂಗಗಳಲ್ಲಿ ೮॥ ಫೂಟು ಎತ್ತರ, ೬೦೦ ಪೌಂಡು ತೂಕದ ಜನರೂ ಆಗಿಹೋಗಿದ್ದಾರೆ.



## ನಿಮಗೆ ಗೊತ್ತೆ ?

**ಕೈಬೆರಳಿನ ಉಗುರುಗಳು ತಿಂಗಳಿಗೆ ೧/೮ ಇಂಚಿನಷ್ಟು ಬೆಳೆಯುತ್ತವೆ. ನಿರೋಗಿಯಾಗಿದ್ದರೆ ಇಡೀ ಉಗುರು ಹೊಸದಾಗಿ ಬೆಳೆಯಬೇಕಾದರೆ ೧೬೦ ದಿನಗಳು ಬೇಕು.**

ಉತ್ತರ ಕನ್ನಡದ ಹಳ್ಳಿಯ ಹೆಣ್ಣಿಗೆ ಹೂವೆಂದರೆ ಜೀವ. ಹೂ ಅವಳೊಡನೆ ಮಾತಾಡುತ್ತದೆಯೋ ಎಂಬ ಹಾಗೆ !

# ಹೂವಿನ ಮಳ್ಳಿ

ಜಿ. ಆರ್. ಹೆಗಡೆ, ಕುಮಟಾ



ಹೂಗಳೆಂದರೆ ಹಳ್ಳಿಯ ಹೆಂಗಸಿಗೆ ಪ್ರಾಣ. ಅವುಗಳ ಬಣ್ಣನೆಯನ್ನು ಅವಳ ಬಾಯಿಂದಲೆ ಕೇಳಬೇಕು. 'ಚೆಂಡು ಮಲ್ಲಿಗೆ ಚೆಲುವೆ' ಅವಳು. 'ಗಮುಗಮು ಮಲ್ಲಿಗಿ ತುರುಬಿಗೆ ಸಂಪಿಗಿ' ಯನ್ನು ಮುಡಿದು 'ಅಲಗುತ ಮುಲಗುತ ಜಾಜಿಯ ಸೆರಳಿ' ನಂತೆ ಹೆಮ್ಮೆಯಿಂದ ನಡೆದಾಡಿ ಗೊತ್ತಿದ್ದವಳು; ತನ್ನ ಮನೆಯ ಸುತ್ತಲೂ ಹೂಗಿಡಗಳನ್ನು ಹಚ್ಚಿ, ನೀರೆರೆದು, ಹಬ್ಬಿದ ಗಿಡಗಳ ತುದಿಯಲ್ಲಿ ನಗುನಗುತ ಅರಳಿದ ಹೂಗಳನ್ನು ಬಿಡಿಸಿ ತೃಪ್ತಿಯನ್ನು ಹೊಂದಿದವಳು ಅವಳು. ಅಂಥ ಅನುಭವವಿರುವದರಿಂದಲೆ ಅವಳ ಬಣ್ಣನೆಯಲ್ಲಿ ಅಷ್ಟು ಸೊಗಸು.

ಅವಳ ಸಿಂಗಾರದಲ್ಲಿ ಹೂ ಮುಖ್ಯ. ಚಿನ್ನಬಣ್ಣಗಳು ಏನಿದ್ದರೂ ಅಷ್ಟೆ; ಹೂ ಮುಡಿದುಕೊಂಡಷ್ಟು ಸಂತೋಷ ಯಾವುದರಿಂದಲೂ ಅವಳಿಗಾಗದು. ಅದೂ ಒಂದೆರಡನ್ನು ಹೆಳಲಿಗೋ ಮುಡಿಗೋ ಸಿಕ್ಕಿಸಿಕೊಂಡರೆ ಅವಳಿಗೆ ತೃಪ್ತಿಯಿಲ್ಲ. ಅವಳ ಆರಾಧ್ಯ ದೇವತೆ ಉಮಾದೇವಿ ಕೂಡ—

**" ಜಾಜಿ ಜಂಜಿಯ ಕೊಯ್ದು ದಂಡೆಮಾಡಿ**
**ಕೆನ್ನೆಗಿಂಬಾಗಿ ಮುಡಿದಾಳೆ. ''**

ಉಮಾದೇವಿ ನೂರು ಗಿಡದ ಹೂ ಮುಡಿಯುವಾಕೆ. ಅದಕ್ಕೆ ಮೊದಲು ಅವಳಿಗೆ ಲಕ್ಷ್ಮೀದೇವಿ ಹೆಳಲು ಹಾಕಿ ಮುಡಿ ಕಟ್ಟಬೇಕು: ಅನಂತರ ಜಳಕವಾಗಬೇಕು:

**" ನೂರು ಗಿಡದ ಹೂವು ಕೊಯ್ದ್ಹಾಳೆ**
**ಪಚ್ಚದ ಎಣ್ಣೆ ನೆತ್ತಿಗೆ ಎರದಾಳೆ**
**ಗಂಧದ ಬಾಚಣಿಕೆ ಎಡಗೈಲ ತೊಟ್ಹಾಳೆ**
**ಎಡಕಿನ ಕುರುಳ ಎಡಕೆ ಬಾಚಾಳೆ**
**ಎಡಕಿನ ಕುರುಳ ಎಡಕೆ ಬಾಚಾಳೆ**
**ಬಲಕಿನ ಕುರುಳ ಬಲಕೆ ಬಾಚಾಳೆ**
**ಶ್ರೀಲಕ್ಷ್ಮೀ ಮುಡಿಯ ಕಟ್ಹಾಳೆ**
**ಬಚ್ಚಲಕೆ ಜಳಕಕೆ ನಡೆದಾಳೆ**
**ಕೋಣೆಯ ಒಳಗೆ ಬಂದಾಳೆ**
**ನೆತ್ತಿಸುರ ಹೂವ ಮುಡಿದಾಳೆ.**

ಕೆನ್ನೆಗಿಂಬಾಗಿ, ನೆತ್ತಿ ಮುಚ್ಚುವ ಹಾಗೆ, ಬಯ್ತಲೆ ತುಂಬ ಹೂ ಮುಡಿದರೆ ಮುಡಿದಂತೆ. ಅದಕ್ಕೇನು ದುಡ್ಡು ಕೊಡಬೇಕೆ; ಧೂಪ ಹಾಕಬೇಕೆ? ಬೇಕಾದಂಥ ಹೂ ಬೇಕಷ್ಟು ಅವಳಿಗೆ ದೊರೆಯುತ್ತಿರುವಾಗ ಅವಳಿಗೇನು ಕೊರತೆ?

ಹೂವಿನಲ್ಲಿ ಅವಳು ಸುಖವನ್ನು ಕಾಣುವುದಕ್ಕೆ

ಇನ್ನೊಂದು ಕಾರಣವೂ ಇರಬಹುದು. ಇವಳ ಬಾಳೂ ಆ ಹೂವಿನಂತೆಯೆ; ಅನುವು ಆಸರೆ ದೊರೆತಲ್ಲಿ ಚಿಗಿತು ಅರಳಿ ನಕ್ಕುಬಿದ್ದು ಹೋಗುವ ಬದುಕು. ಬೇರೆಯವರಿಗಾಗಿ ಅಲ್ಲ; ತನಗಾಗಿ. ತನ್ನ ಬಾಳಿನ ಸುತ್ತ ಮಗಮಗಿಸುವ ಕಂಪನ್ನು ಹರಡಿ, ತಾನೂ ನಕ್ಕು, ತನ್ನ ಸುತ್ತಲೂ ನಗುವಿನ ಲಹರಿಗಳನ್ನೇಳಿಸಿ ಕೊನೆಯಲ್ಲಿ ಕಮರಿ ಹೋಗುವ ಬಾಳು. ಅಂತೆಯೇ ಹೂ ಅವಳಿಗೆ ಸಮಾನ ಗುಣವುಳ್ಳದ್ದು; ಹೆಚ್ಚು ಆತ್ಮೀಯ.

ಅವಳ ಮನೆಯ ಹತ್ತಿರವೇ ಮಲ್ಲಿಗೆ ಬಳ್ಳಿ ಬೇಕಷ್ಟು ಹೂ ಬಿಡುತ್ತಲಿದೆ :

**ಒಬ್ಬಳಿದ್ದಲ್ಲಿ ಹಬ್ಬಿತ್ತೆ ಮಲ್ಲಿಗಿ**
**ಒಬ್ಬಳೇ ನೀರು ಎರಿನಾರೆ-ಮಲ್ಲಿಗೆ**
**ದಿನಕೊಂದೆ ಕೊಡವ ಎರಿವೇನು**

ಅವಳು ಆಡಿದ ಮಾತು ಆ ಬಳ್ಳಿಗೆ ತಿಳಿಯುತ್ತಿರಬೇಕು. ಅವಳು ಎರೆವ ನೀರು ತುಸುವಾದರೂ ಅವಳ ಮೃದುವಾದ ಮಾತು, ಹಿತವಾದ ಆರೈಕೆ, ಅವಳ ಕೈಗುಣ ಇವುಗಳಿಂದಾಗಿಯೊ ಏನೋ ಅದು ಸಾಕಷ್ಟು ದೊಡ್ಡದಾಗಿ ಹಬ್ಬಿ ಬಿಟ್ಟಿದೆ. ಅದಕ್ಕೆ ಬಿಟ್ಟ ಅಷ್ಟೆಲ್ಲ ಹೂಗಳನ್ನು ಕಂಡು ಅವಳಿಗೆ ತವರಿನ ನೆನಪು ಬರುತ್ತದೆ: ಇಲ್ಲಿ ತಾನೊಬ್ಬಳೆ. ತವರಿನಲ್ಲಿ ಮಕ್ಕಳಿದ್ದಾರೆ, ಹೆಂಗಸರಿದ್ದಾರೆ. ತೇರಿಗೆ ಹೋಗುವಾಗ ಹೂ ಮುಡಿದುಕೊಂಡು ಹೋಗುವರು, ಎಂದೆಲ್ಲ ಅವಳಿಗೆ ತೋರುತ್ತದೆ.

ಬರಿಯ ಹಿತ್ತಿಲದ ಹೂವಿನಿಂದ ಅವಳಿಗೆ ಸಮಾಧಾನವಿಲ್ಲ. ಬಿಡುವಿದ್ದಾಗ ಊರೆಲ್ಲ ಅಲೆದು ಬೇರೆ ಬೇರೆ ಹೂಗಳನ್ನು ಸಂಗ್ರಹಿಸ್ತಾಳೆ.

**ಒಳ್ಳೊಳ್ಳೆ ಕೇದಗೆ ಮುಳ್ಳಲ್ಯಾಕೆ ಮೂಡಿದೆ**
**ಎಲ್ಲೆಲ್ಲಿ ಹೋದರಲ್ಲಲ್ಲಿ ಪರಿಮಳ—ಕೇದಿಗೆ**
**ಹಾರಿ ಬಾ ನಮ್ಮ ತುರುಬಿಗೆ**
**ಮುಚ್ಚಾನದಲಿ ಮುಚ್ಚಾನ ಮಲ್ಲಿಗಿ**
**ಸೂಕುಮದಲಿ ಸುರುಗಿಯೆ ಸೇವಂತಿಗಿ**
**ಉರುಳಿ ಬಾ ನಮ್ಮ ತುರುಬಿಗೆ**

ಕೇದಗೆ, ಮಧ್ಯಾಹ್ನಮಲ್ಲಿಗೆ, ಸುರಗೆ, ಸೇವಂತಿಗೆ ಒಂದೇ ಎರಡೇ? ಅವಳು ಆ ಗಿಡಗಳ ಬಳಿಗೆ ಹೋಗಿ ಪ್ರಾರ್ಥಿಸಿಕೊಂಡರೆ ಇವಳ ಮೇಲಿನ ಪ್ರೀತಿಯಿಂದ ಆ ಹೂಗಳು ಅವಳ ಬಳಿಗೆ ಬಾರದೇ ಇದ್ದಾವೆ? ಅವಳ ಮುಡಿಯನ್ನಲಂಕರಿಸುವ ಭಾಗ್ಯವನ್ನು ಬಿಟ್ಟಾವೇ?

'ಭಟ್ಕಳ ಮಲ್ಲಿಗಿ ತೊಟ್ಟೆಲ್ಲ ಪರಿಮಳ'ವೆಂದು ಅವುಗಳ ಮೇಲೆ ತುಂಬ ಆಸೆ. 'ಮಲ್ಲಪುರ ಮಲ್ಲಿಗಿ ಕೆಕ್ಕಾರ ಕ್ಯಾದಿಗಿ'.ಬಿಳಿತನದಲ್ಲಿ ಶ್ರೇಷ್ಠ; ಗೋಕರ್ಣದ ಮಡಿವಳನೂ ಕೂಡ ಅಷ್ಟು ಮಡಿಯಾಗಿ ಬಟ್ಟೆಗಳನ್ನು 'ಬಿಳುಗೆಯ್ಸಲಾರ'ನಂತೆ ! ಅಗಸಿಯ ಹೊಳೆಯಲ್ಲಿ ಜಗತರದ ಮಲ್ಲಿಗಿ' ಅರಳಿರುವವೆಂದೂ ಅಲ್ಲಿಯ ಮಕ್ಕಳು 'ಕೊಯ್ಯಾರೊ ತಮ್ಮ ಸೆರೆತುಂಬ' ಎಂದೂ ಅವಳಿಗೆ ಆಗಾಗ ನೆನಪಿಗೆ ಬರುತ್ತದೆ.

ಹೆಣ್ಣಿಗೆ 'ಹೂ ಮುಡಿಸುವದು' ಎಂಬುದು ನಮ್ಮಲ್ಲಿ ಬಹುದಿನಗಳಿಂದ ನಡೆದುಬಂದಿರುವ ಸಂಪ್ರದಾಯ. ಎಳೆಯ ಮುತ್ತೈದೆಯನ್ನು ಕೂರಿಸಿಕೊಂಡು ಅವಳಿಗೆ ಹಲವು ಬಗೆಯ ಹೂ ಮುಡಿಸಿ ಅದನ್ನು ಕಂಡು ಹಿರಿಯರು ಸುಖಿಸುವ ಸಂದರ್ಭ ಅದು. ಆಗ ಕೂಡಿದವರಲ್ಲಿ ಒಬ್ಬಳು ಅದನ್ನು ಬಣ್ಣಿಸುತ್ತ ಹಾಡುತ್ತಿರುತ್ತಾಳೆ. ಎಲ್ಲ ಕಡೆಗಳಲ್ಲೂ ಈ ಸತ್ಸಂಪ್ರದಾಯವಿದೆ. ಅವುಗಳ ಸಂಗ್ರಹ, ಆಯ್ಕೆ, ಅಭ್ಯಾಸ, ಪ್ರಕಟನೆ ನಡೆಯಬೇಕಾಗಿದೆ.

ಹೂಗಳ ವಿಷಯವಾದ ಅನುಭವ ಹಳ್ಳಿಯ ಹೆಂಗಸಿಗೆ ಬಹಳ. ಇದನ್ನು ಅವಳು ತನ್ನ ನಿತ್ಯದ ಬದುಕನ್ನು ತಿದ್ದಿಕೊಳ್ಳಲು ಬಳಸುತ್ತಾಳೆ. ಅಂಥ ಪ್ರಸಂಗದಲ್ಲಿ ಬಂದ ನುಡಿಗಳಲ್ಲಿ ಸುಂದರವಾದ ಅನುಭವೋಕ್ತಿಗಳು ದೊರೆಯುತ್ತವೆ.

**ದಾಸಾಳ ಹೂವಿನ ವಾಸನೆಗೊಂಡವನ್ಯಾರೊ**
**ವಾಸನೆಯಿಲ್ಲ ಬರಿಹೂವು-ಪರ ಹೆಣ್ಣಿಗೆ**
**ಮನಸು ಮಾಡಿದರೂ ಫಲವಿಲ್ಲ**

**ಕೆಂಡಬ್ಬರಿಗಿ ಹೂವ ಕಂಡಲ್ಲಿ**
**ಕುಯ್ಯಬಾರ**
**ಮುಂಡಾಸದ ಮೇಲೆ ಮುಡಿಬಾರ—**
**ತಮ್ಮಯ್ಯ**
**ಹೆಂಡತಿಗೆ ಸಲಿಗೆ ಕೊಡಬಾರ.**

ದಾಸಾಳ ಬರಿಯ ಬಣ್ಣದ ಹೂ; ವಾಸನೆಯಿಲ್ಲ. ಅದನ್ನು ಪರ ಹೆಣ್ಣಿಗೂ ಕೆಂಪು ಅಬ್ಬರಗಿ ಹೂವನ್ನು ಮುಂಡಾಸದ ಮೇಲೆ ಮುಡಿಯುವದನ್ನು ಹೆಂಡತಿಗೆ ಸಲಿಗೆ ಕೊಡುವದಕ್ಕೂ ಹೋಲಿಸುವ ಅವಳ ದೃಷ್ಟಿ ಎಷ್ಟು ಸರಿಯಾಗಿದೆ ಎಂದು ಯೋಚಿಸಿದರೆ ಅರ್ಥವಾಗುವದು. 'ಯಾವಹುಂಗ (ಹೂ) ಮುಡಿದರೂ ನುಗ್ಗಿ ಹುಂಗ ಮುಡಿಬಾರ' ಎಂಬುದು ಅವಳ ಸ್ಪಷ್ಟ ಅಭಿಪ್ರಾಯ. ಅದು ಕಾಯಾಗುವ ಗಿಡ. ಅದರಿಂದ ಪ್ರಯೋಜನವಿದೆ. ಆದರೆ ಆವಳಿಗೆ ಅದರ ವಿಷಯವಾಗಿಯೂ ಸಾಕಷ್ಟು ಪರಿಚಯವಿಲ್ಲದೆ ಇಲ್ಲ. 'ನುಗ್ಗಿಯ ಹುಂಗಿಗೆ ಅರ್ವತ್ತೊಂದು ಕುಸುಮ' ವಂತೆ! ಅದರ ಪರಿಮಳ 'ಅರ್ವತ್ತೊಂದು ದಿವಸ'ವಂತೆ! ಹಾಗೆಯೆ (ಎಳೆಪ್ರಾಯದ) 'ಪುಂಡಿಯವರತ್ತೆ, ಮುದುಕಿ ಕುಟ್ಟಿದ ಬತ್ತ ದುಂಡುಮಲ್ಲಿಗೆಯ ಎಸಳಿನ ಅವಳಿಗೆ ಕಾಣುತ್ತದೆ.

**ಗೊಂಡೆ ಹೂವಿನ ಚಂಡೆ ಮುಡಿವಳ್ಯಾರೋ ಜಾಣೆ**
**ಹತ್ತು ಗಾವುದಕೂ ಪರಿಮಳ —**
**ಮುಡಿಯುವ ಜಾಣೆ**
**ಇಪ್ಪತ್ತು ಗಾವುದಕೂ ಪರಿಮಳ.**

ಮಹಾಭಾರತದಲ್ಲಿ ಯೋಜನಗಂಧಿ ಮತ್ಸ್ಯಗಂಧಿಯರ ಹೆಸರುಗಳು ಬಂದಿವೆ. ಆದರೆ ನಮ್ಮ ಹಳ್ಳಿಗಳಲ್ಲಿ ಪುಷ್ಪಗಂಧಿ ಕಾಣುತ್ತಾಳೆ. ಅವಳು ಸುಳಿದರೆ ಪರಿಮಳವೋ ಪರಿಮಳ. 'ಅಕ್ಕಿ ತಳಸ್ವಾಗೆ ಯಕ್ಕೆ ಹೂವಿನ ಪರಿಮಳ.' ಅದನ್ನು ಅನುಭವಿಸಿದವರು 'ನಾರಿ ನಿನ್ನ ಮನೆಯಲ್ಲಿ ಯಕ್ಕೆಯ ಬನವೇನೆ?' ಎಂದು ಕೇಳಬೇಕು.

ಹಬ್ಬ ಹುಣ್ಣಿವೆ ಮದುವೆ ಮುಂಜಿಗಳು ಬಂದರೆ ಅವಳ ಹೂವಿನ ಹುಚ್ಚಿಗೆ ಕಳೆಯೇರುತ್ತದೆ. 'ಹಬ್ಬವು ಬಂತೆಂದು ಒಬ್ಬರಿಗೂ ಸುದ್ದಿಲ್ಲ. ಅಬ್ಬಲಿ ಹೂವ ಕೊಯ್ಲಿಲ್ಲ ಕಲ್ಲಿಲ್ಲ, ಹಬ್ಬಕೆ ಅಕ್ಕನ್ನ ಕರಿಲಿಲ್ಲ'. ಹೂವನ್ನು ತಲೆ ತುಂಬ ಮುಡಿಯುವ ಸೊಗಸುಗಾರ್ತಿಯಾದ ಅಕ್ಕ ಇಲ್ಲದ ಹಬ್ಬ ಏನು ಸೊಗಸು, ಎಂದು ಅವಳಿಗೆ ಎನಿಸುವದು ಸಹಜ.

ಹಳ್ಳಿಯ ಹೆಂಗಸಿಗೆ ಹೂವು ಮುಡಿದು ವೈಯಾರ ಮಾಡಿಕೊಂಡು ಮೆರೆಯುವದೊಂದೇ ಕೆಲಸವಲ್ಲ. ಅವಳು ರೈತನ ಮಡದಿ. ಮಾಡುವದಕ್ಕೆ ನೂರೆಂಟು ಕೆಲಸಗಳಿವೆ. ಹೊಲದ ಕೆಲಸ, ಹಿತ್ತಿಲು, ತೋಟದ ಕೆಲಸ, ದನಕರುಗಳ ಕೆಲಸ, ಮಕ್ಕಳು ಮರಿಗಳ ಆರೈಕೆ, ಮನೆವಾರ್ತೆಯ ಕೆಲಸ ಎಂದು ಮೈತುಂಬವಿರುತ್ತವೆ. ಅವುಗಳ ಮಧ್ಯ ಈ ಹೂವಿನ ಗೀಳು. ಈ ಬಗೆಯ ಹೂಗಳ ಸಂಪರ್ಕದಿಂದಾಗಿ ಅವಳ ಬಾಳು ಸೌಂದರ್ಯದಿಂದ ಕೂಡಿದೆ; ಪರಿಮಳವನ್ನು ಹೊಂದಿದೆ. ಈ ಹಾಡುಗಳು ಅಂಥ ಬದುಕಿನ ಬಳ್ಳಿಗೆ ಅರಳಿದ ಕುಸುಮಗಳು.



## ಮಾತು ಬಲ್ಲವರು

**ಉತ್ತಮ ಭಾಷಣಕ್ಕೆ ಒಳ್ಳೆಯ ಪ್ರಾರಂಭ ಮತ್ತು ಒಳ್ಳೆಯ ಕೊನೆ ಇರುತ್ತದೆ– ಮತ್ತೆ ಆವೆರಡೂ ಒಂದಕ್ಕೊಂದು ಸನಿಹದಲ್ಲೂ ಇರುತ್ತವೆ.** —ಫ್ರಾಂಕ ಮಾರ್ಗನ್

**ವಿಮರ್ಶಕನೆಂದರೆ ಇತರರಿಗೆ ಓಡಲು ಕಲಿಸಹೊರಟ ಕುಂಟ.**

—ಜ್ಯಾನಿಂಗ ಪೊಲೊಕ್

**ಜನರು ಒಬ್ಬರ ಬಗ್ಗೊಬ್ಬರು ಏನೇನು ಹೇಳುತ್ತಾರೆ ಎಂದು ಎಲ್ಲರಿಗೂ ತಿಳಿದದ್ದಾದರೆ ಈ ಜಗತ್ತಿನಲ್ಲಿ ಸ್ನೇಹದಿಂದಿರುವ ನಾಲ್ಕೇ ನಾಲ್ಕು ಜನರು ಕೂಡ ದೊರೆಯರು.**

—ಪಾಸ್ಕಲ್




# ಚಿನ್ನದ ಶೋಧ

“ ಪರಶುರಾಮ ”

ನಾನು ಈಗ ಹೇಳುವದು ಕಲ್ಪನಾ ವಿಲಾಸವಲ್ಲ. ನನ್ನ ಜೀವನದಲ್ಲಿ ನಿಜವಾಗಿ ನಡೆದ ಘಟನೆ. ಅದು ಸಂಭವಿಸಿದ್ದು ೧೯೩೦ ರಲ್ಲಿ. ಅದು ನನ್ನ ಜೀವನದ ಮರೆಯಲಾರದ ಘಟನೆ.

ನನಗಾಗ ವಯಸ್ಸು ೧೮. ಮೆಟ್ರಿಕ್ಕಿನಲ್ಲಿ ಓದುತ್ತಿದ್ದೆ. ಹುಗಿದಿಟ್ಟ ನಿಧಿಯ ಶೋಧಕ್ಕೆ ೧೮ ತೀರ ಸಣ್ಣ ವಯಸ್ಸಾಯಿತೆಂದು ನೀವು ಹೇಳಬಹುದು. ನೀವು ವಿದ್ಯಾರ್ಥಿಗಳ ಶಿಸ್ತಿನ ಭಕ್ತರಾಗಿದ್ದರೆ ಚಿನ್ನದ ಶೋಧವು ವಿದ್ಯಾರ್ಥಿಗಳಿಗೆ ಯೋಗ್ಯವಾದ ಕಾರ್ಯವಲ್ಲೆಂದು ಹೇಳುವಿರೆಂದೂ ನಾನು ಬಲ್ಲೆ. ಜೀವನದಲ್ಲಿ ಬೇರೆ ಸಾಹಸಗಳಲ್ಲಿ ಕೈಸಾಗದ ಅಪರವಯಸ್ಸಿನವರು ಮಾಡುವ ಕೆಲಸ ಅದೆಂದು ನನಗೆ ಗೊತ್ತಿದೆ. ಆದರೆ ಬಡತನದಂಥ ಗುರು ಬೇರೊಬ್ಬನಿಲ್ಲ. ಅದು ಅನೇಕ ಪಾಠಗಳನ್ನು ಕಲಿಸುತ್ತದೆ.

ನಾನಾಗ ವಿಜಾಪುರದ ಒಂದು ಓಣಿಯಲ್ಲಿ ಒಂದು ಕೋಣೆ ಬಾಡಿಗೆಗೆ ಹಿಡಿದು ವಾಸಿಸುತ್ತಿದ್ದೆ.

ಒಂದು ಅಮಾವಾಸ್ಯೆಯ ದಿನ ಸಿದ್ದೇಶ್ವರ ಜಾತ್ರೆಗೆ ನಮ್ಮ ಹಳ್ಳಿಯ ಅನೇಕರು ದನ ಮಾರಲು-ಕೊಳ್ಳಲು ವಿಜಾಪುರಕ್ಕೆ ಬಂದಿದ್ದರು. ಅವರಲ್ಲಿ ನನ್ನ ಬಾಲ್ಯಸ್ನೇಹಿತ ಕರಿಯಪ್ಪನೂ ಒಬ್ಬ. ಅವನಿಗೆ ನನ್ನ ಕೋಣೆ ತೋರಿಸಬೇಕೆಂದು ಸಂಜೆ ಕರೆದುಕೊಂಡುಬಂದೆ. ಸಂಗಡ ಅವನ ಮಾವನೂ ಇದ್ದ.

ಬಂದು ದೀಪ ಹಚ್ಚುತ್ತಿದ್ದೆನಷ್ಟೇ, ಮನೆಯೊಳಗಿಂದ ವಿಚಿತ್ರ ಚೀರಾಟವೊಂದು ಕೇಳಿಸಿತು. ಮೂವರೂ ಅತ್ತ ಧಾವಿಸಿದೆವು. ಚೀರಿದವ ನನ್ನ ಮನೆ ಮಾಲಿಕ ಸಿದರಾಮಪ್ಪ. ಆತ ಚಳಿಜ್ವರ ಬಂದವರಂತೆ ಗಡಗಡ ನಡುಗುತ್ತಿದ್ದ. ಭಯಕಾರಕ ಧ್ವನಿಯಿಂದ ಅರಚುತ್ತಿದ್ದ.

ಅಷ್ಟರಲ್ಲಿ ನಮ್ಮ ಗಣಿತದ ಮಾಸ್ತರ ಕುಲಕರ್ಣಿ ಅಲ್ಲಿಗೆ ಬಂದರು. ನನಗೆ ಈ ಕೋಣೆ ಕೊಡಿಸಿದವರು ಅವರೇ. ಅವರಿಗೂ ಸಿದರಾಮಪ್ಪನಿಗೂ ಬಹಳ ಸ್ನೇಹ.

"ಗಾಬರಿಪಡಬೇಕಾದ್ದಿಲ್ಲ. ಅವನ ಮೈಯಲ್ಲಿ ದೇವರು ಬಂದಿದ್ದಾನೆ" ಎಂದು ಮಾಸ್ತರರು ಹೇಳಿದಾಗಲೇ ನಮಗೆ ಜೀವ ಬಂದದ್ದು. ಪ್ರತಿ ಅಮಾವಾಸ್ಯೆ ಸರಿಯಾಗಿ ೬ ರಿಂದ ೮ ರ ವರೆಗೆ ಅವನ ಮೈಯಲ್ಲಿ ದೇವರು (ಯಾವ ದೇವರೆಂದು ಗೊತ್ತಿಲ್ಲ.) ಕ್ಲುಪ್ತವಾಗಿ ಬಂದು ಮನಸಿನಲ್ಲಿದ್ದುದನ್ನೆಲ್ಲ ನುಡಿಸುತ್ತಿದ್ದನೆಂದು ಅವರೇ ಹೇಳಿದರು.

ಸಿದರಾಮಪ್ಪ ಚೀರುತ್ತಲೇ ಧೊಪ್ಪನೆ ಬಿದ್ದುಬಿಟ್ಟ. ಅವನ ಬಾಯಿ ದೇವಯೋಗ್ಯವಾದ ಗಂಭೀರವಾಣಿಯಿಂದ ಒಡನುಡಿಯಹತ್ತಿತು. "ಮಗನೇ, ನೀನು ಲಕ್ಷ್ಮೀಪುತ್ರ. ನಿನ್ನ ಮನೆಯಲ್ಲಿ ಲಕ್ಷ್ಮೀದೇವಿ ಕಾಲು ಮುರಿದುಕೊಂಡು ಬಿದ್ದಿರುವಳು. ನೀನು ಅವಳನ್ನು ಪೂಜಿಸುವಂಥವನಾಗು. ಅವಳ ಕೃಪೆಗೆ ಪಾತ್ರನಾಗುವೆ."

ಮಾಸ್ತರರು ಭಕ್ತಿಯಿಂದ ಕೈಮುಗಿದು ದೈವದ ವಾಕ್ಯದ ಅರ್ಥವನ್ನು ಕೇಳಿದರು: "ಅಜ್ಜಾ, ಯಾವ ಭಕ್ತನು ಲಕ್ಷ್ಮೀಪುತ್ರನೆಂದು ಅಪ್ಪಣೆ ಕೊಡಿಸಿದಿರಿ?"

ದೇವರು ಗುಡುಗಿದನು: "ಅವನೇ ಹೋರಿ ಮಾರಲು ಬಂದ ಹೊಳೆಸಾಲಿನವನು. ಬಾಗಿಲಲ್ಲಿ ಗಾಬರಿಯಾಗಿ ನಿಂತವನು. ಅವನೇ ಲಕ್ಷ್ಮೀಪುತ್ರ."

ಕರಿಯಪ್ಪ, ಅವನ ಮಾವ ಇಬ್ಬರೂ ಸಾಷ್ಟಾಂಗ ನಮಸ್ಕಾರ ಹಾಕಿದರು. ಕರಿಯಪ್ಪನಿಗಾಗಲೆ ಅಗಾಧ ಶ್ರದ್ಧೆ ಬಂದುಬಿಟ್ಟಿತ್ತು. ಅವನು, "ಹೌದು ತಂದೇ. ನೀನು ಹೇಳುವದು ನಿಜ. ನಮ್ಮ ತಂದೆ ಸಾಯುವಾಗ ಬಾಯಿ ಹೋಗಿತ್ತು. ಆಗ ನನಗೆ ೮ ವರ್ಷ. ನೆಲವನ್ನು ಬಡಿಬಡಿದು ಅವನು ಏನೋ ಹೇಳಲು ಬಹಳ ಹೆಣಗಿದ. ನನಗೇನೂ ಅರ್ಥವಾಗಲಿಲ್ಲ. ಆ ಮೇಲೆ ನಮ್ಮ ನಂಬಿಗೆಯ ಆಳು ಮುದುಕ ನಿಂಗಪ್ಪ ನನಗೆ ಹೇಳಿದ. ಮೊಹರು ತುಂಬಿದ ಕೊಡವನ್ನು ಅಪ್ಪ ಮನೆಯಲ್ಲಿ ಎಲ್ಲಿಯೋ ಹುಗಿದಿಟ್ಟಿದ್ದಾನೆ ಅಂತ. ಆದರೆ ಎಲ್ಲಿ ಎಂದು ಅವನಿಗೂ ಗೊತ್ತಿದ್ದಿಲ್ಲ," ಎಂದು ಬಡಬಡಿಸಿದ.

ಸಿದರಾಮಪ್ಪನಿಗೆ ಮತ್ತಷ್ಟು ಆವೇಶ ಬಂತು. "ನಿನ್ನ ತಂದೆಗೆ ಆ ಮೊಹರಿನ ಕೊಡವನ್ನು ದಯಪಾಲಿಸಿದವನು ನಾನೇ. ದಾನ ಧರ್ಮ ಮಾಡು ಅಂತ ಅಪ್ಪಣೆ ಕೊಟ್ಟಿದ್ದೆ," ಎಂದು ಆರ್ಭಟಿಸಿದ.

"ಇರಬೇಕು ಒಡೆಯಾ, ನಿಂಗಪ್ಪ ಹೇಳಿದ್ದ: ತಂದೆಗೆ 'ಇಂಥಲ್ಲಿ ನಾನಿರುವೆ. ನಿನ್ನ ಮನೆಗೆ ಬರುವೆ' ಅಂತ ಕನಸಿನಲ್ಲಿ ಯಾರೋ ಹೇಳಿದರಂತೆ.' ಅವನೂ ನಿಂಗನೂ ಹೋಗಿ ಅಗೆದಾಗ ಆ ಜಾಗೆಯಲ್ಲೇ ಕೊಡ ಸಿಕ್ಕಿತಂತೆ. ಮನೆಗೆ ತಂದರಂತೆ. ಆಮೇಲೆ ಆ ಸ್ಥಳದಲ್ಲಿ ನನ್ನ ತಂದೆ ಹತ್ತೆಂಟು ಸಾವಿರ ರೂಪಾಯಿ ವೆಚ್ಚಮಾಡಿ ಲಕ್ಷ್ಮೀಗುಡಿ, ಮಲ್ಲಯ್ಯನ ಗುಡಿ ಕಟ್ಟಿಸಿದ್ದು ನಿಜ ದೇವಾ!"

"ಚಿನ್ನದ ಮೊಹರು ತುಂಬಿದ ಕೊಡವನ್ನು ಸೂರ್ಯೋದಯಕ್ಕೆ ಎಳೆಬಿಸಿಲು ಬೀಳುವಂಥ ಸ್ಥಾನದಲ್ಲಿ ಹುಗಿದಿದ್ದಾರೆ. ನಿನ್ನ ಗೆಳೆಯನ ಪುಣ್ಯದಿಂದ ಅದು ಈ ಯುಗಾದಿಯೊಳಗೆ ನಿನ್ನ ವಶವಾಗುವದು."

ಆವೇಶ ಇಳಿಯಿತು; ನುಡಿಕಟ್ಟು ಬಂದಾಯಿತು; ಎಂಟು ಗಂಟೆ ಹೊಡೆದಿತ್ತು.

ಆ ರಾತ್ರಿ ನನ್ನ ಕೋಣೆಯಲ್ಲಿ ಮಂತ್ರಾಲೋಚನೆಯ ಸಭೆ ಸೇರಿತು. ಕರಿಯ ತನ್ನ ಮಾವನನ್ನು ಕಳಿಸಿ ತಾನು ನನ್ನಲ್ಲೇ ಉಳಿದುಕೊಂಡ. ಮಾಸ್ತರರು ಊಟ ಮುಗಿಸಿಕೊಂಡು ಬಂದು ಸೇರಿದರು.

ದೇವಪ್ರತಿನಿಧಿ ಸಿದರಾಮಪ್ಪನವರು ವಿಶೇಷ ಆಮಂತ್ರಣದಿಂದ ಹಾಜರಿದ್ದರು. ಕರಿಯ ಉಗುಳುನುಂಗಿ ಪ್ರಸ್ತಾಪತೆಗೆದ. ಈ ಮೊದಲು ಬೇರೆ ದೇವರೂ ಗಂಟಿನ ಸೂಚನೆ ಕೊಟ್ಟಿದ್ದ ರಂತೆ. ಈ ಸಲ ಅದನ್ನು ಹಸ್ತಗತ ಮಾಡಿ ಕೊಳ್ಳಲೇಬೇಕೆಂದು ಅವನ ಅಪೇಕ್ಷೆಯಾಗಿತ್ತು.

"ದೇವರು ಹೇಳಿದ್ದಾನೆಂದ ಮೇಲೆ ಅದು ಸಿಗದೆ ಎಲ್ಲಿ ಹೋಗುತ್ತದ?" ಸಿದ್ದರಾಮಪ್ಪ ಧೈರ್ಯಕೊಟ್ಟ. ಆ ಮೇಲೆ "ನೋಡಪ್ಪಾ, ನನಗೆ ನಿಧಿ ನಿಕ್ಷೇಪ ತೆಗೆಯುವ ವಿಚಾರ ಅಷ್ಟಿಷ್ಟು ಗೊತ್ತಿದೆ. ದೇವರ ದಯದಿಂದ ಅದನ್ನು ನಿನಗೆ ತೆಗೆದು ಕೊಟ್ಟೇನು. ಆದರೆ ನೀನು ಅದರಲ್ಲಿ ಒಂದು ಭಾಗ ದಾನ ಮಾಡಲು ಸಿದ್ಧನಿದ್ದೀಯಾ? ಮೊದಲೇ ಈ ವಿಚಾರ ತೆಗೆದದ್ದಕ್ಕೆ ತಪ್ಪು ತಿಳ ಕೊಳ್ಳಬೇಡ. ನನಗೆ ಬಂದ ಕಹಿ ಅನುಭವ ದಿಂದ ಹೇಳುತ್ತೇನೆ. ಎಷ್ಟೋ ಸಲ ನಾನು ಗಂಟು ತೆಗೆದು ಕೊಟ್ಟಮೇಲೆ ಬರಿಗೈಯಿಂದ ಸ್ವಂತ ಗಾಡಿಖರ್ಚು ಮಾಡಿಕೊಂಡು ಮರಳಿ ಬರುವ ಪ್ರಸಂಗ ಬಂದದ್ದುಂಟು. ನನಗೇನೂ ಇದರಿಂದ ಹೊಟ್ಟೆ ತುಂಬಬೇಕಾಗಿಲ್ಲ ಅನ್ನು. ಆದರೆ ಕೊಟ್ಟ ದೇವರ ಹೆಸರಲ್ಲಿ ಏನಾದರೂ ಧರ್ಮ ಮಾಡಬೇಕೋ ಬೇಡವೋ ಹೇಳು?"

ನಿಧಿಯ ಹುಚ್ಚು ಹಿಡಿದಿದ್ದ ಕರಿಯನಿಗೆ ಹದಿನಾರಾಣೆ ನಿಜ ಅನಿಸಿತು. "ನೀವು ನಿಧಿ ತೆಗೆದು ಕೊಟ್ಟರೆ ಅರ್ಧಭಾಗ ನಿಮಗೇ ಕೊಟ್ಟುಬಿಡುವೆ" ಎಂದು ಔದಾರ್ಯದ ಭರದಲ್ಲಿ ಹೇಳಿದ.

"ತಮ್ಮಾ, ಇಂಥ ಮಾತಿನ ಔದಾರ್ಯ ನಾನು ಅರಿಗುದ್ದಿಲ್ಲ. ಮನುಷ್ಯ ಒಳ್ಳೆಯವನೇ ಇರು ತ್ತಾನೆ. ದುಡ್ಡೇ ಮಹಾಪಾಪಿ. ಕೊಡ ತೆಗೆದು ಹೊರಗಿಟ್ಟ ಮೇಲೆ ಅದನ್ನು ನೋಡಿ ನಿನ್ನ ತಲೆ ತಿರುಗುವದು. ಅಷ್ಟೇ" ಸಿದರಾಮಪ್ಪ ಕಡ್ಡಿ ಮುರಿದು ಮಾತಾಡಿದ.

"ನಾನು ಅಂಥ ಚಿಲ್ಲರೆ ಮನಸಿನವನಲ್ಲ ದೇವರು. ನಿಮ್ಮ ಅರ್ಧಪಾಲು ಅವತ್ತೇ ತಕ್ಕೊಂಡು ಬಿಡಿರಿ. ಇದಕ್ಕೆ ನಮ್ಮ ಗೆಳೆಯರಿದ್ದಾರಲ್ಲ ಇವರೇ ಜಾಮೀನು" ಎಂದು ವ್ಯವಹಾರದಲ್ಲಿ ನನ್ನನ್ನೂ ಸೇರಿಸಿಕೊಂಡು ಕರಿಯ ಭರವಸೆಯಿತ್ತ.

"ನಿನಗೆ ಬಂಗಾರ ಸಿಗುವದು ನಿನ್ನ ಗೆಳೆಯನ ಪುಣ್ಯದಿಂದ ಅಂತ ದೇವರು ಹೇಳಿದ್ದು ಇದಕ್ಕೇ ಇರಬಹುದು. ಯಾಕರೀ ಮಾಸ್ತರ?... ಪ್ರಸಂಗ ಬಂದರೆ ಅಂಜನಾ ಹಾಕುವ ತಯಾರಿಯಲ್ಲೇ ನಾವು ಹೋಗಬೇಕಾಗುತ್ತದೆ. ಅಂಜನಾ ಹಾಕುವ ನಮ್ಮ ವೀರಭದ್ರಪ್ಪ ಪಕ್ಕಾ ವ್ಯವಹಾರದ ಮನುಷ್ಯ. ನನಗೆ ನಿನ್ನ ಮಾತಿನ ಜಾಮೀನು ಸಾಕು. ಆದರೆ ಆ ವೀರಭದ್ರ ಕಾಗದ, ಕರಾರು ಲೇಖೀ ಇಲ್ಲದೆ ಮಾತೇ ಆಡುವವನಲ್ಲ," ಚುಟ್ಟಾದ ಹೊಗೆ ಬಿಡುತ್ತ ಸಿದರಾಮಪ್ಪ ನಿದಾನವಾಗಿ ಹೇಳಿದ.

ಕರಿಯನಿಗೆ ಆತುರ ಹೆಚ್ಚುತ್ತಿತ್ತು. ಆಗಲೇ ಕರಾರುಪತ್ರ ಬರೆದುಬಿಡಿರೆಂದು ನನಗೆ ದುಂಬಾಲುಬಿದ್ದ. ಆದರೆ ಸಿದರಾಮಪ್ಪ ಆತುರಪಡಲಿಲ್ಲ. "ಇದಕ್ಕೇಕೆ ಅವಸರ? ಈವೊತ್ತು ಅಮಾವಾಸ್ಯೆ, ನಾಳೆ ಕರಿದಿನ. ನಾಡದು ಮುಹೂರ್ತ ನೋಡಿ ಕರಾರಪತ್ರ ಬರೆದುಕೊಟ್ಟೀಯಂತೆ. ನಿನ್ನ ಕಬೂಲಿ ಮುಖ್ಯ. ಸಹಿ ಯಾವಾಗ ಬೇಕಾದರೆ ಆಗಲಿ,-" ಎಂದು ದೊಡ್ಡ ಮನಸು ತೋರಿಸಿದ. ಕರಿಯ ಊರಿಗೆ ಹೋದ.

ನಾಲ್ಕೇ ದಿನದಲ್ಲಿ ಕರಿಯ ತಿರುಗಿ ಬಂದ. ಈ ನಡುವೆ ಕುಲಕರ್ಣಿ ಮಾಸ್ತರರು ಕರಾರಿನ ವಿವರಗಳನ್ನು ತಯಾರಿಸಿದರು. ಅರ್ಧ ನಿಕ್ಷೇಪ ಕರಿಯನಿಗೂ ಅವನ ತಮ್ಮ ಕಾಶಪ್ಪನಿಗೂ ಹೋಗಲಿ. ಸಿದರಾಮಪ್ಪನ ಅರ್ಧದಲ್ಲಿ ನಾಲ್ಕು ಪಾಲಾಗ ಬೇಕು. ಒಂದು ಪಾಲು ಸಿದರಾಮಪ್ಪನಿಗೆ ಉಳಿದ ಮೂರು ಪಾಲುಗಳಲ್ಲಿ ಒಂದು ನನಗೆ, ಒಂದು ಮಾಸ್ತರರಿಗೆ, ಮತ್ತೊಂದು ವೀರಭದ್ರಪ್ಪನಿಗೆ. ಹೀಗೆಂದು ಕರಾರಿನ ಕರಡು ಸಿದ್ಧಪಡಿಸಿದ್ದಾಯಿತು.

ಕರಿಯಪ್ಪ ಬಂದ ಮೇಲೆ ಮತ್ತೆ ಮಂತ್ರಾಲೋಚನೆ ಜರುಗಿಸಿ ಶಿವರಾತ್ರಿ ಅಮಾವಾಸ್ಯೆಯ ದಿನ ನಿಧಿಯನ್ನು ಅಗೆದು ತೆಗೆಯುವದೆಂದು ಗೊತ್ತು ಮಾಡಿಕೊಂಡೆವು. ಅಂದು ವಿಜಾಪುರದಿಂದ ನಾವು ನಾಲ್ಕು ಜನ ನಮ್ಮೂರಿಗೆ ಬರಲು

ಗಾಡಿ ಖರ್ಚಿಗೆಂದು ಕರಿಯ ೨೫ ರೂಪಾಯಿ ಕೊಟ್ಟು ಊರಿಗೆ ತೆರಳಿದನು.

ಅಂದಿನಿಂದ ಶಿವರಾತ್ರಿ ಅಮಾವಾಸ್ಯೆಯ ವರೆಗಿನ ಕೆಲ ವಾರಗಳಲ್ಲಿ ನಾನು ಕಂಡಷ್ಟು ಹಗಲು ಮತ್ತು ಇರುಳುಗನಸುಗಳನ್ನು ನಾನು ಒಟ್ಟು ಇಡೀ ಜನ್ಮದಲ್ಲಿ ಕಂಡಿರಲಿಕ್ಕಿಲ್ಲ ಇದರಲ್ಲಿ ನಮ್ಮ ಗಣಿತ ಮಾಸ್ತರರೂ ಭಾಗಿಗಳಾಗಿದ್ದರು. ಕೊಡ ತುಂಬ ಚಿನ್ನದ ನಾಣ್ಯಗಳು. ಕೊಡದಲ್ಲಿ ನಾಲ್ಕು ಗ್ಯಾಲನ್ ನೀರು ಹಿಡಿಯುವದೆಂದು ಹಿಡಿದು ಅವರು ವಿಶಿಷ್ಟಗುರುತ್ವದ ಭೌತ ಶಾಸ್ತ್ರದ ನಿಯಮ ಪ್ರಕಾರ ಎಷ್ಟು ಸೇರು ಚಿನ್ನ ಹಿಡಿಯಬಹುದೆಂದು ಅಂದಾಜು ಮಾಡಿದರು. ಅದರಲ್ಲಿ ನಾಣ್ಯನಾಣ್ಯದ ನಡುವಿನ ಖಾಲಿ ಸ್ಥಳ ಪರಮಾವಧಿಯೆಂದರೆ ಸೇಕಡಾ ೧೨॥ ಯೆಂದು ಹಿಡಿದು ವಜಾ ಹಾಕಿ ಪೇಟೆ ಧಾರಣೆಯ ಸೇಕಡಾ ೯೦ ದರದಲ್ಲಿ ಬೆಲೆ ಕಟ್ಟಿದರೂ ನಮ್ಮ ಒಬ್ಬೊಬ್ಬರ ಪಾಲು ಕನಿಷ್ಠ ರೂ. ೯೫,೦೦೦ ದಷ್ಟಾದರೂ ಆಗಲೇಬೇಕೆಂದು ಅವರು ಗುಣಿಸಿ ಹೇಳಿದರು. ನಾನು ಯಾವಾಗಲೂ ಗಣಿತದಲ್ಲಿ ಸ್ವಲ್ಪ ಅಷ್ಟಕ್ಕಷ್ಟೇ. ಆದರೆ ಗಣಿತ ವಿಶಾರದರಾದ ಕುಲಕರ್ಣಿ ಮಾಸ್ತರರ ಮೇಲೆ ನನಗೆ ಸಂಪೂರ್ಣ ವಿಶ್ವಾಸವಿತ್ತು.

ನನ್ನ ಪುಸ್ತಕಗಳು ಕೋಣೆಯಲ್ಲಿ ದೇವರ ಕಣಿ ಆದ ದಿವಸ ಯಾವ ಸ್ಥಿತಿಯಲ್ಲಿದ್ದವೋ ಆ ಸ್ಥಿತಿಯಲ್ಲೇ ಉಳಿದವು. ಅವುಗಳನ್ನು ನಾನು ಕೋಲಿನಿಂದಲೂ ಮುಟ್ಟಿರಲಿಲ್ಲ. ಆ ಮೇಲೆ ಒಂದು ದಿನ ಅವುಗಳನ್ನೆಲ್ಲ ಗಂಟುಕಟ್ಟಿ ಒಂದು ಮೂಲೆಯಲ್ಲಿ ಮಡಗಿದೆ. ಈ ಬಡ ಪುಸ್ತಕಗಳಿಂದೇನು? ಹಣೇಬರಹದ ೪೦ ರೂಪಾಯಿ ಕಾರಕೂನಿಕೆಗಾಗಿ ಇಷ್ಟೆಲ್ಲ ಕಷ್ಟ. ೯೫,೦೦೦ ರೂಪಾಯಿ ಜೇಬಿನಲ್ಲಿ ಇಷ್ಟರಲ್ಲೇ ಬೀಳಲಿರುವ ನನಗೆ ಇವುಗಳ ಹಂಗೇನು?

ಶಿವರಾತ್ರಿ ಅಮಾವಾಸ್ಯೆ ಬರುವದೇ ಇಲ್ಲ ವೇನೋ ಎಂಬ ಅಸಹನೆಯಲ್ಲಿ ನಾನಿದ್ದೆ. ಕೊನೆಗೆ ಅದು ಬಂದೇ ಬಿಟ್ಟಿತು. ಆವೊತ್ತು ತೆಲಸಂಗದ ಟಪಾಲುಮೋಟಾರಿನಲ್ಲಿ ಹೋಗಬೇಕೆಂದು ಗೊತ್ತುಮಾಡಿಕೊಂಡಿದ್ದೆವು. ಎರಡು ಗಂಟೆಗೆ ಎಲ್ಲರೂ ಟಪಾಲುಕಟ್ಟೆಗೆ ಬರಬೇಕೆಂದು ನಿಶ್ಚಿತವಾಗಿತ್ತು. ಆದರೆ ಸಿದರಾಮಪ್ಪನಾಗಲಿ ವೀರಭದ್ರಪ್ಪನಾಗಲಿ ಆ ಹೊತ್ತಿಗೆ ಹಾಜರಾಗಲಿಲ್ಲ. ನಾನು ಹುಡುಕಿಕೊಂಡು ಸಿದರಾಮಪ್ಪ ಕಾರಕೂನನಾಗಿದ್ದ ಅಡತಿ ಅಂಗಡಿಗೆ ಹೋದೆ. ಅಲ್ಲಿ ಅವನು ಅಂದು ಮಧ್ಯಾಹ್ನದ ಮೇಲೆ ಬಂದೇ ಇರಲಿಲ್ಲ. ವೀರಭದ್ರಪ್ಪನ ಕಡೆ ಹೋಗಿರಬೇಕೆಂದು ತರ್ಕಿಸಿ ಅವನ ಮನೆ ಇರುವ ದಿಕ್ಕಿಗಾದ ದಾರಿ ಹಿಡಿದೆ.

ದಾರಿಯಲ್ಲಿ ಮೊಚ್ಚೆಗಾರರ ಒಂದು ಅಂಗಡಿಯಲ್ಲಿ ಸಿದರಾಮನ ಜರದ ರುಮಾಲಿನ ತಲೆ ಕಾಣಿಸಿತು. ಸಂಗಡಲೇ ವೀರಭದ್ರಪ್ಪನೂ ಇದ್ದ. ನನ್ನ ಬರವನ್ನು ದೂರದಿಂದಲೇ ನೋಡಿ ಸಿದರಾಮಪ್ಪ ಗಡಿಬಿಡಿಯಿಂದ ಎದ್ದು ಬಂದು ಚಪ್ಪಲಿ ಉಂಗುಟ ಹಚ್ಚಿಸಿಕೊಳ್ಳಲು ಅಲ್ಲಿ ಬಂದದ್ದಾಗಿ ಹೇಳಿದ. "ಈಗ ಬಂದೆವು. ೪ ಗಂಟೆಯ ಮೋಟಾರಿನ ತಿಕೀಟು ತೆಗದುಕೊಂಡು ಲಕ್ಷ್ಮಿ ಗುಡಿಯ ಹತ್ತಿರ ನಿಲ್ಲಿರಿ. ೩॥ ಯೊಳಗೆ ಹಾಜರು!" ಎಂದ.

ನಾವು ತೆಲಸಂಗ ಮುಟ್ಟಿದಾಗ ಆರು ಗಂಟೆ ಮೀರಿತ್ತು. ಅಲ್ಲಿಂದ ೪ ಮೈಲು ನಡೆದು ಹಾಲಳ್ಳಿ ತಲಪಿದೆವು. ಅಲ್ಲಿಂದ ನಮ್ಮೂರು ೧೨ ಮೈಲು. ಕತ್ತಲೆಯಲ್ಲಿ ನಡೆದು ಅಲ್ಲಿ ಅಂದು ತಲುಪುವದು ಅಸಾಧ್ಯವೇ ಆಗಿತ್ತು. ಸುಗ್ಗಿಯ ಸಮಯವಾದ್ದರಿಂದ ಗಾಡಿ ಸಿಗುವದೂ ಅಸಾಧ್ಯವಿತ್ತು. ಕೊನೆಗೆ ಒಬ್ಬ ರೈತನಿಗೆ ಗಂಟುಬಿದ್ದು, ತೀರ ಜಡ್ಡಾದವರನ್ನು ಕಾಣಬೇಕಾಗಿದೆಯೆಂದು ಸುಳ್ಳು ಹೇಳಿ, ೧೦ ರೂಪಾಯಿ ಬಾಡಿಗೆ ಗೊತ್ತುಮಾಡಿ ಗಾಡಿ ಹೂಡಿಸಿದೆವು. ಅಂತೂ ಪ್ರಥಮವಿಘ್ನ ದೂರವಾಯಿತಲ್ಲ ಎಂದು ನಾನೂ ಮಾಸ್ತರರೂ ನಿಟ್ಟುಸಿರು ಬಿಟ್ಟೆವು.

ಊರಿಗೆ ತಲುಪಿದಾಗ ೧೨ ಗಂಟೆ ರಾತ್ರಿ. ನಾಯಿಗಳು ಸಾಲಾಗಿ ಬೊಗಳಿ ನಮ್ಮ ಬರವನ್ನು ಅರ್ಧ ಊರಿಗೆ ತಿಳಿಸಿದವು. ಕರಿಯಪ್ಪ ಒಂಟಿಗಾಲ ಮೇಲೆ ನಮ್ಮನ್ನು ಕಾಯುತ್ತಿದ್ದ. ಆದರೆ

ಅಪನ ಮನೆಯಲ್ಲಿ ಹೊಸ ಸಂಕಟ ನಮಗಿಂತ ಮೊದಲೇ ಹಾಜರಾಗಿತ್ತು. ಅಮಾವಾಸ್ಯೆ ಕೃಷ್ಣಾ ಸ್ನಾನಕ್ಕೆಂದು ಪರವೂರಿಂದ ಬಂದ ಕರಿಯನ ಬಂಡುಬಳಗದವರು ಅವನ ಮನೆಯಲ್ಲಿ ಕಾಲು ಹಾಕಲು ಸ್ಥಳವಿಲ್ಲದಂತೆ ಮಲಗಿದ್ದರು. ಅಣ್ಣ ತಮ್ಮ ಹೊರತು ಒಂದು ಬೆಕ್ಕಿನ ಮರಿಕೂಡ ಅಂದು ಮನೆಯಲ್ಲಿರತಕ್ಕದ್ದಲ್ಲೆಂದು ನಾವು ಮೊದಲೇ ಹೇಳಿಕಳಿಸಿದ್ದರೂ ಅನಿರೀಕ್ಷಿತ ಬಂಧು ಗಳ ಆಗಮನವು ಅವನನ್ನು ಉಭಯ ಸಂಕಟ ದಲ್ಲಿ ಕೆಡವಿತ್ತು.

ಆದರೆ ಕರಿಯನಿಗೂ ಗಂಟಿನ ಹುಚ್ಚು ಹಿಡಿದ ಮೇಲೆ ಸುಳ್ಳಿನ ಕಂತೆ ಹೆಣೆಯಲು ಬಂದಂತಿತ್ತು. ಅವನು ಬಂಧುಗಳನ್ನು ಎಬ್ಬಿಸಿ ವಿಜಾಪುರದಿಂದ ದೊಡ್ಡ ಗಿರಸ್ತಾರರು ಬಂದಿದ್ದಾರೆಂದು ಏನೇನೋ ಹೇಳಿ ಅವರನ್ನೆಲ್ಲ ಅಲ್ಲಿಂದ ಹೊತ್ತು ಹಾಕಿದನು. ಒಂದು ಮದುವೆಗಾಗಿ ನೂರು ಸುಳ್ಳು ಹೇಳ ಬಹುದಂತೆ; ಗಂಟು ಕೀಳಬೇಕಾದರೆ ಸಾವಿರ ಸುಳ್ಳು ಹೇಳಬೇಕಾಗುತ್ತದೆ.

ಆಗಲೆ ರಾತ್ರಿ ೧ ಹೊಡೆದಿರಬಹುದು. ಕಾಲ ಹರಣ ಮಾಡಿದರೆ ಕೆಲಸ ಕೆಡುವದು ಖಂಡಿತ. ಚಿನ್ನ ಹುಗಿದ ಸ್ಥಳ ಕಂಡುಹಿಡಿಯಲು ಸಿದ ರಾಮಪ್ಪ ಕಂಚಿನ ಬಟ್ಟಲಲ್ಲಿ ಆಕಳ ಹಾಲು, ಅಕ್ಕಿಕಾಳು, ಯಾವದೋ ಒಂದು ಬೇರು ಹಾಕಿ ಪೂಜೆಮಾಡಿ, ಅದರ ಮೇಲೆ ಹಸ್ತವನ್ನಿಟ್ಟು ದೇವರ ಧ್ಯಾನ ಮಾಡುತ್ತ ಕೂಡ್ರಲು ಕರಿಯನಿಗೆ ಹೇಳಿದನು. ಬಟ್ಟಲ ಮೇಲೆ ಸಿದರಾಮಪ್ಪ, ಕರಿ ಯಪ್ಪ, ಕಾಶಪ್ಪ ಕೈಹಿಡಿದಿದ್ದರು.

ನಾವು ಉಸಿರು ಹಿಡಿದು ನೋಡುತ್ತಿದ್ದಂತೆ ಹತ್ತು ನಿಮಿಷಗಳಲ್ಲಿ ಕಂಚಿನ ಬಟ್ಟಲು ಬುಗರಿ ಯಂತೆ ಗರ್ರನೆ ತಿರುಗಲಾರಂಭಿಸಿತು. ಸಿದ- ರಾಮಪ್ಪ ಅದು ಸಾಗಿದಂತೆ ಅದರ ಮೇಲೆ ಕೈ- ಯಿಟ್ಟೇ ಮುಂಬರಿಯಲು ಹೇಳಿದನು. ಬಟ್ಟಲು ಪಡಸಾಲೆಯನ್ನು ಬಿಟ್ಟು ಸೆಟ್ಟಗೆ ದೇವರ ಕೋಣೆಯ ಕಡೆ ಸಾಗಿತು. ಉಳಿದವರು ಅನು ಸರಿಸಿದರು. ದೇವರ ಕೋಣೆಯ ಮಧ್ಯದಲ್ಲಿ ಅದು ನಿಂತುಬಿಟ್ಟಿತು.

ಇದು ನನಗೆ ಸ್ವಲ್ಪ ವಿಪರೀತವಾಗಿ ಕಂಡಿತು. ಬೆಳಗಿನ ಸೂರ್ಯನ ಕಿರಣಗಳು ಬೀಳುವ ಸ್ಥಳ ವೆಂದರೆ ತಲೆಬಾಗಿಲ ಪಾವಟಿಗೆ. ದೇವರು ಹೇಳಿದ ಸ್ಥಳ ಅದು. ಬಟ್ಟಲು ತೋರಿಸುವ ಸ್ಥಳ ದೇವರ ಕೋಣೆ. ಹೀಗೇಕಾಯಿತು ? ನನ್ನ ಸಂಶಯಕ್ಕೆ ಮಾಸ್ತರರು ವಿಜ್ಞಾನಸಿದ್ಧ ಉತ್ತರವನ್ನು ಕೊಟ್ಟರು. ತಲೆಬಾಗಿಲ ಪಾವಟಿಗೆಯ ಕೆಳಗೆ ಕೊಡ ಇರಬೇಕು. ಇಲ್ಲಿ ಅದಕ್ಕೂ ದೊಡ್ಡ ರಂಜ ಣಿಗೆ ಹುಗಿದಿದ್ದಾರೆ. ಗುರುತ್ವಾಕರ್ಷಣ ನಿಯಮ ಪ್ರಕಾರ ದೊಡ್ಡದರ ಆಕರ್ಷಣೆಯೇ ಬಲವಾಗಿ ಬಟ್ಟಲು ಇಲ್ಲಿ ಬಂದಿದೆ. ಮಾಸ್ತರರ ವ್ಯಾಖ್ಯಾನ ಸಮರ್ಪಕವಾಗಿಯೇ ಕಂಡಿತಾಗ ನನಗೆ. ರಂಜ ಣಿಗೆ ತುಂಬ ವರಹ! ಕೊಡಕ್ಕಿಂತಲೂ ಹೆಚ್ಚು!

ಗುದ್ದಲಿ ಪೂಜೆಯಾಯಿತು. ಕರಿಯ ಅರ್ಧನೆತ್ತಿ ನೆಲ ಅಗೆಯಹತ್ತಿದ. ಠೈಂ ಠೈಂ ಎಂದು ಸದ್ದು ಪ್ರಾರಂಭವಾಯಿತು. "ಸ್ವಲ್ಪ ಸೌಮ್ಯವಾಗಿ ಅಗೆಯೋ ಮಹಾರಾಯಾ" ಎಂದು ನಾನು ಎಚ್ಚರವಿತ್ತೆ. ಗಂಟು ಅಗೆದದ್ದು ಗೊತ್ತಾದರೆ ನಮ್ಮೂರ ಮಾರಿಗಳಾದ ಸಿದ್ದಗೌಡ, ಕುಲಕರ್ಣಿ ಕಲ್ಲಪ್ಪ ಕೈಗೆ ಬಂದ ತುತ್ತು ಕಸಿದುಕೊಂಡಾ ರೆಂದು ನನಗೆ ಗೊತ್ತಿತ್ತು. ಆದರೆ ಹೆಗ್ಗಣಗಳಿಗೆ ತೋಡಲು ಕೊಡಬಾರದೆಂದು ನೆಲಗಟ್ಟಿಗೆ ಹಾಕಿದ ದೊಡ್ಡ-ದೊಡ್ಡ ಗುಂಡುಕಲ್ಲುಗಳು ಎಲ್ಲಿ ಕೇಳಬೇಕು ? ಎಲ್ಲಿ ಹೊಡೆತ ಹಾಕಿದರೂ ಠೈಂ! ನನ್ನ ಎದೆಯ ಮೇಲೆ ಅದು ಬಿತ್ತೋ ಎನಿಸು ತ್ತಿತ್ತು ನನಗೆ. ಗಂಟು ಹುಗಿದಿಟ್ಟು ಮೇಲೆ ಇಂಥ ಕಲ್ಲು ಹಾಕಿ ನೆಲಗಟ್ಟು ತುಂಬಿದ ಮೂರ್ಖ ರನ್ನು ನಾನು ಮನವಾರೆ ಶಪಿಸುತ್ತಿದ್ದಂತೆ, ನೆರ ಮನೆಯ ಕಿರಾಣಿ ಅಂಗಡಿಯ ಈಶ್ವರಪ್ಪ ಎದ್ದು 'ಕಳ್ಳರು' ಎಂದು ಗುಲ್ಲೆಬ್ಬಿಸಿದನು. ಇದು ಅನಿರೀ ಕ್ಷಿತ ಆಪತ್ತಾಗಿತ್ತು. ಜನರು ಬಂದರೆ ಏನು ಹೇಳಬೇಕೆಂದು ನಾನು ಕಂಗಾಲಾದೆ. ಆದರೆ ಸಿದರಾಮಪ್ಪ ಇದರಲ್ಲೆಲ್ಲ ಎತ್ತಿದ ಕೈ. ಅವನು ಗೊಂದಲಬಡಕನ "ಕೈ ಬೆಚ್ಚಗ ಮಾಡಿ ಬಾಯಿ ತಣ್ಣಗೆ ಮಾಡಿಸಿ ಬಾ" ಎಂದು ಕರಿಯನನ್ನು

ಹೊರಗೆ ಕಳಿಸಿದ. ಇನ್ನೊಂದು ನಿಮಿಷದಲ್ಲಿ ಹಸ್ತಶುದ್ಧಿಯಿಂದ ಸಂತುಷ್ಟನಾದ ಈಶ್ವರ ತೆಪ್ಪಗೆ ಮಲಗಿದ. ಎರಡಾದದ್ದು ಮೂರಾಯಿತು. ಇನ್ನು ವಿಘ್ನವಿಲ್ಲ. ಕೊಡವೋ ರಂಜಣಿಗೆಯೋ ಕೈವಶ ವಾದಂತೆಯೇ....

ಗುದ್ದಲಿಯ ಪೆಟ್ಟು ಬೀಳುತ್ತಲೇ ಇತ್ತು. ಮಣ್ಣು ಕಲ್ಲುಗಳ ರಾಶಿ ಏರುತ್ತಲೇ ಇತ್ತು. ರಾತ್ರಿ ಮೀರುತ್ತಲೇ ಇತ್ತು. ನನ್ನ ಆತುರ ಮನಸು ಚಡಪಡಿಸುತ್ತಿತ್ತು. ಒಂದು ಮೊಳ ತಗ್ಗು ಬಿದ್ದಿದೆ. ಇನ್ನೂ ರಂಜಣಿಗೆ ಹೋಗಲಿ, ಕೊಡದ ಕಂಟ ಸಹಿತ ಕಾಣುವದಿಲ್ಲವಲ್ಲ. ನಾಲ್ಕಾರು ಮೊಳ ತಗ್ಗು ತೋಡಿ ಹುಗಿದಿಟ್ಟಿದ್ದಾನೋ ಮುದುಕ! ನನ್ನ ಈ ರನಿಂಗ್ ಕಾಮೆಂಟರಿ ಕೇಳಿದ ಕರಿಯಪ್ಪ ಅಗೆಯುವದನ್ನು ತಡೆದ.

"ಹೌದು, ರಾಯರನ್ನುವದು ನಿಜ. ಮೊಳಕ್ಕಿಂತ ಕೆಳಗೆ ಇರಲಾರದು. ನಿಧಿಗಳು ಒಮ್ಮೊಮ್ಮೆ ಇಟ್ಟಲ್ಲಿಂದ ಸರಿದು ಹೋಗುವದುಂಟು. ವೀರಭದ್ರಪ್ಪ, ನಿನ್ನ ಅಂಜನ ಪ್ರಯೋಗ ಆಗಲೇ ಬೇಕೆಂತ ಕಾಣುತ್ತದೆ;" ಎಂದು ಸಿದರಾಮಪ್ಪ ಹೇಳಿದ.

ವೀರಪ್ಪ "ಆಗಲಿ" ಎಂದು, ಒಮ್ಮೆಲೇ "ಮಡಿ ನೀರಿನ ಕೊಡ ತಯಾರಿದೆಯೆ?" ಎಂದು ಕೇಳಿದ.

ಕರಿಯಪ್ಪನಾದರೂ ಎಲ್ಲ ಆಕಸ್ಮಿಕಕ್ಕೆ ಸಿದ್ಧನಿದ್ದನೇನೋ. "ಬೆಳಗ್ಗೆಯೇ ತಂದಿಟ್ಟಿದ್ದೇನೆ," ಎಂದು ಅವನು ಹಲ್ಲು ಕಿರಿದ.

"ಮಸಣ ಎಲ್ಲಿ?" ವೀರಭದ್ರನ ಮುಂದಿನ ಪ್ರಶ್ನೆ.

ನಾನು ಬೆಚ್ಚಿಬಿದ್ದು, "ಮಸಣ?" ಎಂದೆ.

"ಹೌದು, ಕಬರಿಸ್ತಾನ. ಮುಸಲ್ಮಾನರ ಹೆಣ ಹುಗಿಯುವ ಸ್ಥಳ."

ವೀರಭದ್ರಪ್ಪ ಆಗಲೇ ಮನುಷ್ಯರೂಪದಿಂದ ಪಿಶಾಚರೂಪಕ್ಕೆ ಬದಲಾಗುತ್ತಿರುವಂತೆ ನನಗನಿಸಿತು. ಮನೆಯಿಂದ ಇನ್ನೂರು ಮಾರು ಪೂರ್ವಕ್ಕೆ ಹೋದರೆ ಕಬರಿಸ್ತಾನ ಬರುವದೆಂದು ಕರಿಯಪ್ಪ ಹೇಳಿದ ಮೇಲೆ,

"ಅಲ್ಲಿ ಬೇವಿನ ಮರವುಂಟೊ?" ಎಂದು ಕೇಳಿದ ವೀರಭದ್ರ.

"ನಾಲ್ಕಾರು ಉಂಟು."

"ಈಗ ನಾನು ಅಂಜನಸಿದ್ಧಿ ಮಂತ್ರಪಠಿಸುತ್ತ ಕಬರಸ್ತಾನಕ್ಕೆ ಹೋಗಿ ಅಲ್ಲಿಂದ ನಗ್ನಾವಸ್ಥೆಯಲ್ಲಿ ಬೇವಿನ ತೊಪ್ಪಲ ತರಬೇಕು. ನಾನು ತಿರುಗಿ ಬಂದ ಕೂಡಲೆ ಮನೆಯ ಹೊರಗೇ ನನ್ನ ತಲೆಯ ಮೇಲೆ ಮಡಿ ನೀರ ಕೊಡ ಸುರುವಿಬಿಡಿರಿ. ನನ್ನ ಕಡೆ ಯಾರಾದರೂ ನೋಡೀರಿ ಮತ್ತೆ! ಪರಿಣಾಮ ಭಯಂಕರವಾದೀತು. ಅಷ್ಟರಲ್ಲಿ ಈ ತಗ್ಗಿನಲ್ಲಿ ತುಪ್ಪದ ದೀಪ ಹಚ್ಚಿ, ಅಂಜನಕ್ಕಾಗಿ ಕರ್ಪೂರದ ಕಾಡಿಗೆ ತೆಗೆದಿಡಿರಿ," ಅನ್ನುತ್ತನ್ನುತ್ತ ವೀರಭದ್ರಪ್ಪ ವಸ್ತ್ರ ಬಿಚ್ಚಿ ನಗ್ನನಾದ.

ತಿರುಗಿ ಬಂದ ಮೇಲೇಕೆ, ಈಗಲೇ ಅವನನ್ನು ನೋಡುವ ಧೈರ್ಯ ನನಗಾಗಲಿಲ್ಲ. ತಿರುಗಿ ಬಂದ ಮೇಲಂತೂ ಯಾರೂ ಅವನ ಕಡೆ ತಪ್ಪಿ ಕೂಡ ದೃಷ್ಟಿ ಹೊರಳಿಸಲಿಲ್ಲ.

ವೀರಭದ್ರಪ್ಪ ತಗ್ಗಿನಲ್ಲಿಳಿದು ಅಂಜನ ಸಿದ್ಧಪಡಿಸಿದ. ಸಿದರಾಮಪ್ಪ ಅದನ್ನು ಬಲ ಹಸ್ತದ ತಳಕ್ಕೆ ಲೇಪಿಸಿಕೊಂಡು ಪಡಸಾಲೆಯಲ್ಲಿ ಕುಳಿತು ಏಕಾಗ್ರ ದೃಷ್ಟಿಯಿಂದ ಅದನ್ನೇ ದಿಟ್ಟಿಸತೊಡಗಿದನು. ಒಮ್ಮೆಲೇ ಅವನು ಥರಥರ ನಡುಗಲಾರಂಭಿಸಿದನು.

"ನನ್ನ ತಲೀಮ್ಯಾಲಿನ ಭಾರಾ ಇಳಿಸು!" ಅದೇ ಚೀರಲು ದನಿ—ಮನೆಯಲ್ಲಿ ದೇವರು ಆವೇಶವಾದಾಗಿನದು. ಭಾಷೆ ಮಾತ್ರ ಶುದ್ಧ ಗ್ರಾಂಥಿಕವಲ್ಲ. ಸ್ತ್ರೀ ದೇವತೆ ಗ್ರಾಮ್ಯಭಾಷೆಯನ್ನೇ ಮಾತಾಡುತ್ತಿದ್ದಳೇನೋ!

ನನಗೆ ಹೊರಗೆ ಯಾರಿಗಾದರೂ ಕೇಳಿಸಿ ಅವರು ಬಂದುಬಿಟ್ಟರೇನು ಗತಿ ಎಂಬ ಸಂಕಟ. "ಸ್ವಲ್ಪ ಮೆಲ್ಲಗೆ ಮಹಾರಾಯಾ!" ಎಂದೆ. ಅದು ಕೂಗಾಟವನ್ನು ಮತ್ತಷ್ಟು ಏರಿಸಿತೇ ವಿನಾ ಇಳಿಸಲಿಲ್ಲ.

ತಗ್ಗಿನಲ್ಲಿ ನಗ್ನನಾಗಿ ಕುಳಿತಿದ್ದ ವೀರಭದ್ರಪ್ಪ "ಭಾರ ಇಳಿಸಿದೆ! ಅಬ್ಬಾ, ಎಷ್ಟು ಭಾರವಾದ ಕಲ್ಲಿದು!" ಎಂದು ಮಾರುತ್ತರವಿತ್ತದ್ದನ್ನು ಕೇಳಿ ನಾನು ದೇವರ ಮನೆಗೆ ಓಡಿದೆ.

" ಎಡಗಾಲ ಬುಡದಾಗ ಕೈಯಾಡಿಸು. ನನ್ನ ಸ್ಪರ್ಶ ನಿನಗಾದೀತು ! " ಸಿದರಾಮಪ್ಪನ ಮೈಯಲ್ಲಿ ಸೇರಿದ ಲಕ್ಷ್ಮಿ ಒದರಿ ಅಪ್ಪಣೆ ಕೊಟ್ಟಳು.

" ಹೂಂ. ಕಂಟ ಸಿಕ್ಕಿತು, ಕೊಡದ ಕಂಟ'' ವೀರಭದ್ರಪ್ಪ ಕೂಗಿದ.

" ತಾಯಿ ಮುಖಕ್ಕೆ ಕಪ್ಪುರದ ಆರತಿ ಬೆಳಗಿ ಆದರಾಗ ತಾಯಿ ಮುಖ ನೋಡು! '' ಸಿದರಾಮಪ್ಪ ಅರಚಿದ.

ಆ ಒಂದು ಕ್ಷಣ ನನ್ನ ಜೀವನದ ಅತ್ಯಂತ ವಿಲಕ್ಷಣ ಅವಧಿಯಾಗಿತ್ತು. ಉತ್ಸಾಹ, ಆತುರ, ಅಭಿಲಾಷಾಪೂರ್ತಿಯ ಆನಂದ, ಆದರೂ ಒಂದು ಬಗೆಯ ಶಂಕೆ, ಉತ್ತೇಜನ ಮತ್ತು ಇನ್ನೇನೇನೋ ಆ ಒಂದು ಕ್ಷಣದಲ್ಲಿ ನನ್ನ ಬಾಲಿಶ ಮನಸಿನಲ್ಲಿ ವೃಂದನಾಟ್ಯ ನಡೆಸಿದ್ದವು.

ತೆಂಗಿನ ಕಾಯಿಯ ಮೇಲೆ ನಾಲ್ಕಾರು ವಡೆ ಕರ್ಪೂರವಿಟ್ಟು ಹಚ್ಚಿ ವೀರಭದ್ರಪ್ಪ ಬೆಳಗುತ್ತಿದ್ದಂತೆ ಕೊಡದ ಕಂಟ ಹೊಂಡದ ತಳದಲ್ಲಿ ಹೊಳೆಯುವದು ನನ್ನ ಕಣ್ಣಿಗೆ ಕಾಣಿಸಿತು. ಸಾಮಾನ್ಯವಾಗಿ ಭಕ್ತಿವಿಧುರನಾದ ನನ್ನ ಕೈಗಳು ತಾವಾಗಿ ಜೋಡಿಸಿಕೊಂಡವು. '' ಭಾಗ್ಯದ ಲಕ್ಷ್ಮಿ ಬಾರಮ್ಮ" ಎಂಬ ಹಾಡು ಹಾಡಬೇಕೆಂಬ ಉತ್ಕಟೇಚ್ಛೆಯೊಂದು ನನ್ನಲ್ಲಿ ಉತ್ತೇಜಿತವಾಯಿತು. ಆದರೆ ನಾನು ಆನಂದದಿಂದ ವಾಙ್ಮೂಢನಾಗಿದ್ದೆ.

ವೀರಭದ್ರಪ್ಪ ಕೊಡದ ಬಾಯಿಯಿಂದ ಏಳೆಂಟು ನಾಣ್ಯಗಳನ್ನು ತೆಗೆದು ನನ್ನ ಕೈಗೆ ಕೊಟ್ಟ. ನಾನು ನಡುಗುವ ಕೈಗಳಿಂದ ಅವನ್ನು ತೆಗೆದುಕೊಂಡೆ. ಆಹಾ ! ಚೊಕ್ಕ ಚಿನ್ನದ ವರಹಗಳು. "ಆದಿಲಶಾಹಿ ಕಾಲದವಿರಬೇಕು. ಉರ್ದು ಲಿಪಿಯಲ್ಲಿ ಮುದ್ರಿಸಿದೆ ನೋಡಿರಿ" ಎಂದು ನನ್ನಷ್ಟೇ ಉತ್ಸುಕರಾಗಿ ನಿಂತಿದ್ದ ಮಾಸ್ತರರ ಕೈಗಿತ್ತೆ. ಅವರು ಕೈಯಲ್ಲೇ ತೂಗಿ ಅವುಗಳ ಭಾರದ ಅಂದಾಜು ಮಾಡುತ್ತ ತಲೆಯಾಡಿಸಿ ಮೂಕ ಆನಂದವನ್ನು ಕಣ್ಣುಗಳಿಂದಲೇ ವ್ಯಕ್ತಪಡಿಸಿದರು.

ಈ ಸಂತೋಷದ ಸಮಾಚಾರ ಇದೆಲ್ಲದಕ್ಕೆ ಮೂಲಕಾರಣನಾದ ಸಿದರಾಮಪ್ಪನೊಬ್ಬನಿಗೇ ಗೊತ್ತಿದ್ದಿಲ್ಲ. ಅವನು ಪಡಸಾಲೆಯಲ್ಲಿ ಅಂಜನ ಹಾಕಿಕೊಂಡು ಕೂತಿದ್ದನಲ್ಲ. ಸಂಭ್ರಮ ತಾಳಲಾರದೆ ನಾನು ನಾಣ್ಯಗಳೊಡನೆ ಪಡಸಾಲೆಗೆ ಧಾವಿಸಿದೆ. ಅವನ ಕೈಯಲ್ಲಿ ವರಹಗಳನ್ನು ಕೊಟ್ಟೆ.

ಇದರ ಪರಿಣಾಮ ಅತ್ಯಂತ ಅನಿರೀಕ್ಷಿತವಾಯಿತು. " ಅಯ್ಯೋ ಪಾಪಿಗಳಿರಾ, ನನ್ನನ್ನು ಮುಟ್ಟಿ ಮೈಲಿಗೆ ಮಾಡಿದಿರಾ ? " ಎಂದು ಚಿಟ್ಟನೆ ಚೀರಿ ಸಿದರಾಮಪ್ಪ ಎಚ್ಚರತಪ್ಪಿ ಬಿದ್ದ.

ಆ ಕ್ಷಣದಿಂದ ನಮ್ಮ ಸುವರ್ಣ ಶೋಧೋದ್ಯಮದ ವಿಪರೀತಗತಿ ಪ್ರಾರಂಭವಾದದ್ದು ಜಾರು ಬಂಡೆಯಿಂದ ಹೊರಟವರಂತೆ ತ್ವರಿತ ಗತಿಯಿಂದ ಪ್ರಪಾತಕ್ಕಿಳಿಯತೊಡಗಿತು. ಸಿದರಾಮನ ಚೀರಾಟ ಕೇಳಿ ಕರಿಯ ಮತ್ತು ಅವನ ತಮ್ಮ ಇಬ್ಬರೂ ಓಡಿಬಂದರು. ಎಲ್ಲರೂ ಸೇರಿ ಮೂರ್ಛೆ ಹೋದವನ ತಲೆಗೆ ನೀರು ತಟ್ಟಿ ಉಪಚರಿಸಿದೆವು. ಅವನಿಗೆ ಪ್ರಜ್ಞೆ ಬರಬೇಕಾದರೆ ಕೆಲವು ನಿಮಿಷಗಳೇ ಹಿಡಿದವು. ಅಷ್ಟು ಕಾಲ ಬಂಗಾರ ತುಂಬಿದ ಕೊಡವನ್ನೆತ್ತುವ ವಿಚಾರ ಎಲ್ಲರಿಗೂ ಮರೆತೇ ಹೋಗಿತ್ತು. ವೀರಭದ್ರಪ್ಪನೊಬ್ಬನೇ ದಿಗಂಬರನಾಗಿ ಶೇಷನಂತೆ ನಿಧಿಯನ್ನು ಕಾಯುತ್ತಿದ್ದ.

'' ಹಗ್ಗಾ ತರಿಸಿರಿ; ಕೊಡ ಬಹಳ ವಜನ ಅದೆ. ಕಂಟಕ್ಕೆ ಉರುಲು ಹಾಕಿ ಮೇಲೆ ಜಗ್ಗಬೇಕು'' ಎಂದು ಅವ ಕೂಗಿದ. ಕರಿಯಪ್ಪ ಹಗ್ಗ ತಂದು ಕೊಟ್ಟ. ವೀರಭದ್ರಪ್ಪ ಉರುಲು ಹಾಕಿ, " ಹೂಂ, ಜಗ್ಗಿರಿ " ಎಂದ. ಅಣ್ಣತಮ್ಮಂದಿರಿಬ್ಬರೂ ಮೇಲಿಂದ ಹಿಡಿದು ಜಗ್ಗಿ ಜೋಲಿಕೊಡುತ್ತಿದ್ದಂತೆ ಕಿವಿಗಡಚಿಕ್ಕುವ ಮತ್ತೊಂದು ಚೀತ್ಕಾರ ನಮ್ಮೆಲ್ಲರನ್ನು ನಡುಗಿಸಿತು.

'' ಹಾಂ ! ನನಗೆ ಪೂಜಿ ಮಾಡದೆ ಕೊರಳಿಗೆ ಉರ್ಲ ಹಾಕತೀರಾ ? ನಿಮ್ಮ ರಕ್ತ ಹೀರತೇನಿ! " ಸಿದರಾಮಪ್ಪ ವಿಕಾರವಾಗಿ ಕೂಗಿ ನೆಲ ಅಪ್ಪಳಿಸಿ ತಲೆ ಜಜ್ಜಿಕೊಂಡು ಕಣ್ಣು ಬೆಳ್ಳಗೆ ಮಾಡಿ ಸೆಟೆದು ಅಂಗಾತ ಬಿದ್ದುಬಿಟ್ಟ.

" ಸತ್ತು ಹೋದ!" ಎಂದು ಮಾಸ್ತರರು ಚೀರಿ

ಕೊಂಡರು. ನಾವೆಲ್ಲ ಅಪ್ರತಿಭರಾಗಿ ಕಲ್ಲಿನಂತೆ ನಿಂತಿದ್ದೆವು. ಮತ್ತೆ ವೀರಭದ್ರಪ್ಪನೇ ನಮಗೆ ಚಿನ್ನದ ನೆನಪು ತಂದುಕೊಟ್ಟವನು.

"ಈ ಬಂಗಾರಕ್ಕೆ ಒಂದು ಹಾರಾ (ಬಲಿ) ಕೊಡದೆ ಸ್ವಾಧೀನ ಆಗಾಕಿಲ್ಲ. ಅನಾಯಾಸ ಸಿದ್ದವೀರಪ್ಪ ಸತ್ತರೆ ಅವನನ್ನೇ ಕೊಡದ ಬದಲು ಈ ತಗ್ಗಿನಲ್ಲಿ ಹಾಕಿ ಮುಚ್ಚೋಣಂತೆ. ಅನುಮಾನ ಬ್ಯಾಡ. ಹೂಂ, ಜಗ್ಗಿರಿ!" ಎಂದನಾತ.

ಹೇಳಲು ನಾಚಿಕೆಯಾಗುತ್ತದೆ, ಧನಪಿಶಾಚಿ ನಮ್ಮನ್ನೆಲ್ಲ ಎಷ್ಟು ಮಂಕು ಮಾಡಿತ್ತೆಂದರೆ, ಸಿದರಾಮನ ಗೊಡವೆ ಬಿಟ್ಟೆವು. ಅಣ್ಣ ತಮ್ಮ ಹಗ್ಗ ಹಿಡಿದು ಜಗ್ಗತೊಡಗಿದರು. ಸಿದರಾಮಪ್ಪ ಸತ್ತಿದ್ದರೆ ನಾವು ಅವನನ್ನು ಹೊಂಡದಲ್ಲಿ ಹಾಕುತ್ತಿದ್ದೆವೊ ಇಲ್ಲವೊ ಎಂಬುದು ಇಲ್ಲಿ ಅಪ್ರಸ್ತುತ. ಅದರ ಪರೀಕ್ಷೆಯ ಸಂದರ್ಭವೇ ಬರಲಿಲ್ಲ. ಹಗ್ಗ ಹಿಡಿದು ಜೋರಾಗಿ ಎಳೆಯುತ್ತಿದ್ದಂತೆ ಒಮ್ಮೆಲೇ ಹಗ್ಗ ಹರಿದುಹೋಯಿತು. ಕರಿಯನ ಹಣೆ ಗೋಡೆಗೆ ಅಪ್ಪಳಿಸಿ ರಕ್ತ ಸೋರತೊಡಗಿತು. ಕಾಶಪ್ಪನ ಮುಂದಿನ ಎರಡು ಹಲ್ಲುಗಳು ಮುರಿದು ಬಾಯಿಂದ ನೆತ್ತರು ಸುರಿಯಿತು.

ಅಷ್ಟರಲ್ಲಿ ಸಿದರಾಮಪ್ಪನ ಆಕ್ರೋಶ ಮತ್ತೆ ಹೊರಟಿತು. "ನನಗೆ ಉರ್ಲು ಹಾಕಿದ ಪಾಪೀ, ನಿನ್ನ ವಂಶ ನಿರ್ವಂಶ ಮಾಡುವೆ! ಹ್ಯಾಗೈತಿ ನನ್ನ ಹೊಡತಾ! ಹ ಹ್ಹಾ ಹ್ಹಾ ಽಽ!" ಇಷ್ಟು ಕೂಗಿ ಅವನು ಮತ್ತೆ ಮೂರ್ಛಿತನಾದನು.

ನಾನು ಪಡಸಾಲೆಗೆ ಓಡಿದೆ. ಸಿದರಾಮನ ಅವಸ್ಥೆಯನ್ನು ಕಂಡು ನಾನು ನಿಜವಾಗಿಯೂ ಗಾಬರಿಯಾದೆ. ಅವನ ಮೈಯಲ್ಲಿ ಜೀವದ ಲಕ್ಷಣವೇನೂ ಕಾಣಿಸಲಿಲ್ಲ. ಉಸಿರು ನಿಂತು ಹೋಗಿತ್ತು. ಕೈಕಾಲು ಪ್ರೇತದಂತೆ ಸೆಟೆದು ಹೋಗಿದ್ದವು. ನನ್ನ ಹಿಂದೆ ಮಾಸ್ತರರೂ ಅವರ ಹಿಂದೆ ಹಣೆಯ ಗಾಯಕ್ಕೆ ಕೈಒತ್ತಿ ಹಿಡಿದ ಕರಿಯನೂ ಅವನ ಹಿಂದೆ ಜೊಲ್ಲು ರಕ್ತ ಸುರಿಸುವ ಕಾಶಪ್ಪನೂ ಬಂದು ನಿಂತರು. ಯಾರಿಗೂ ಏನೂ ತೋಚಲಿಲ್ಲ. ಬೆಳಗಿನ ಮೂರು ಗಂಟೆಯ

ಹೊತ್ತು. ಸಂಶಯಾಸ್ಪದವಾದ ಹೊಂಡ. ಆಕ ಸ್ಮಿಕವಾಗಿ ಅಕಾರಣವಾಗಿ ನಿಧನಹೊಂದಿದ ಮನುಷ್ಯ. ನಾವು ನಾಲ್ಕು ಜನ ಈ ಊರಿಗೆ ಬಂದಿ ದ್ದೇವೆಂಬುದಕ್ಕೆ ವಿಪುಲ ಸಾಕ್ಷಿ. ಕ್ರಿಮಿನಲ್ ಕಾಯದೆಯಲ್ಲಿ ಪಾರಂಗತರಲ್ಲದವರಿಗೂ ಇದೆಲ್ಲ ದರ ತಾತ್ಪರ್ಯ— ಪರಿಣಾಮ ಹೊಳೆಯಲು ತಡ ವಾಗಲಿಲ್ಲ. ನನಗೆ ಚಿನ್ನದ ಆಶೆ ಸಂಪೂರ್ಣ ಗುಣವಾಗಿ ಹೋಗಿತ್ತು. ಉಳಿದವರ ಮುಖ ಗಳೂ ಅದೇ ಭಾವವನ್ನು ನಿಸ್ಸಂದಿಗ್ಧವಾಗಿ ವ್ಯಂಜಿಸುತ್ತಿದ್ದವು.

ಸಿದರಾಮಪ್ಪನನ್ನು ಸರಿಯಾಗಿ ಮುಟ್ಟಿ ಅಲು ಗಾಡಿಸುವ ಧೈರ್ಯವಾದರೂ ನಮಗೆಲ್ಲಿ? ಮೊದಲೇ ರಕ್ತಕಾರಿಸುವ ಪ್ರತಿಜ್ಞೆ ಮಾಡಿತ್ತು ದೇವರು. ಆದರೂ ನಿರ್ವಾಹವಿಲ್ಲ. ನಾವು ಬಲು ಎಚ್ಚರಿಕೆ ಯಿಂದ ಅವನ ತಲೆಗೆ ನೀರು ತಟ್ಟಿ ಗಾಳಿ ಹಾಕಿ ದೆವು. ಊಂಹೂಂ, ಅವನು ಉಸಿರು ಸಹಿತ ಸರಿಯಾಗಿ ಆಡಿಸುತ್ತಿಲ್ಲ.

ಹೊರಗೆ ಹೊಂಡದಲ್ಲಿ ಕುಳಿತ ನಗ್ನಪಿಶಾಚಿ ಇಷ್ಟಾದರೂ ಅಲ್ಲಿಂದ ಅಲುಗಿರಲಿಲ್ಲ. ಬದಲಿಗೆ ಮತ್ತೆ, "ಹೂಂ ಗಡಾನ ಬರ್ರಿ. ಅವನ ಚಿಂತೆ ಯಾಕ? ಕೊಡ ಕೈಗೆ ಬಂದದ, ಬಿಡತೀರಾ? ಹೂಂ, ಜಗ್ಗರಿ" ಎಂದು ಅವನು ಅವಸರಪಡಿಸು ತ್ತಿದ್ದ. ಇವನು ನಿಜವಾದ ವೀರಭದ್ರ ಎಂದು ಕೊಂಡೆ ನಾನು.

ಕರಿಯ ಮೆಲ್ಲಗೆ ಒಣಗಿದ ನಾಲಗೆಯಿಂದ "ಮುಂದ ಹ್ಯಾಂಗ ಮಾಡೋನು?" ಎಂದು ನನ್ನನ್ನು ಕೇಳಿದ.

ನನ್ನ ಕಣ್ಣಮುಂದೆ ಆಗಲೆ ಫಾಶಿಯ ಉರುಲು ನನ್ನನ್ನು ಕರೆಯುತ್ತಿರುವ ದೃಶ್ಯ ಕುಣಿದಾಡು ತ್ತಿತ್ತು. ನಾನು ಅಷ್ಟೇ ನೀರಿಲ್ಲದ ದನಿಯಿಂದ "ಮಾಡೋದೇನು? ಕೊಡಾ ಇದ್ದಲ್ಲೇ ಇರಲಿ ತಗ್ಗು ಮುಚ್ಚಿಬಿಡುವಾ. ಇವನೊಬ್ಬ ಬದುಕಿ ದರೆ ನೂರು ಕೊಡ ಸಿಕ್ಕಿದ ಹಾಗೆ" ಎಂದೆ.

ನನ್ನೀ ಸೂಚನೆಗೆ ಒಬ್ಬನೂ ಪ್ರತಿ ಆಡಲಿಲ್ಲ. "ತಗ್ಗು ಮುಚ್ಚಿಬಿಡು ವೀರಭದ್ರಪ್ಪಾ, ಸಾಕು ಕೊಡದ ಸಂಗತಿ." ವೀರಭದ್ರಪ್ಪ ಈ ಸೂಚನೆಗೆ ಸುಲಭವಾಗಿ ಒಪ್ಪಲಿಲ್ಲ. ತನ್ನ ಪಾಲು ಮುಳ

ಗಿಸಲು ಹೀಗೆಲ್ಲ ನಟಿಸುತ್ತೀರಿ ಅಂದ. ಕರಿಯಪ್ಪ "ಎಲ್ಲವನ್ನೂ ನೀನೇ ತೆಗೆದುಕೋ ಮಹಾರಾಯ. ಮೊದಲು ಸಿದರಾಮಪ್ಪ ಬದುಕಲಿ" ಎಂದು ಹೇಳಿದ ಮೇಲೆ ಅರೆಮನಸಿನಿಂದಲೇ ಎಂಬಂತೆ, "ಹಿಂದಾಗಡೆ ನನಗೆ ಶಬ್ದ ಕೊಡಬೇಡಿರಿ. ನೀವು ಹೇಳಿದ ಪ್ರಕಾರ ಮಣ್ಣು ಮುಚ್ಚತೀನಿ," ಎಂದು ಆ ಮೊಹರುಗಳನ್ನು ಇಸಕೊಂಡು ಇದ್ದಲ್ಲಿಯೇ ಹಾಕಿ ಕಲ್ಲನ್ನು ಅದರ ಮೇಲೆ ಎಳೆದು ಮೇಲೆ ಬಂದು ಮಣ್ಣು ಮುಚ್ಚ ತೊಡಗಿದ.

ಅಷ್ಟರಲ್ಲಿ ಸಿದರಾಮಪ್ಪ ಮತ್ತೆ ಚೀರಾಟ ಪ್ರಾರಂಭಿಸಿದ್ದರಿಂದ ನಾವು ಪಡಸಾಲೆಗೆ ಹೋದೆವು. ವೀರಭದ್ರ ಒಬ್ಬನೇ ಹೊಂಡ ಮುಚ್ಚಿ ದೊಡ್ಡ ಗೊಂಗಡಿ ಹೊದ್ದು ಹೊರಗೆ ಬಂದ.

ದೇವರು ಮತ್ತೆ ನುಡಿಯತೊಡಗಿತ್ತು: "ನನಗೆ . . . . ಎಂಟು ಕಾಲಿನ ಬ್ಯಾಟಿ (ಬೇಟೆ) ಎಂಟು ತೊಲಿ ಕಸ್ತೂರಿ, ಎಂಟು ತೊಲಿ ಕೇಶರ ಎಂಟು ತೊಲಿ ಗೋರೋಚನ, ಎಂಟು ಹಾಲು ಮೊಲಿ ಮುತ್ತೈದೇರಿಗೆ ಊಟ, ಎಂಟು . . . . . .(ಹೀಗೆ ಇನ್ನೂ ಎಷ್ಟೋ ಎಂಟುಗಳು) ಪೂಜಿ ಮಾಡಿ, ಮುಂದಿನ ಅಮಾಸಿ ದಿನ ಮತ್ತ ಕೈ ಹಚ್ಚರೀ. ನಾ ನಿಮ್ಮ ಸ್ವಾಧೀನ ಆಕ್ಕೇನಿ... "

"ಆಗಲಿ ಮಹಾತಾಯಿ!" ಎಂದು ನಾವೆಲ್ಲ ಉಸಿರುಗರೆದೆವು.

ಮತ್ತೆ ಸೆಟೆದುಬಿದ್ದ ಸಿದರಾಮ. ಸ್ವಲ್ಪ ಉಪಚರಿಸಿದ ಮೇಲೆ ಕಣ್ಣು ತೆರೆದ. ನನಗಂತೂ ಅವನು ಜೀವಂತನಾಗಿ ಕಣ್ಣು ತೆರೆದದ್ದು ಕಂಡು ಕೊಡ ಸಿಕ್ಕಿದ್ದಕ್ಕಿಂತ ಆನಂದವಾಯಿತು. ಕೋಳಿ ಕೂಗಿತು. ಸಿದರಾಮಪ್ಪ ಎದ್ದು ಕೂತು ಒಂದು ತಂಬಿಗೆ ನೀರು ಕೇಳಿ ಕುಡಿದು, "ಹುಶ್ಯಪ್ಪಾ" ಎಂದು, ಏನೇನು ನಡೆಯಿತೆಂದು ವಿಚಾರಿಸಿದ. ದೇವರ ಅಪ್ಪಣೆಯನ್ನು ತಿಳಿಸಿದಾಗ "ಹಾಂಗಾದರೆ ಕರಿಯಪ್ಪ, ಇದಕ್ಕೆ ಒಂದು ಸಾವಿರದ ತನಕ ಖರ್ಚಿಗೆ ಬೇಕು. ಅಷ್ಟು ಹೊಂದಿಸಿಕೊಂಡು ವಿಜಾಪುರಕ್ಕೆ ಮುಂದಿನ ವಾರ ಬಾ. ದೇವರು ಹೇಳಿದ ಸಾಮಾನಾ ಕೆಲವು ಹೈದರಾಬಾದದಾಗೇ ಸಿಗತಾವ. ಅಲ್ಲಿಗೆ ಹೋಗೋಣ," ಎಂದು ಸೂಚಿಸಿದ.

ಬೆಳಕು ಹರಿಯುವ ಮೊದಲೇ ನಾವು ಅಲ್ಲಿಂದ ಕಾಲ್ದೆಗೆದೆವು. ವಿಜಾಪುರ ತಲಪಿದಾಗ ನಮಗೆ ತೀರ ಆಯಾಸವಾಗಿತ್ತು. ಚಿನ್ನದ ಆಶೆಯ ಮೊದಲ ಹುರುಪೆಲ್ಲ ಇಳಿದುಹೋಗಿತ್ತು. ಆದರೂ ಒಂದು ಆಶಾಬಂಧವನ್ನು ದೇವರು ಮತ್ತೆ ಸೃಷ್ಟಿಸಿಟ್ಟಿತ್ತು.

ಮುಂದಿನ ವಾರ ಕರಿಯಪ್ಪ ಒಂದು ಸಾವಿರ ರೂಪಾಯಿ ಕೂಡಿಸಿಕೊಂಡು ನನ್ನಲ್ಲಿಗೆ ಬಂದ. ಸಿದರಾಮನ ಮೇಲಿನ ಅವನ ವಿಶ್ವಾಸ ತುಸು ಕುಂದಿತ್ತು. ಆದ್ದರಿಂದ ನಾನು ಅವನೊಡನೆ ಹೈದರಾಬಾದಿಗೆ ಹೋಗಬೇಕೆಂದು ಒತ್ತಾಯ ಪಡಿಸಿದ.

ನಾನು ಮಾಸ್ತರರನ್ನು ಕೇಳಿದೆ. ಅವರು, "ಕರಿಯಪ್ಪನ ಮನೆ ಮುಳುಗಿಸಿದ ಪಾಪ ನಮಗ ಬೇಡ. ಸುಮ್ಮನೆ ಅವನ ರೂಪಾಯಿ ಅವನಿಗಿತ್ತು ತಿರುಗಿ ಕಳಿಸಿಬಿಡು" ಎಂದರು.

ನಾನು ಆಶ್ಚರ್ಯದಿಂದ ಕಾರಣ ವಿಚಾರಿಸಿದೆ. ಇಡೀ ಯೋಜನೆಯೇ ದೊಡ್ಡ ಮೋಸ. ಈ ಸಿದ್ದಪ್ಪ ಆ ವೀರಪ್ಪ ಸೇರಿ ಇದೊಂದು ಧಂದೆಯೇ ಮಾಡಿಕೊಂಡಿದ್ದಾರೆ, ಎಂದರವರು. ಆ ಮೇಲೆ ಅವರು ಇಡೀ ನಾಟಕದ ಸ್ವರೂಪವನ್ನು ಬಿಚ್ಚಿದರು. ದೇವರು ಮೈಮೇಲೆ ಬರುವದು ನಟನೆ, ಗಾಳ. ಅದಕ್ಕೆ ಸಿಕ್ಕಿದ ಮೀನುಗಳನ್ನು ಇವರು ಕುಣಿಸಿ ಹಣ ಸುಲಿಯುತ್ತಾರೆ. ಸಿದರಾಮ ಮತ್ತು ವೀರಭದ್ರ ಸಮಗಾರರಲ್ಲಿ ಮಾಡುತ್ತಿದ್ದುದು ತಾಮ್ರದ ಕಂಟವೊಂದಕ್ಕೆ ತಳತಳಿಸುವಂತೆ ಬಂಗಾರದ ನೀರು ಹಚ್ಚಿದ ಚರ್ಮ ಬಿಗಿಸುವ ಹಿಕಮತ್ತು. ನಮಗೆ ತೋರಿಸಿದ ನಾಣ್ಯಗಳು ಸೀಸದ ಬಿಲ್ಲೆಗಳಿಗೆ ಬಂಗಾರದ ವರಕ ಹಚ್ಚಿದವು. ಬತ್ತಲೆ, ತೊಪ್ಪಲ, ನೋಡಬಾರದು ಇವೆಲ್ಲ ಈ ಮೋಸದ ಸರಕುಗಳನ್ನು ಗೊತ್ತಾಗದಂತೆ ತರುವ ಆಟ. ಹಗ್ಗ ಹಾಕಿ ಜಗ್ಗಿದರೂ ಕೊಡಬಾರದಿರಲು ಕಾರಣ ಕೊಡವೇ ಇಲ್ಲದ್ದು (ಅಲ್ಲಿದ್ದದ್ದು ಬರಿ ಕಂಟ ಮಾತ್ರ); ಮತ್ತು ವೀರಭದ್ರ ಅದನ್ನು ಗಟ್ಟಿಯಾಗಿ ಹಿಡಿದುಕೊಂಡದ್ದು. ಅದು ಹರಿದದ್ದು ಅವನು ಅದನ್ನು ಕೊಯ್ದದ್ದರಿಂದ.

ಕ್ರಂದನ ಮೂರ್ಛೆ ದೇವರ ಮುಡಿಕಟ್ಟು ಎಲ್ಲ ಒಂದು ಸಾವಿರ ರೂಪಾಯಿ ಎಳೆಯುವ ಉಪಾಯಗಳು.

"ನಿಮಗೆ ಹೇಗೆ ತಿಳಿಯಿತು, ಮಾಸ್ತರೆ?" ಎಂದು ನಂಬಲಾರದೆ ಕೇಳಿದೆ.

"ಸಿದರಾಮಪ್ಪನೇ ಹೇಳಿದ. ಸಾವಿರ ರೂಪಾಯಿ ಎಬ್ಬಿಸುವ ಹಂಚಿಕೆ ಗಟ್ಟಿಮಾಡಲು ನನ್ನ ಸಹಾಯವನ್ನು ಬೇಡಿದ. ನನ್ನ ಅಡ್ಡ ಸವಾಲುಗಳಿಗುತ್ತರವಾಗಿ ಸತ್ಯ ಹೊರಬಂತು."

"ಆದರೆ ಆ ಕಂಚಿನ ಬಟ್ಟಲು ತಾನಾಗಿ ಹೇಗೆ ಸರಿಯಿತು?"

"ಅದೋ? ಸ್ವಲ್ಪ ಮನಶ್ಶಾಸ್ತ್ರ, ಸ್ವಲ್ಪ ಮೋಹಿನಿಶಾಸ್ತ್ರ ಗೊತ್ತಿದ್ದರೆ ನೀನೂ ಬಟ್ಟಲ ಸರಿಸಬಹುದು. ಒಂದು ವಿಶಿಷ್ಟ ಕಾಮನೆಯಿಂದ ಗಂಭೀರ ವಾತಾವರಣದಲ್ಲಿ ಪದಾರ್ಥಗಳನ್ನು ಹಿಡಿದರೆ ಮೋಹಿನಿಶಾಸ್ತ್ರ ಬಲ್ಲವನು ಯಾವ ಪದಾರ್ಥವನ್ನೂ ಹೀಗೆ ಚಲಿಸುವಂತೆ ಮಾಡಬಲ್ಲ. ಆದರೆ ನಾನಿಷ್ಟು ದೊಡ್ಡ ಮೂರ್ಖ ಹೇಗಾದೆ ಎಂಬುದೇ ನನ್ನ ಆಶ್ಚರ್ಯ."

ನಿಧಿ ಅಗೆಯುವ ಹವ್ಯಾಸವನ್ನು ಇಂದಿನಿಂದ ಬಿಟ್ಟೆ ಎಂದು ಅಂದು ಅವರ ಮುಂದೆ ಪ್ರಮಾಣ ಮಾಡಿ ಹೇಳಿದೆ. ಅನಂತರ ಯಾವ ದೇವರೂ ನನ್ನ ಗೊಡವೆಗೆ ಬಂದಿಲ್ಲ.

ಕರಿಯ ಸೊಂಡೆ ಒಣಗಿಸಿಕೊಂಡು ಹಣ ಸಹಿತ ತಿರುಗಿಹೋದ. ನನ್ನ ಸ್ಥಿತಿ ಒಮ್ಮೆಲೇ ಟಾಯರಿನ ಗಾಳಿಹೋದ ಮೋಟಾರಿನಂತಾಯಿತು. ಮರುದಿನವೇ ನನಗೆ ಜ್ವರ ಬಂತು. ಎರಡು ವಾರ ಬಿಡಲಿಲ್ಲ. ಮೆಟ್ರಿಕ್ ಪರೀಕ್ಷೆ ಆ ವರ್ಷ ನನ್ನನ್ನು ತಪ್ಪಿಸಿಕೊಂಡಿತು. ಚಿನ್ನದ ಶೋಧದಿಂದಾದ ಲಾಭವೆಂದರೆ ನನ್ನ ಒಂದು ವರ್ಷ ದಂಡವಾದದ್ದು.



## ಮೊದಲೇ ಬಂದಿದ್ದರೆ ಚೆನ್ನಾಗಿತ್ತು!

ಸಂಸ್ಕೃತ ಸಾಹಿತ್ಯದಲ್ಲಿ ಅತಿಕ್ಲಿಷ್ಟವಾದ ಮತ್ತು ಬಹು ದೊಡ್ಡದಾದ ಮಹಾಕಾವ್ಯ "ನೈಷಧ" ವನ್ನು ಬರೆದಾದ ಮೇಲೆ, ತನ್ನ ಕಾವ್ಯಕ್ಕೆ ದೊಡ್ಡವರ "ಆಶೀರ್ವಾದ" ಪಡೆಯಬೇಕೆಂದು ಶ್ರೀಹರ್ಷನು "ಸಾಹಿತ್ಯ ಪ್ರಕಾಶ"ವೆಂಬ ಲಕ್ಷಣ ಗ್ರಂಥವನ್ನು ಬರೆದು ಹಿರಿಯ ಸಾಹಿತ್ಯಾಚಾರ್ಯ ಮಮ್ಮಟಗೆ ತನ್ನ ಗ್ರಂಥವನ್ನು ತೋರಿಸಿದನು. ಆಚಾರ್ಯರು ಆಮೂಲಾಗ್ರವಾಗಿ ಕಾವ್ಯವನ್ನು ಓದಿ ನೋಡಿದರು. ಪ್ರಶಂಸೆಯ ಒಂದೆರಡು ಮಾತುಗಳನ್ನು ಅವರಿಂದ ಕೇಳಬೇಕೆಂದು ಕವಿಯು "ಹೇಗಿದೆ?" ಎಂದು ಕೇಳಿದನು.

"ನೀನು ಬಂದುದು ಸ್ವಲ್ಪ ವಿಳಂಬವಾಯಿತು. ಮೊದಲೇ ಬಂದಿದ್ದರೆ ಚೆನ್ನಾಗಿತ್ತು."

"ಅದೇನು ಹಾಗೆನ್ನುತ್ತೀರಿ?"

"ಇನ್ನೇನೂ ಇಲ್ಲ. ನಾನು ಬರೆದ ಸಾಹಿತ್ಯಪ್ರಕಾಶದಲ್ಲಿ ದೋಷಪ್ರಕರಣವೊಂದಿದೆ. ಅದರಲ್ಲಿ ಕಾವ್ಯದಲ್ಲಿ ಬರುವ ದೋಷಗಳನ್ನೆಲ್ಲ ವಿವರಿಸಿ, ಎಲ್ಲೆಲ್ಲಿಂದಲೋ ಹುಡುಕಿ ಉದಾಹರಣೆಗಳನ್ನು ಕೊಟ್ಟಿದ್ದೇನೆ. ನಿನ್ನ ಕಾವ್ಯ ಮೊದಲೇ ಕೈಗೆ ಬಂದಿದ್ದರೆ, ಎಲ್ಲ ದೋಷಗಳೂ ಸುಲಭವಾಗಿ ಒಂದೇ ಕಡೆಗೆ ಸಿಗುತ್ತಿದ್ದವು."

—ಕೃ. ಭ. ಪೆಲ್ಲ್

ನೀವು ಮಕ್ಕಳಿಗೆ ಪಾಠ ಹೇಳದಿದ್ದರೂ
ಅವರು ನಿಮ್ಮಿಂದ ಕಲಿಯುತ್ತಾರೆ.

# ಮಕ್ಕಳಿದ್ದವರೆಲ್ಲ ಶಿಕ್ಷಕರೇ!

ಮುಂದೆ ಪ್ರಸಿದ್ಧ ಇಂಗ್ಲೀಷ್ ಕವಿಯಾಗಲಿದ್ದ ರಾಬರ್ಟ ಬ್ರೌನಿಂಗನಿಗೆ ಆಗಿನ್ನೂ ಐದು ವಯಸ್ಸು; ತನ್ನ ತಂದೆ ಏನನ್ನೋ ಓದುತ್ತಿರುವದು ಅವನಿಗೆ ಕಂಡಿತು. "ಏನು ಓದುತ್ತೀ ಅಪ್ಪ?" ಎಂದು ಅವನು ಕೇಳಿಯೇ ಬಿಟ್ಟ. ಅವನ ತಂದೆ ಪುಸ್ತಕದಿಂದ ನೆಟ್ಟ ನೋಟವನ್ನು ಬದಲಿಸುತ್ತ "ಟ್ರಾಯಿಯ ಮುತ್ತಿಗೆ" ಎಂದು ಹೇಳಿ ತನ್ನ ಓದನ್ನು ಮುಂದುವರಿಸಲಿದ್ದ.

ಅಷ್ಟರಲ್ಲಿ "ಟ್ರಾಯಿಯೆಂದರೇನು?" ಎಂದು ರಾಬರ್ಟ್ ಮತ್ತೆ ಕೇಳಿದ.

ಇಂಥ ಸಂದರ್ಭದಲ್ಲಿ ಎಷ್ಟೋ ತಂದೆಯರು, "ಟ್ರಾಯಿಯೆಂದರೆ ಏಶಿಯದಲ್ಲಿರುವ ಒಂದು ನಗರ; ಇನ್ನು ಹೋಗು; ಹೊರಗೆ ಆಡುತ್ತಿರು," ಎಂದು ಮಗುವನ್ನು ಕಳಿಸಿಬಿಡುತ್ತಿದ್ದರು.

ಆದರೆ ರಾಬರ್ಟನ ತಂದೆ ಹಾಗೆ ಮಾಡಲಿಲ್ಲ. ತನ್ನ ಕೋಣೆಯ ಕುರ್ಚಿಮೇಜುಗಳನ್ನೇ ಸೇರಿಸಿ ಅವನು ಒಂದು ನಗರವನ್ನು ಕಟ್ಟಿದ. ಅದರ ಮೇಲೆ ಇನ್ನೊಂದು ಕುರ್ಚಿಯಿಟ್ಟು ಆ ಸಿಂಹಾಸನದಲ್ಲಿ ಎಳೆಯ ರಾಬರ್ಟನನ್ನು ಕೂರಿಸಿ, "ಇದೀಗ ಟ್ರಾಯಿ; ನೀನು ಅದರ ದೊರೆ ಪ್ರಿಯಾಂ. ನೋಡು; ಇವಳು ಟ್ರಾಯಿಯ ಸುಂದರೀಮಣಿ, ಹೆಲೆನ್" ಎನ್ನುತ್ತ ಪಾದಪೀಠದ ಕೆಳಗಿರುವ ಬೆಕ್ಕಿನ ಮರಿಯನ್ನು ತೋರಿಸಿದನು.

ಮತ್ತೆ, "ಹೊರಗಡೆ ಅಂಗಳದಲ್ಲಿ ಇರುವ ದೊಡ್ಡ ನಾಯಿಗಳು ಒಳನುಗ್ಗಿ ಈ ಹೆಲೆನಳನ್ನು ಹಿಡಿಯಲು ಪ್ರಯತ್ನಿಸುತ್ತಿವೆಯಲ್ಲ? ಅವು ಮುತ್ತಿಗೆ ಹಾಕಿದ ಅರಸರು—ಅಗಾಮೆಮ್ನೊನ್ ಮತ್ತು ಮೆನೆಲಾಸ್. ಅವರೀಗ ಹೆಲೆನಳನ್ನು ಅಪಹರಿಸುವ ಸಲುವಾಗಿ ಟ್ರಾಯಿಯನ್ನು ಮುತ್ತುತ್ತಾರೆ" ಎಂದು ಅವನು ರುಚಿಕರವಾಗುವಂತೆ ರಾಬರ್ಟನಿಗೆ ತಿಳಿಯುವಂಥ ಭಾಷೆಯಲ್ಲಿ ಗ್ರೀಕ ಪುರಾಣದ ಟ್ರಾಯಿನಗರದ ಮುತ್ತಿಗೆಯ ಕಥೆ ಹೇಳಿದನು.

ಅನಂತರ ರಾಬರ್ಟನಿಗೆ ಏಳೆಂಟು ವರ್ಷಗಳಾದಾಗ ತಂದೆ "ಇಲಿಯಡ್" ಕಾವ್ಯದ ಭಾಷಾಂತರವನ್ನು ಮಗನಿಗೆ ಕೊಟ್ಟು ಆ ಕಾವ್ಯವನ್ನು ಆದಷ್ಟು ಬೇಗನೆ ಗ್ರೀಕಿನಲ್ಲಿಯೆ ಓದುವಂತೆ ಪ್ರೋತ್ಸಾಹಿಸಿದನು.

ಹೀಗೆ ಮಗುವಿನ ಪ್ರಶ್ನೆಗಳನ್ನು ಕಡೆಗಣಿಸದೆ ಉಪಯೋಗಿಸಿಕೊಂಡು ಅದರಂತೆಯೇ ಮಗುವಿನ ಕಲಿವಾತುರವನ್ನು ಹೆಚ್ಚಿಸಿ ರಾಬರ್ಟನಿಗೆ ಗ್ರೀಕ ಭಾಷೆ ಮತ್ತು ಕಾವ್ಯಗಳನ್ನು ಕಲಿಸಲು ಅವನ ತಂದೆ ಸಮರ್ಥನಾದನು.

ನಮಗೆ ಇಷ್ಟವಿರಲಿ ಬಿಡಲಿ, ಮಕ್ಕಳ ಪಾಲಕರಾದೊಡನೆ ನಾವು ಅವರಿಗೆ ಒಂದಲ್ಲ ಒಂದು ರೀತಿಯಲ್ಲಿ ಕಲಿಸುತ್ತಲೇ ಇರುತ್ತೇವೆ. ನೀವು ಮಕ್ಕಳಿಗೆ ಹೊಡೆಯಿರಿ, ಅತಿಯಾಗಿ ಲಾಲನೆ ಮಾಡಿರಿ; ಅವರನ್ನು ಅನಾದರಿಸಿರಿ, ಅವರ ವಿಷಯವಾಗಿ ಬಹಳ ಹಚ್ಚಿಕೊಂಡು ತಲೆ ಕೆಡಿಸಿಕೊಳ್ಳಿರಿ; ಅವರನ್ನು ಮನವಾರೆ ಪ್ರೀತಿಸಿರಿ ಅಥವಾ ದ್ವೇಷಿಸಿರಿ, ಏನೇ ಮಾಡಿದರೂ ನೀವು ಅವರಿಗೆ ಕಲಿಸುತ್ತಲೇ ಇರುತ್ತೀರಿ. "ಏನು?" ಎಂದಿಷ್ಟೇ ಮಗುವನ್ನು ಮಾತನಾಡಿಸಿ ಪ್ರತಿ ಸಂಜೆ ಹತ್ತಿರದ

ಪ್ರೊ. ಗಿಲ್ಬರ್ಟ ಹೈಟರರ ಪುಸ್ತಕದಿಂದ

ಗಡಂಗಿಗೆ ಹೋಗುವ ತಂದೆ ಕೂಡ ಮಗುವಿಗೆ ಕಲಿಸುತ್ತಿರುತ್ತಾನೆ. ಇದರಿಂದ ಕುಡಿದು ತನ್ನ ಹೊಣೆಗಾರಿಕೆಯನ್ನು ಮರೆಯಲು ಮಗುವಿಗೆ ಅವನು ಕಲಿಸುತ್ತಿರಬಹುದು, ಅಥವಾ ಕಲಿಸದಿರಬಹುದು; ಆದರೆ ಒಳಿತನ್ನೋ ಕೆಡುಕನ್ನೋ ಅವನು ತನ್ನ ಮಗನಿಗೆ ಕಲಿಸುತ್ತಿರುತ್ತಾನೆಂಬುದು ಮಾತ್ರ ನಿಜ.

ಇಂಥ ಕಲಿಸುವಿಕೆಯು ದೇವರೆಲ್ಲಿ? ಎಂಬಲ್ಲಿಂದ ತೊಡಗಿ ಸಾಬೂನಿನ ಉಪಯೋಗದವರೆಗೆ ವಿಶ್ವವ್ಯಾಪಿಯಾಗಿರಬಹುದು. ಮಕ್ಕಳಿಗೆ ಈ ಜಗತ್ತು ಹೊಸತು, ಅಪರಿಚಿತ ಮತ್ತು ಕೌತುಕಮಯ; ಅವರು ಸಾವಿರಾರು ಪ್ರಶ್ನೆಗಳನ್ನು ಕೇಳುವರು. ಆಗ ಅವರಿಗೆ ಕಲಿಸಲು ಉಲ್ಲಾಸಕರ ಸಂದರ್ಭಗಳು ಸಿಗುತ್ತವೆ. ಒಂದು ಮಗು ರೇಲುಗಾಡಿಯ ಹೊರಗೆ ಇಣಿಕಿ "ತಂತಿಗಳು ಮೇಲೂ ಕೆಳಗೂ ಯಾಕೆ ಹೋಗುತ್ತವೆ?" ಎಂದ ಪ್ರಶ್ನಿಸಿದಾಗ, ''ನನ್ನ ಜೀವ ಯಾಕೆ ಹಿಂಡುತ್ತಿ?'' ಎಂದು ನೀವು ಗದರಿಸಿದರೆ, ಅಥವಾ "ಗಾಡಿಯ ವೇಗ" ಎಂದು ಮೊಟಕು ಉತ್ತರವಿತ್ತರೆ, ಮಗು "ದೊಡ್ಡವರೆಲ್ಲ ಸಿಡುಕರು ಅವರಿಗೆ ತಾಳ್ಮೆಯಿಲ್ಲ" ಎಂದು ತೀರ್ಮಾನಿಸಿಬಿಡುತ್ತದೆ. ಅನಿವಾರ್ಯವಾಗಿ ಜಗತ್ತಿನ ಮೇಲೆ ಅದರ ಆಶೋತ್ತರ ಕಡಿಮೆಯಾಗುತ್ತದೆ; ಕಲಿಯುವ ಆಸಕ್ತಿಯನ್ನು ಅದು ಕಳೆದುಕೊಳ್ಳುತ್ತದೆ. ''ರೇಲು ಗಾಡಿಯೆಲ್ಲಿಂದ ಬರುತ್ತದೆ?" ಎಂದು ಮಕ್ಕಳು ಕೇಳಿದರೆ ಅವರಿಗೆ ಸರಿಯಾಗಿ ಉತ್ತರ ಹೇಳಿರಿ; ನಿಮಗೆ ಗೊತ್ತಿಲ್ಲವಾದರೆ ಹಾಗೇ ಹೇಳಿರಿ, ಮತ್ತೆ ತಿಳಿದುಕೊಂಡು ಹೇಳುವುದಾಗಿ ವಚನಕೊಡಿರಿ. ಹೊತ್ತಲ್ಲದ ಹೊತ್ತಿನಲ್ಲಿ ಅವರೇನಾದರೂ ಪ್ರಶ್ನಿಸಿದರೆ "ಈಗ ಬೇಡ. ಇನ್ನೊಮ್ಮೆ ಕೇಳು. ಊಟಮಾಡುವಾಗ ಹೇಳುವೆ ಆಗದೆ?'' ಎಂದು ಅವರನ್ನು ಸಮಾಧಾನಗೊಳಿಸಬೇಕು.

ಲೋಕಪ್ರಖ್ಯಾತ ಮಹಾಪುರುಷರ ತಂದೆಯರ ಬಗ್ಗೆ ಒಂದು ಪುಸ್ತಕವನ್ನೇ ಬರೆಯಬಹುದು. ತಮ್ಮ ಮಕ್ಕಳನ್ನು ಕಡೆಗಣಿಸುವ ಮೂಲಕ ಅವರಿಗೆ ಪಾಠ ಕಲಿಸಿದವರೆಷ್ಟೋ ಮಂದಿ; ತಮ್ಮ ಮಕ್ಕಳನ್ನು ಯಾವಾಗಲೂ ಹೆದರಿಸುವ ಅಥವಾ

ಮನೋಭಂಗಮಾಡುವ ಮೂಲಕ ಪಾಠ ಕಲಿಸಿ
ವರೆಷ್ಟೋ ಮಂದಿ; ಅವರ ಗೆಳೆಯರಂತೆ ವರ್ತಿ
ಸುವ ಮೂಲಕ ಅವರಿಗೆ ಶಿಕ್ಷಣವಿತ್ತವರೆಷ್ಟೋ
ಮಂದಿ. ಒಳ್ಳೆಯ ಗಾಯಕನಾಗಿದ್ದ ಮೋಜಾ
ರ್ಟನ ತಂದೆ ಮಗನಿಗೆ ಏಳು ವರ್ಷದವನಿರುವಾ
ಗಲೇ ಸುನೀತಗಳನ್ನು ಬರೆಯಲು, ೧೨ ನೇ ವರ್ಷ
ದಲ್ಲಿಯೇ ಗೀತನಾಟಕ ಬರೆಯಲು ಕಲಿಸಿದ್ದನು

ನೆಪೋಲಿಯನ್ನನ ದಿಗ್ವಿಜಯ ಯಾತ್ರೆಗೆ ತ
ಹಾಕಿದ ಬ್ರಿಟಿಶ ಮುತ್ಸದ್ದಿ ಪಿಟ್, ತನ್ನ ತಂದೆ
ಯಿಂದ ಚೆನ್ನಾಗಿ ವಿದ್ಯಾಭ್ಯಾಸ ಹೊಂದಿದ್ದನು
ಅವನು ಹಿಂದಿನ ದೊಡ್ಡ ವಾಗ್ಮಿಗಳ ಭಾಷ
ಗಳಿಂದ ಕೆಲಭಾಗಗಳನ್ನು ಭಾಷಾಂತರ ಮಾಡಿ
ಪಿಟ್ಟನಿಂದ ಗಟ್ಟಿಯಾಗಿ ಹೇಳಿಸುತ್ತಿದ್ದನು. ಆದ
ಆ ಶಿಕ್ಷಣ ಶಿಕ್ಷೆಯೆನಿಸುತ್ತಿರಲಿಲ್ಲ. ತಂದೆಯ
ಇದಕ್ಕೊಂದು ಸ್ಪರ್ಧೆಯನ್ನೇರ್ಪಡಿಸಿ ಮಗನಲ್ಲಿ
ಹುರುಪುಂಟುಮಾಡಿದ್ದ. ಅದರಲ್ಲಿ ತಾನೇ ಮಗ
ತರಬೇತುಗಾರನೂ ಪ್ರತಿಸ್ಪರ್ಧಿಯೂ ಶ್ರೋ-
ತೃವೂ ಆಗಿದ್ದ. ಮಾತಿನಲ್ಲಿ ಪಳಗಿದ ವಿರೋಧಿ-
ಗಳನ್ನು ಕೂಡ ನಿರುತ್ತರರನ್ನಾಗಿ ಮಾಡು
ಪಿಟ್‌ನ ಆಶ್ಚರ್ಯಕರ ವಾಗ್ವೈಖರಿಯು ತೀ
ತಾರುಣ್ಯದಲ್ಲೇ ಬೆಳೆದುದಕ್ಕೆ ಈ ಬಾಲ್ಯಾಭ್ಯಾ-
ಸವೇ ಕಾರಣವೆಂದು ಅವನ ಗೆಳೆಯರು ಹೇಳಿ
ದ್ದಾರೆ.

ಸಣ್ಣ ಕೆಲಸಗಳನ್ನು ಆಟವಾಗಿ ಮಾರ್ಪಡಿಸಿ
ಕಲಿಸುವುದೊಂದು ಒಳ್ಳೆಯ ತಂತ್ರ; ಇದರಲ್ಲಿ
ಮಗುವಿನ ಎಳೆತನವನ್ನು ಗಮನದಲ್ಲಿಟ್ಟುಕೊಳ್ಳ
ಬೇಕು. ಅಧ್ಯಾಪಕರೊಬ್ಬರು ಮಗುವಿನ ಮನಸ್ಸ
ಸೀರುಕೊರಳಿನ ಸೀಸೆಯಂತಿದೆ ಎಂದೊಮ್ಮೆ
ನುಡಿದಿರುವರು. ಬಿಂದುಬಿಂದುವಾಗಿ ಹಾಕಿದರೆ
ಅದು ತುಂಬಾ ವಿಷಯಗಳನ್ನು ತುಂಬಿಕೊಳ್ಳು
ತ್ತದೆ. . ಆದರೆ ಒಮ್ಮೆಗೇ ಬಹಳ ಹೊಯ್ಯ
ಹೋದರೆ ಅದು ಹೊರಗೆ ಚೆಲ್ಲಿ ಹಾಳಾಗುತ್ತದೆ.

ಪಾಲಕ ಮತ್ತು ಮಕ್ಕಳ ನಡುವಣ ಸಂಬಂ-
ಧವು ಶಿಕ್ಷಣಪ್ರಧಾನವಾಗಿರಬೇಕು. ಹಲವರು
ಈ ವಿಷಯವನ್ನು ಮರೆಯುತ್ತಾರೆ. ಕೆಲವರು
ಪ್ರೇಮದ ಮೇಲೆಯೇ ಮಕ್ಕಳ ಮತ್ತು ರಕ್ಷಕರ
ಸಂಬಂಧ ನಿಂತಿದೆಯೆಂದು ತಿಳಿಯುತ್ತಾರೆ. ಇದು

ತಪ್ಪು. ನೀವು ಮಗುವನ್ನು ಎಷ್ಟೇ ಪ್ರೀತಿಸಿ ಓಲೈಸಿದರೂ ಅದನ್ನು ಏನೂ ತಿಳಿಯದ ಮೂರ್ಖನಾಗಿಸಿ ವ್ಯವಹಾರಜ್ಞಾನಶೂನ್ಯವನ್ನಾಗಿ ಉಳಿಸಬಹುದು. ಮನೆಯ ಹೊರಗೆ ಸರಿಯಾಗಿ ಕಲಿಯಲು ಸಾಧ್ಯವಿಲ್ಲದಂಥ ವಿಷಯಗಳೇ ಈ ಪ್ರಪಂಚದಲ್ಲಿ ಹೆಚ್ಚಾಗಿವೆ. ಹಲ್ಲುಜ್ಜುವ ಸರಿಯಾದ ಕ್ರಮವನ್ನೂ ಶಾಲೆಯಲ್ಲಿಯೇ ಮಕ್ಕಳಿಗೆ ಕಲಿಸಬೇಕೆಂಬರೆ ಹಾಸ್ಯಾಸ್ಪದವಾಗದೆ? ಅದರಂತೆಯೇ ಹಣ ಉಳಿಸಲು, ತಮ್ಮ ವೈಯಕ್ತಿಕ ವಿಷಯಗಳ ಏರ್ಪಾಡು ಮಾಡಿಕೊಳ್ಳಲು ಶಾಲೆಯಲ್ಲಿ ಕಲಿಸಲು ಸಾಧ್ಯವಿಲ್ಲ. ಇಂಥ ವಿಷಯಗಳಲ್ಲಿ ಪ್ರಯತ್ನಪಟ್ಟರೆ ಪಾಲಕರೇ ಶಾಲೆಯ ಅಧ್ಯಾಪಕರಿಗಿಂತ ಹೆಚ್ಚು ಯಶಸ್ವಿಯಾಗಬಲ್ಲರು.

ಅಸ್ಪಷ್ಟ ಮತ್ತು ಅನಿಶ್ಚಿತ ವೃತ್ತಿಯ ಜನರಿಂದ ತುಂಬಿದ ನಮ್ಮ ಸಮಾಜದಲ್ಲಿ ಹಲವು ತಂದೆ-ತಾಯಂದಿರು ತಮ್ಮ ಮಕ್ಕಳಿಗೆ ನಿಶ್ಚಿತ ಮತ್ತು ವಿಶ್ವಸನೀಯವಾದ ಕೆಲ ವಿಷಯಗಳನ್ನು ಕೂಡ ತಿಳಿಸಲು ತಪ್ಪುತ್ತಾರೆ. ಇದಕ್ಕೆ ಸಾಮಾನ್ಯವಾದ ನೆಪವೆಂದರೆ ಯಾವುದು ನಿಜ ಮತ್ತು ನಂಬಲರ್ಹ ಎಂದು ನಮಗೇ ಗೊತ್ತಿರುವುದಿಲ್ಲ ಎಂದು. ಆದರೆ ಈ ಮಾತು ಸರಿಯಲ್ಲ. ನಾವು ಪ್ರಾಯಪ್ರಬುದ್ಧರಾಗುವಷ್ಟರಲ್ಲಿ ಎಷ್ಟೋ ಪ್ರಶ್ನೆಗಳಿಗೆ ವ್ಯವಹಾರದಲ್ಲಿ ತೃಪ್ತಿಕರವಾದ ಉತ್ತರಗಳನ್ನು ಕಂಡುಕೊಂಡಿರುತ್ತೇವೆ. ಅವನ್ನೇ ನಾವು ನಮ್ಮ ಮಕ್ಕಳಿಗೆ ಕಲಿಸೋಣ. ಅವರು ಅನಂತರ ಅದನ್ನು ಟೀಕಿಸಲಿ, ಬಯ್ಯಲಿ; ಏನಾದರೂ ಕನಿಷ್ಠಪಕ್ಷ ಅವರ ಪಾಡಿಗೆ ಅವರು ಸ್ವತಃ ಕಲಿತುಕೊಳ್ಳಲು ಆಧಾರವಾದ ಮೇಲ್ಪಂತಿಯನ್ನಾದರೂ ಹಾಕಿ ಕೊಟ್ಟಂತಾಗುವುದು. ಉತ್ತಮ ಶಿಕ್ಷಣವೆಂಬುದು ಕೂಡ ಇದಕ್ಕಿಂತ ಹೆಚ್ಚು ಸಾಧಿಸಲಾರದು.



## ರಾಹುಲ–ಯಶೋಧರಾ

"ಅಮ್ಮ ನನಗೂ ಹಕ್ಕಿಗಳಂತೆ ರೆಕ್ಕೆಗಳಿರುತ್ತಿದ್ದರೆ ಎಷ್ಟು ಚೆನ್ನಾಗಿತ್ತು!"

"ಯಾಕೆ ಮಗೂ?"

"ನಾನು ಆಕಾಶದಲ್ಲಿ ಎತ್ತರದಲ್ಲಿ ಹಾರಾಡುತ್ತಾ ಲೋಕದ ಮೂಲೆ ಮೂಲೆಯಲ್ಲಿಯೂ ಹುಡುಕುತ್ತಿದ್ದೆ."

"ಯಾರನ್ನು ಮಗು ಹುಡುಕುವುದು?"

"ಇನ್ನಾರನ್ನು? ನಮ್ಮ ತಂದೆಯವರನ್ನು ಹುಡುಕಿ ಕಂಡು ಹಿಡಿಯುತ್ತಿದ್ದೆ. ಅವರು ಯಾವ ಮರದಡಿಯಲ್ಲಿ ಕುಳಿತು ತಪಸ್ಸು ಮಾಡುತ್ತಿದ್ದಾರೆಂದು ತಿಳಿದು ನೇರವಾಗಿ ಅಲ್ಲಿಳಿಯುತ್ತಿದ್ದೆ. ಕೈ ಹಿಡಿದು ಎಬ್ಬಿಸಿ "ಸಾಕು ನಿನ್ನ ತಪಸ್ಸೆಂ"ದು ಮನೆಗೆ ಅವರನ್ನು ಕರೆತರುತ್ತಿದ್ದೆ."

"ಅಯ್ಯೋ ಮಗು, ನಿನಗೊಂದು ಹುಚ್ಚು. ಅವರು ಯಾರ ಮಾತನ್ನೂ ಕೇಳುವುದಿಲ್ಲ. ಇನ್ನು ಸಣ್ಣವನಾದ ನಿನ್ನ ಮಾತನ್ನು ಮನ್ನಿಸುವರೆ?"

"ಇದೇನಮ್ಮ ಹೀಗೆ ಹೇಳುತ್ತೀ? ನಮ್ಮಪ್ಪನ ಅಪ್ಪ–ಅಜ್ಜ–ಕೂಡ ಮನೆಯಲ್ಲಿ ನಾನು ಹೇಳಿದ ಹಾಗೆ ಕೇಳುತ್ತಾರೆ. ಹೀಗಿರುವಾಗ ಅಪ್ಪ ಕೇಳದೆ ಎಲ್ಲಿ ಹೋದಾನು?

—ಮೈಥಿಲೀ ಶರಣಗುಪ್ತರ ಯಶೋಧರಾದಿಂದ

# ನಗೆ—ಮಲ್ಲಿಗೆ

## ತಾರಾ-ಪತಿ

ಸಿನೆಮತಾರೆ ಸ್ಟುಡಿಯೋನಲ್ಲಿ ಅಭಿನಯಕ್ಕಾಗಿ ಸಿಂಗರಿಸಿಕೊಳ್ಳುತ್ತಿದ್ದಳು. ಆಗ ಬಾಗಿಲು ಕಾಯುವ ಹುಡುಗಿ ಬಂದು, "ಅಮ್ಮಾ, ಯಾರೋ ಬಂದಿದ್ದಾರೆ ಗಂಡಸರು. ಒಳಗೆ ಬರುವುದಾಗಿ ಹಟಹಿಡಿಯುತ್ತಾರೆ," ಎಂದಳು.

"ಅವರ ವಿಜಿಟಿಂಗ್ ಕಾರ್ಡ್ ಕೇಳಬಾರದಿತ್ತೆ?" ತಾರೆ ಹುಬ್ಬು ಗಂಟಿಕ್ಕಿ ಕೇಳಿದಳು.

"ಕೇಳಿದೆ ತಾಯಿ. ಆದರೆ ಆವರು ಅದನ್ನು ತೋರಿಸುವ ಬದಲು ನನ್ನನ್ನು ಹಿಡಿದು ಮುತ್ತು ಕೊಡಬಂದರು."

"ಓಹೋ, ಹಾಗಾದರೆ ಒಳಗೆ ಬಿಡು. ಅವರು ನನ್ನ ಗಂಡನಿರಬೇಕು!" ಎಂದಳು ತಾರಾಮಣಿ.

## ವಿಟಾಮಿನ್ ತಜ್ಞ

ಊಟ ಮಾಡುತ್ತಿದ್ದಾಗ ಹಿರಿಯರು ವಿಟಾಮಿನ್‌ಗಳನ್ನು ಚರ್ಚಿಸುತ್ತಿದ್ದರು. ಒಬ್ಬರು ಕೇಳಿದರು: "ವಿಟಾಮಿನ್ ಸಿ ಯಾವ ಯಾವ ಪದಾರ್ಥದಲ್ಲಿರುತ್ತದೆ?"

ಇನ್ನೊಬ್ಬರು ಉತ್ತರವಿತ್ತರು: "ಲಿಂಬೆ ಹಣ್ಣು, ಹರಿವೆಸೊಪ್ಪು, ಹಾಲು...."

ಅಷ್ಟರಲ್ಲಿ ಏಳು ವರ್ಷದ ಕಿಟ್ಟಿ ಹೇಳಿದ: "ಮೆಣಸಿನಕಾಯಿಯಲ್ಲಿ ತುಂಬ ಸೀ ವಿಟಾಮಿನ್ ಇರಬೇಕಲ್ಲವೆ?"

ತಾಯಿ ಕೇಳಿದಳು: "ಯಾರು ಹೇಳಿದರು ನಿನಗೆ?"

ಕಿಟ್ಟಿಯೆಂದ: "ಹೇಳುವುದು ಯಾರು? ಅದನ್ನು ತಿಂದವರೆಲ್ಲ ಸೀ ಸೀ ಎನ್ನುತ್ತಿರುವದನ್ನು ನಾನು ನೋಡಿಲ್ಲವೆ?" —ಸರಿತಾ

## ಮುದಿಗೂಬೆ

ಆಫೀಸ್ ಚಪರಾಸಿ: "ಸಾರ್, ಫೋನ್‌ನಲ್ಲಿ ತಮ್ಮನ್ನು ಕರೆಯುತ್ತಾರೆಂದು ಕಾಣುತ್ತದೆ."

ಒಡೆಯ: "ಕಾಣುತ್ತದೆ ಎಂದರೇನೋ ಮುಠ್ಠಾಳಾ? ಕೇಳಬಾರದಿತ್ತೆ?"

ಚಪರಾಸಿ (ಸಂಕೋಚದಿಂದ): "ಕೇಳಿದೆ ಸಾರ್, ಆದರೆ ಫೋನಿನಲ್ಲಿ ಮಾತಾಡುತ್ತಿದ್ದವರು 'ಯಾರು ಮಾತಾಡುತ್ತಿರೋದು, ನೀನೇನು ಮುದಿ ಗೂಬೆ!' ಅಂತ ಕೇಳಿದರು ಸಾರ್."

—ಮೈಸಿಂಡಿಯಾ

## ಪ್ರೀತಿಯ ಪಾಠ

ತಂದೆ: "ಮಗು ನಿನಗೆ ಅತ್ಯಂತ ಪ್ರಿಯವೆನಿಸುವ ಪಾಠ ಯಾವುದು?"

ಮಗ: "ವ್ಯಾಕರಣ."

ತಂದೆ: "ಆಂ?"

ಮಗ: "ಹೌದಪ್ಪ, ವ್ಯಾಕರಣ ಪಾಠವಾದ ಮೇಲೆ ನಮ್ಮ ಶಾಲೆ ಬಿಡುತ್ತದೆ."

—ಧರ್ಮಯುಗ

## ಮುಂಜಾಗ್ರತೆ

ಸಿನೆಮಾದಲ್ಲಿ ಒಬ್ಬ ಕುಳ್ಳ ಪ್ರೇಕ್ಷಕರು ಕುಳಿತಿದ್ದ ಸೀಟಿನ ಮುಂದಿನ ಸೀಟು ಖಾಲಿಯಿತ್ತು. ಇಂಟರವಲ್ ಮುಗಿದ ಮೇಲೆ ದೊಡ್ಡ ರುಮಾಲಿನ ಸೆಟ್ಟರೊಬ್ಬರು ಬಂದು ಅದರಲ್ಲಿ ಕೂಡ್ರತೊಡಗಿದರು.

ಹಿಂದೆ ಕುಳಿತಿದ್ದ ಕುಳ್ಳರು ಆಕ್ಷೇಪಿಸಿ, "ಆ ಸೀಟು ನಾನು ರಿಜರ್ವ್ ಮಾಡಿಸಿದ್ದೇನೆ" ಎಂದು ತಿಕೀಟು ತೋರಿಸಿದರು.

"ಯಾರಿಗಾಗಿ?"

"ಯಾರಿಗಾಗಿಯೂ ಅಲ್ಲ. ರುಮಾಲುವಾಲಾರ ವಿರುದ್ಧ ಮುಂಜಾಗ್ರತೆಯೆಂದು ರಿಜರ್ವ ಮಾಡಿಸಿದ್ದೇನೆ."

— ಕಾರವಾನ್

ನಿತ್ಯವೂ ಆಕಾಶ ನೋಡುತ್ತೇವೆ. ಆದರೆ ರಸಿಕ ಮನ ಅದರಲ್ಲಿ ಎಂಥ ಸವಿಯನ್ನು ಕಾಣುತ್ತದೆ!

# ರಾತ್ರಿಯ ಆಗಸ

ಕೀರ್ತಿ ಕುರ್ತಕೋಟಿ

'ನಕ್ಷತ್ರಗಳಿಂದ ತುಂಬಿದ ಆಕಾಶ ಹಾಗೂ ಮಾನವನ ಹೃದಯ ಇವೆರಡೂ ನನಗೆ ಗೂಢ ಸಮಸ್ಯೆಗಳಾಗಿಯೇ ಉಳಿದಿವೆ' ಎಂದಿದ್ದಾನೆ ಕ್ಯಾಂಟ್. ಕ್ಯಾಂಟನ ತತ್ವಜ್ಞಾನಕ್ಕಿಂತ ಈ ಒಂದು ಮಾತು ನನ್ನ ಮನಸ್ಸಿನ ಮೇಲೆ ಅದ್ಭುತ ಪರಿಣಾಮವನ್ನುಂಟುಮಾಡಿದೆ. ರಾತ್ರಿಯ ನಕ್ಷತ್ರ ಖಚಿತವಾದ ಆಕಾಶ ನನ್ನ ಕಣ್ಣಿಗಂತೂ ನಿತ್ಯ ಕುತೂಹಲವಾಗಿ ಉಳಿದಿದೆ. ಸಾವಿರ ಸಲ ನೋಡಿದರೂ ನನ್ನ ಕುತೂಹಲ ತೃಪ್ತಿಯಾಗಿಲ್ಲ. ಚಂದ್ರ, ಸೂರ್ಯ, ನಕ್ಷತ್ರಗಳು, ಗ್ರಹಮಾಲೆಗಳು, ಮೋಡ ಮೊದಲಾದವುಗಳಿಗೆಲ್ಲ ಇಂಬುಗೊಟ್ಟರೂ ಅನಂತವಾಗಿ ಹಬ್ಬಿರುವ ಈ ಆಕಾಶದ ವ್ಯಕ್ತಿತ್ವವಾದರೂ ಎಂಥದು ಎಂದು ಆಶ್ಚರ್ಯಪಟ್ಟಿದ್ದೇನೆ. ಕ್ಷಣಕ್ಷಣಕ್ಕೂ ತನ್ನ ಮುಖಮುದ್ರೆಯನ್ನು, ಭಾವ ವೈಖರಿಯನ್ನು ಬದಲಿಸುತ್ತಿರುವ ನಭಃಸ್ಥಲ, ನವೋನವ ಸೌಂದರ್ಯದ ವ್ಯಕ್ತರೂಪದಂತೆ ನನಗೆ ಕಂಡಿದೆ.

ರಾತ್ರಿಯಲ್ಲಿ ಮುಗಿಲು ಹಗಲು ಕಾಣುವದಕ್ಕಿಂತ ಹೆಚ್ಚು ವಿಸ್ತಾರವಾಗಿ ಕಾಣುತ್ತದೆ. ಕ್ಷಿತಿಜದ ಒಂದು ಕೊನೆಯಿಂದ ಇನ್ನೊಂದು ಕೊನೆಯ ವರೆಗೆ ಕಣ್ಣೋಡಿಸಿದರೆ ಆಕಾಶ ಕೈಕಾಲು ಚಾಚಿ ಮಲಗಿಕೊಂಡಂತೆ ಕಾಣುತ್ತದೆ. ಈ ಅನುಭವ ಹೆಚ್ಚು ಮನದಟ್ಟಾಗಬೇಕಾದರೆ ಬೇಸಿಗೆ ಕಾಲದಲ್ಲಿ ಮಾಳಿಗೆಯ ಮೇಲೆ

ಮಲಗಬೇಕು. ನಡುರಾತ್ರಿಯಲ್ಲಿ ಎಚ್ಚರಾಗಿ ಕಣ್ಣು ಬಿಟ್ಟು ನೋಡಿದರೆ ಆಕಾಶದ ಭವ್ಯತೆ ದಿಗಿಲುಗೊಳಿಸುತ್ತದೆ. ಆಕಾಶಗಂಗೆಯ ತೀರದಲ್ಲಿ ಹೊಳೆಯುವ ನಕ್ಷತ್ರಗಳನ್ನು ನೋಡಿದಾಗ, ಬಯಲಾಟದಲ್ಲಿ ಜರತಾರಿ ವೇಷವನ್ನು ಧರಿಸಿದ ರಾವಣನ ತೋಳು ನೆನಪಾಗುತ್ತದೆ. ನಿದ್ದೆಯ ಗುಂಗು ಇನ್ನೂ ಬಿಟ್ಟಿರದಿದ್ದರೂ ಕಣ್ಣುಗಳು ಬಾನ ಚೆಲುವನ್ನು ಸವಿಯಲು ಆತುರಪಡುತ್ತವೆ. ಒಂದು ಕ್ಷಣ ಮನಸ್ಸು ಯಾವುದೋ ಸುಖಾನುಭವದಲ್ಲಿ ಲೀನವಾಗುತ್ತದೆ. ಆದರೆ ಇಂಥ ವೇಳೆಯಲ್ಲಿ ವಿಚಾರಕ್ಕೆ ಆಸ್ಪದವೇ ಇರುವದಿಲ್ಲ. ಮರುಕ್ಷಣವೇ ನಿದ್ದೆ ಆವರಿಸಿಬಿಡುತ್ತದೆ. ಎರಡು ನಿದ್ದೆಗಳ ನಡುವಿನ ಈ ಅನುಭವ ನಮ್ಮ ಕನಸಿನ ಪುಸ್ತಕದಲ್ಲಿ ಒಂದು ಸ್ವರ್ಣಪುಟವಾಗಿ ಉಳಿಯುತ್ತದೆ. ನಮ್ಮ ಏಕಾಂತದ ಸವಿನೆನಪುಗಳಲ್ಲಿಯ ಒಂದು ಭಾಗವಾಗಿ ಹೊಳೆಯುತ್ತದೆ.

ರಾತ್ರಿಯ ಆಗಸ ಹಾಗೂ ತಾರೆಗಳ ಸೌಂದರ್ಯವನ್ನು ಮನಸೋಕ್ತವಾಗಿ ಅನುಭವಿಸಬೇಕಾದರೆ ಊರ ಹೊರಗೆ ತಿರುಗಾಡಲು ಹೋಗಬೇಕು. ನಕ್ಷತ್ರಗಳನ್ನು ನೋಡುವ ಚಟ ಯಾವಾಗಲೂ ಸಾಮಾಜಿಕವಾಗಿಲ್ಲ. ಆದ್ದರಿಂದಲೇ ಖಗೋಲಶಾಸ್ತ್ರಜ್ಞರು ಸಾಮಾಜಿಕತೆಯಿಂದ ಬಹಳ ದೂರವಾಗಿರುತ್ತಾರೆ. ಯಾರಾದರೂ ಜೊತೆಯಲ್ಲಿದ್ದಾಗ ಆಕಾಶದ ಕಡೆಗೆ ನಮ್ಮ ಕಣ್ಣು ತಿರುಗುವುದಿಲ್ಲ. ಊರ ಹೊರಗೆ ಸಂಜೆ ಒಬ್ಬರೇ ತಿರುಗಾಡಲು ಹೋದಾಗ ಮನಸ್ಸು ಸಹಜವಾಗಿಯೇ ಪ್ರಕೃತಿನಿರೀಕ್ಷಣೆಯಲ್ಲಿ ತೊಡಗುತ್ತದೆ. ನೋಡುನೋಡುತ್ತಿರುವಂತೆಯೇ ನಮಗರಿವಾಗದಂತೆ ನೂರಾರು ನಕ್ಷತ್ರಗಳು ಮೂಡಿಬಿಡುತ್ತವೆ. ಹುರಿಯುವ ಜೋಳದಿಂದ ಅರಳು ಎದ್ದಂತೆ ಒಂದೆರಡು ನಿಮಿಷಗಳಲ್ಲಿಯೇ ಮೂಡುವ ಈ ವ್ಯಾಪಾರ ನನಗೆ ಯಾವಾಗಲೂ ಅಚ್ಚರಿಯದೆನಿಸಿದೆ. ಆಗ ಸಂಪೂರ್ಣ ಕತ್ತಲಾಗುತ್ತದೆ. ಕ್ಷಿತಿಜದ ಗೆರೆ ಕ್ರಮೇಣ ಮಾಯವಾಗುತ್ತ ನೆಲಮುಗಿಲುಗಳ ಅಂತರ ಕತ್ತಲೆಯಲ್ಲಿ ಕರಗಿಹೋಗುತ್ತದೆ. ಮುಗಿಲಿನ ಕಪ್ಪು ಹಿನ್ನೆಲೆಯಲ್ಲಿ ನಕ್ಷತ್ರಗಳ ವರ್ಣವೈಭವ, ಉಜ್ವಲತೆ ಹೊಳಪುಗಳು ಮನಸ್ಸನ್ನು ಸ್ವಪ್ನಲೋಕಕ್ಕೆ ಯಾತ್ರೆ ಹೋಗಲು ಸಿದ್ಧಗೊಳಿಸುತ್ತವೆ. ಆಗ ಮನಸ್ಸು ಅವುಗಳ ಬಗ್ಗೆ ಎಂದೂ ಮುಗಿಯದ ವಿಚಾರಚಕ್ರದಲ್ಲಿ ತೊಡಕಿಕೊಳ್ಳುತ್ತದೆ.

ಅಸಂಖ್ಯ ನಕ್ಷತ್ರಗಳಿಂದ ತುಂಬಿದ ಆಕಾಶ ಯಾವಾಗಲೂ ನನ್ನ ಕಲ್ಪನೆಯನ್ನು ಜಾಗೃತಗೊಳಿಸುತ್ತದೆ. ಲೆಕ್ಕವಿಲ್ಲದೆ ಹೊಳೆಯುವ ತಾರೆಗಳು ಅನೇಕ ಚಿತ್ರಗಳನ್ನು, ಉಪಮೆ ರೂಪಕಗಳನ್ನು ತಂದೊಡ್ಡುತ್ತವೆ. ಈ ನಕ್ಷತ್ರಗಳು ಒಮ್ಮೆ ಅಪ್ಸರೆಯರ ಕುಣಿಯುತ್ತಿರುವ ಕಾಲುಗಳಿಂದ ಉದುರಿ ಬಿದ್ದ ಬೆಳ್ಳಿಯ ಗೆಜ್ಜೆಗಳಂತೆ ಕಾಣುತ್ತವೆ. ಮತ್ತೊಮ್ಮೆ ಅಪ್ಸರೆಯರೇ ನಂದನವನದಿಂದ ದಿವ್ಯ ಕುಸುಮಗಳನ್ನು ಆಯ್ದು ತಂದು ಮನಸ್ಸಿಗೆ ಬಂದಂತೆ ಆಕಾಶದ ಅಂಗಳದಲ್ಲಿ ರಂಗವಲ್ಲಿಯ ಚಿತ್ರಗಳನ್ನು ರಚಿಸಿದಂತೆ ಕಾಣುತ್ತವೆ. ಒಂದೊಂದಾಗಿ ನಕ್ಷತ್ರಗಳನ್ನು ನೋಡುತ್ತ ಹೋದಂತೆ ಅಪೂರ್ವ ಭಾವನೆ ಕಲ್ಪನೆಗಳು ಹೊಳೆಯುತ್ತವೆ. ಮೃಗದ ಬೆನ್ನಟ್ಟಿ ನಡೆದ ವ್ಯಾಧನ ಈ ಪ್ರಯತ್ನ ಎಂದು ಕೊನೆಗೊಳ್ಳಬೇಕೋ? ಯುಗಯುಗಗಳು ಕಳೆದರೂ ಈ ಚಿತ್ರ ಶಾಶ್ವತವಾಗಿ ಮೂಡಿ ಮುಳುಗುತ್ತಲಿದೆ. ಮತ್ತೊಂದು ಕಡೆಗೆ ಪುಂಡರೀಕನ ಕರ್ಣಾವತಂಸವನ್ನು ನೆನಪಿಗೆ ತರುವ ಕೃತ್ತಿಕೆಯ ಪುಂಜ ಪ್ರೀತಿಯ ಸವಿನೆನಪಿನಂತೆ ಕೇವಲ ಹೃದಯಗೋಚರವಾಗಿದೆ. ಅದರ ಮಗ್ಗುಲಿಗೆ ಪುನರ್ವಸು ಮಂಡಲದ ತೆರೆದ ಬಾಗಿಲು ಪ್ರ[illegible]ಯೊಂದು ನಕ್ಷತ್ರಮಂಡಲವನ್ನೂ ಸ್ವಾಗತಿಸುತ್ತದೆ. ಉತ್ತರಕ್ಕೆ ಧ್ರುವನಕ್ಷತ್ರದ ಸುತ್ತ ನಿತ್ಯ ಪ್ರದಕ್ಷಿಣೆ ಹಾಕುವ ಸಪ್ತರ್ಷಿಗಳ ಮಂಡಲ ತಪಸ್ಸಿನ ಪಾವಿತ್ರ್ಯವನ್ನು, ಸತ್ಯನಿಷ್ಠೆಯನ್ನು ಸಂಕೇತವಾಗಿ ತೋರಿಸುವಂತೆ ಕಾಣುತ್ತದೆ. ಅವುಗಳ ಮಧ್ಯದಲ್ಲಿಯೇ ವಧೂವರರ ಹೃದಯಗಳಲ್ಲಿ ಹುದುಗಿರುವ ಗುಪ್ತ ಆಕಾಂಕ್ಷೆಯಂತೆ, ಕಂಡೂ ಕಾಣದೆ ಹೊಳೆಯುವ ಅರುಂಧತಿ. ವಿಸ್ತಾರವಾದ ಆಕಾಶದ ಪಟದಲ್ಲಿ ಈ ಪಗಡೆಯ ಕಾ[illegible]

ಗಳನ್ನು ಕಾಣದ ಕೈಯೊಂದು ಸರಿಸುತ್ತಿರುವಂತೆ ಕಾಣುತ್ತದೆ. ಎಷ್ಟು ಬದಲಾವಣೆ ಹೊಂದಿದರೂ ಪ್ರತಿ ರಾತ್ರಿ ಆಕಾಶದ ಮಲ್ಲಿಗೆಬಳ್ಳಿ ಹೂ ಬಿಡುವದನ್ನು ನೋಡಿದರೆ ಆಶ್ಚರ್ಯಕರವಲ್ಲದೆ ಮತ್ತೇನು?

ದಿನವೂ ಬಾನನ್ನು ನೋಡುತ್ತ ನೋಡುತ್ತ ಮನುಷ್ಯ ಅವುಗಳ ಬಗ್ಗೆ ಕಟ್ಟಿರುವ ಕಲ್ಪಕತೆಗಳಿಗೆ ಲೆಕ್ಕವೇ ಇಲ್ಲ. ಮನುಷ್ಯನ ಜೀವನದಂತೆಯೇ ಈ ನಕ್ಷತ್ರಗಳ ಜೀವನದಲ್ಲಿಯೂ ಸುಖದುಃಖಗಳ, ಪ್ರೀತಿ ದ್ವೇಷಗಳ ಆಟ ನಡೆಯುತ್ತದೆ. ಜಗದ ಜೀವನದಲ್ಲಿಯಂತೆಯೇ ಸುಖ ಒಂದು ಪಾಲಾದರೆ ಹತ್ತು ಪಾಲು ದುಃಖವಿದೆ. ಮೃಗವ್ಯಾಧರ ವಿಫಲ ಪ್ರಯತ್ನ ದುಃಖದ ಸಂಕೇತವಲ್ಲದೆ ಮತ್ತೇನು? ಚಂದ್ರನೆದೆಯ ಏರಿಳಿತದಲ್ಲಿ ನೋವಿನ ನಾಡಿಸ್ಪಂದನ ಕೇಳುತ್ತದೆ. ರೋಹಿಣಿ ಅವನಿಗಾಗಿ ಪ್ರತಿ ರಾತ್ರಿಯೂ ನಿಟ್ಟುಸಿರುಗರೆಯುತ್ತಾಳೆ. ಬೃಹಸ್ಪತಿಯ ಪತ್ನಿಯ ಒದ್ದೆ ಸೀರೆಯಿಂದ ಉದುರಿದ ನೀರ ಹನಿಗಳಂತೆ ಆಕಾಶ ಗಂಗೆಯ ತಾರೆಗಳು. ಆದರೆ ನನಗೋ ಪಾಪಿಗಳ ಸೆರೆಯಲ್ಲಿ ಗೋಳಿಡುವ ಸ್ತ್ರೀತ್ವದ ಕಂಬನಿಗಳಂತೆ ಅವು ಕಾಣುತ್ತವೆ. ಇಲ್ಲಿ ಕೃತ್ತಿಕೆಯ ಪುಂಜ ತನ್ನ ಅಲೌಕಿಕ ಸೌಂದರ್ಯದಿಂದ ಕಣ್ಣಿಗೆ ಹಬ್ಬವನ್ನುಂಟು ಮಾಡಿದರೂ ಅದೂ ಇನ್ನೊಂದು ನೋವಿನ ಕತೆಯನ್ನೇ ಹೇಳುತ್ತದೆ. ಲೋಕೈಕವೀರನಾದ ಷಣ್ಮುಖ ಹುಟ್ಟಿದ್ದು ಈ ಕೃತ್ತಿಕೆಯರ ಗರ್ಭದಿಂದಲೇ. ಈ ಆರು ಜನ ಕೃತ್ತಿಕೆಯರು ಮತ್ತು ಅರುಂಧತಿ ಇವರು ಸಪ್ತರ್ಷಿಗಳ ಪತ್ನಿಯರು. ಈ ಆರು ಕೃತ್ತಿಕೆಯರು ಮಾತ್ರ ಅಗ್ನಿಯ ಮೋಸದಿಂದಾಗಿ ಗರ್ಭ ಧರಿಸಬೇಕಾಯಿತು. ಆ ಪಾಪ ದೋಷದಿಂದಲೇ ಅವರು ಸಪ್ತರ್ಷಿಮಂಡಲದಿಂದ ದೂರವಾಗಿ ಉಳಿದಿದ್ದಾರೆ. ಉದಯವಾದೊಡನೆ ಸಪ್ತರ್ಷಿಗಳನ್ನು ಕಂಡು ನಮಸ್ಕರಿಸುವಂತೆ ನನಗೆ ಕಾಣುತ್ತದೆ. ಇಲ್ಲಿ ದಕ್ಷಿಣದಿಕ್ಕಿಗೂ ಇನ್ನೊಂದು ನೋವಿನ ಚಿತ್ರ. ಸೂರ್ಯವಂಶವನ್ನು ಪಾವನಗೊಳಿಸಿದ ತ್ರಿಶಂಕುರಾಜ ತಲೆಕೆಳಗಾಗಿ ಬಿದ್ದಿದ್ದಾನೆ. ಆರ್ಷ ಹಾಗೂ ದೇವಶಕ್ತಿಗಳ ಹೋರಾಟದ ಫಲವಾಗಿ ಅವನು ಶಿಕ್ಷೆಯನ್ನು ಅನುಭವಿಸಬೇಕಾಯಿತು. ತ್ರಿಶಂಕುವಿನ ಹತ್ತಿರವೇ ಅಗಸ್ತ್ಯ ನಕ್ಷತ್ರ ಅಪೂರ್ವಕಾಂತಿಯಿಂದ ವಿರಾಜಿಸುತ್ತಿದೆ. ಆರ್ಯಾವರ್ತದಿಂದ ಬಂದು, ವಿಂಧ್ಯಪರ್ವತವನ್ನು ದಾಟಿ ದಕ್ಷಿಣಕ್ಕೆ ಆರ್ಯಸಂಸ್ಕೃತಿಯ ಬೆಳಕನ್ನು ಬೀರಲು ಬಂದ ಅಗಸ್ತ್ಯರ ಕಣ್ಣಿಗೆ ಈ ನಕ್ಷತ್ರ ಕಂಡಿತಂತೆ. ಮುಂದೆ ಅದೇ ಅವರಿಗೆ ದಕ್ಷಿಣದಲ್ಲಿ ಮಾರ್ಗದರ್ಶಿಯಾಯಿತು. ಆದ್ದರಿಂದ ಅವರ ಹೆಸರೇ ಈ ನಕ್ಷತ್ರಕ್ಕೆ ಬಂದಿತಂತೆ. ನಮ್ಮ ಪುರಾಣ ಇತಿಹಾಸಗಳ ದಿವ್ಯಸ್ಮೃತಿಗಳನ್ನೆಲ್ಲ ಕಲ್ಪನೆಯ ಎರಕದಲ್ಲಿ ಹೊಯ್ದು ನಿರ್ಮಿಸಿದ ಸ್ವರ್ಣಶಾಸನದಂತೆ ಈ ನಕ್ಷತ್ರನಿಬಿಡವಾದ ಆಕಾಶ ನನ್ನ ಕಣ್ಣಿಗೆ ಕಾಣುತ್ತದೆ. 'Stars, ye poetry of the heaven' (ತಾರೆಗಳೆ, ಬಾನು ರಚಿಸಿದ ಕಾವ್ಯ ನೀವು!) ಎಂಬ ಬಾಯ್‌ರನ್ನನ ಮಾತು ಸಾರ್ಥಕವಾದಂತೆನಿಸುತ್ತದೆ.

ಜಗತ್ತಿನ ಎಲ್ಲ ಕವಿಗಳೂ ಈ ನಕ್ಷತ್ರಗಳನ್ನೂ ರಾತ್ರಿಯ ಆಕಾಶವನ್ನೂ ವರ್ಣಿಸದೆ ಇಲ್ಲ. ಶೆಲ್ಲಿಯ Night ಎಂಬ ಕವನವನ್ನು ನಾನು ಲೆಕ್ಕವಿಲ್ಲದಷ್ಟು ಸಾರೆ ಓದಿ ಆನಂದಪಟ್ಟಿದ್ದೇನೆ. ವಾಲ್ಮೀಕಿ ರಾಮಾಯಣದಲ್ಲಿಯ ಶರತ್ಕಾಲದ ರಾತ್ರಿಯ ವರ್ಣನೆ, ಎಲ್ಲ ವರ್ಣನೆಗಳಲ್ಲಿಯೇ ಅತ್ಯಂತ ಸುಂದರವಾದದ್ದೆಂದು ನನ್ನ ಅಭಿಪ್ರಾಯ. ಪೂರ್ಣಚಂದ್ರನ ಸೌಮ್ಯಮುಖ, ತೇಜಸ್ವಿಯಾದ ತಾರೆಗಳೇ ಕಣ್ಣುಗಳು, ಬೆಳುದಿಂಗಳ ಶುಭ್ರವಾದ ವಸನ ಇವುಗಳಿಂದ ಕೂಡಿದ ರಾತ್ರಿ ವಾಲ್ಮೀಕಿಯ ಕಣ್ಣಿಗೆ ಚೆಲುವೆಯೊಬ್ಬಳ ನಿಲುವಿನಂತೆ ಕಾಣುತ್ತದೆ. ಆದರೆ ರಾತ್ರಿಯ ವೈಶಿಷ್ಟ್ಯಪೂರ್ಣವಾದ ವರ್ಣನೆಯುಳ್ಳ ಸಂಸ್ಕೃತ ಪದ್ಯವೊಂದು ನನ್ನ ಮನಸ್ಸನ್ನು ಹೆಚ್ಚಾಗಿ ಸೆಳೆದಿದೆ. ಅದರ ಭಾವಾನುವಾದ ಹೀಗಿದೆ: ಬೆಳುದಿಂಗಳ ಭಸ್ಮವನ್ನು ಮೈಗೆಲ್ಲ ಬಳಿದುಕೊಂಡು ತಾರೆಗಳ ಅಸ್ಥಿಮಾಲೆಯನ್ನು ಕೊರಳಲ್ಲಿ ಧರಿಸಿಕೊಂಡು ರಾತ್ರಿಯೆಂಬ ಕಾಪಾ

ಲಿಕೆ, ಒಂದು ದ್ವೀಪದಿಂದ ಮತ್ತೊಂದು ದ್ವೀಪಕ್ಕೆ ಪ್ರಯಾಣ ಮಾಡುತ್ತಾಳೆ. ಅವಳಿಗೆ ಅಂತರ್ಧಾನವಾಗುವದರಲ್ಲಿ ಹೆಚ್ಚು ಪ್ರೀತಿ. ಚಂದ್ರನ ತಲೆಬುರುಡೆಯಲ್ಲಿ ಕಪ್ಪು ಸಿದ್ಧಾಂಜನ ವನ್ನು ತುಂಬಿಕೊಂಡು ಮುಂದೆ ಮುಂದೆ ಸಾಗುತ್ತಾಳೆ. ರಾತ್ರಿಯ ಈ ಚಿತ್ರ ಕೇವಲ ಔಚಿತ್ಯ-ಪೂರ್ಣವಷ್ಟೇ ಅಲ್ಲ, ಗೂಢವೂ ಆಗಿದೆ. ರಾತ್ರಿಯ ವಿಶಿಷ್ಟ ಗುಣಗಳಲ್ಲಿ ಈ ರಮ್ಯ ಗೂಢವೂ ಒಂದು.

ರಾತ್ರಿಯ ಆಗಸ ನಿಜವಾಗಿಯೂ ರಹಸ್ಯ ಪೂರ್ಣವಾಗಿದೆ. ಮಧುರಚೆನ್ನರು ಹೇಳಿರುವಂತೆ ಇಲ್ಲಿಯೂ ಮುಗಿಯದ, ಅಲ್ಲಿಯೂ ಮುಗಿಯದ, ಎಲ್ಲಿಯೂ ಮುಗಿಯದ ಈ ಆಕಾಶದ ಆಚೆಗೆ ಏನಿರಬಹುದೆಂದು ತಿಳಿದುಕೊಳ್ಳಲು ಮನಸ್ಸು ತವಕಪಡುತ್ತದೆ. ಬೆಲೆಯುಳ್ಳ ವಸ್ತುಗಳನ್ನು ಮಕ್ಕಳ ಕೈಗೆ ನಿಲುಕದಂತೆ ತೂಗಬಿಟ್ಟಿರುವಂತೆ ಈ ತಾರೆಗಳನ್ನು ನಭದಲ್ಲಿ ನಿಲ್ಲಿಸಿದವರಾರು? ನಮ್ಮ ಭೂಮಿಗಿಂತ ಲಕ್ಷಾವಧಿ ಪಟ್ಟು ದೊಡ್ಡ ಈ ಜ್ಯೋತಿರ್ಲೋಕಗಳನ್ನು ನಿರ್ಮಿಸಿದ್ದರ ಉದ್ದೇಶವಾದರೂ ಏನಿರಬಹುದು? ಅದರಲ್ಲಿಯೂ ಅಮಾವಾಸ್ಯೆಯ ರಾತ್ರಿಯಲ್ಲಿ ನಕ್ಷತ್ರಗಳಿಂದ ಕಿಕ್ಕಿರಿದು ತುಂಬಿದ ಆಕಾಶದಲ್ಲಿಯೇ ಏನೋ ಒಂದು ರಹಸ್ಯಪೂರ್ಣವಾದ ಮಾಯೆಯಿದೆ.

ಇದರ ಅನುಭವ ಸ್ಪಷ್ಟವಾಗಬೇಕಾದರೆ ರಾತ್ರಿಯ ಹೊತ್ತು ಅಡವಿಯ ದಾರಿಯಲ್ಲಿ ನಡೆಯುತ್ತಿರಬೇಕು. ದಾರಿಯ ಎರಡೂ ಮಗ್ಗುಲಿಗೆ ಎತ್ತರವಾದ ಗಿಡಗಳು; ಜೀಂಗುಡುವ ರಾತ್ರಿ. ಇಂಥ ಹೊತ್ತಿನಲ್ಲಿ ಥಕ್ಕನೆ ಕಣ್ಣು ಮೇಲೆತ್ತಿ ನೋಡಿದರೆ ಗಿಡಗಳ ಬಿರುಕಿನಿಂದ ಆಕಾಶದ ಒಂದು ಭಾಗ ಮಾತ್ರ ಕಾಣುತ್ತದೆ. ಅದನ್ನು ನೋಡಿದರೆ ಕಥೆಯಲ್ಲಿ ಬರುವ ಮಾಟಗಾರನ ಗುಪ್ತಗುಹೆಯಲ್ಲಿಯ ಮುತ್ತುರತ್ನಗಳಂತೆ ಚಿಕ್ಕೆಗಳು ಕಾಣುತ್ತವೆ.

ಬೆಳುದಿಂಗಳ ರಾತ್ರಿಯಲ್ಲಿ ಇನ್ನೊಂದು ಬಗೆಯ ಮಾಯೆ ನಭಃಸ್ಥಲವನ್ನು ಆವರಿಸಿರುತ್ತದೆ. ನಕ್ಷತ್ರಗಳೆಲ್ಲ ಬೆಳುದಿಂಗಳ ಪ್ರವಾಹದಲ್ಲಿ ಮುಳುಗಿರುತ್ತವೆ. ಆಕಾಶಕ್ಕೆ ಸಿಂಪಿನ ಒಳಮುಗ್ಗಲ ಬೆಳ್ಳಿಯ ಬಣ್ಣ ಬಂದಿರುತ್ತದೆ. ಮರುಭೂಮಿಯಲ್ಲಿ ಒಂಟಿಯಾಗಿ ನಡೆದಿರುವ ಪ್ರವಾಸಿಕನಂತೆ ಚಂದ್ರ ನಭಃಸ್ಥಲದಲ್ಲಿ ಯಾತ್ರೆ ಹೊರಟಿರುತ್ತಾನೆ. ಅವನ ಈ ಬೇಸರವಿಲ್ಲದ ಪ್ರಯಾಣವನ್ನು ನೋಡಿ ಸಣ್ಣವನಿದ್ದಾಗ ನಾನು ಎಷ್ಟೋ ಸಾರೆ ಮರುಗಿದ್ದೇನೆ.

ಹುಣ್ಣಿವೆಯ ರಾತ್ರಿಯ ಬೆಳುದಿಂಗಳನ್ನು ನೆಲದ ಮೇಲೆಯೇ ಅನುಭವಿಸಬೇಕು. ಚಂದ್ರನ ಸೌಂದರ್ಯವನ್ನು ನೋಡಬೇಕಾದರೆ ಅಷ್ಟಮಿಯ ದಿನದ ಮುಗಿಲನ್ನು ನೋಡಬೇಕು. ಅರ್ಧ ಚಂದ್ರ ನಕ್ಷತ್ರಗಳ ಜೊತೆಗೆ ಆಟವಾಡುತ್ತಿರುವದು ಉತ್ಸವವಾಗಿ ಮೆರೆಯುತ್ತದೆ.

ಮುಗಿಲು ನಮ್ಮಿಂದ ಯೋಚಿಸದಷ್ಟು ದೂರವಾಗಿದೆ. ಭೂಮಿಯ ಮಾನದಿಂದ ಅದರ ವಿಸ್ತಾರ ಅನಂತವಾಗಿದೆ. ಆದರೂ ಅದರ ಮೇಲೆ ನಮ್ಮ ಅಭಿಮಾನ ಹೋಗಿಲ್ಲ. ನಮ್ಮೂರಿನ ನೆಲವನ್ನು ಪ್ರೀತಿಸುವಂತೆಯೇ ನಾವು ನಮ್ಮೂರ ಮೇಲಿನ ಆಕಾಶವನ್ನೂ ಪ್ರೀತಿಸುತ್ತೇವೆ. ಸೂರ್ಯಾಸ್ತ ಸೂರ್ಯೋದಯಗಳ ದಿಕ್ಕುಗಳನ್ನು ಗುರುತಿಸಿರುತ್ತೇವೆ. ನಮ್ಮೂರ ಗುಡ್ಡದ ಮೇಲೆ ಮಿಂಚಿದರೆ ಮಳೆ ಬರುವದು ನಿಶ್ಚಯ ಎಂದು ಭವಿಷ್ಯ ಹೇಳುತ್ತೇವೆ. ಆಕಾಶದ ವಿಸ್ತಾರ ಕಲ್ಪನಾತೀತವಾಗಿದ್ದರೂ, ನಮಗೆ ಗೊತ್ತಿದ್ದ ಆಕಾಶ ಸ್ವಲ್ಪಮಾತ್ರವೇ. ಅದನ್ನೆ ನಮ್ಮ ಪರಿಸರದ ಒಂದು ಮಹತ್ವದ ಅಂಗವೆಂದು ನಾವು ಪ್ರೀತಿಸುತ್ತೇವೆ. ಮಕ್ಕಳು ಅಳುತ್ತಿದ್ದರೆ ಹೊರಗೆ ಕರೆದುಕೊಂಡು ಹೋಗಿ ಚಂದ್ರನನ್ನು ತೋರಿಸುತ್ತೇವೆ. ಸಂಜೆಯ ಹೊತ್ತಿಗೆ ತುಳಸಿಕಟ್ಟೆಯ ಮೇಲೆ ನಕ್ಷತ್ರ ದೀಪವನ್ನು ಬೆಳಗಿಸಿ ನಮ್ಮ ಗೃಹಿಣಿಯರು ನಕ್ಷತ್ರಗಳೊಂದಿಗೆ ಗೆಳೆತನ ಬೆಳೆಸುತ್ತಾರೆ.

(ಧಾರವಾಡ ಆಕಾಶವಾಣಿಯ ಕೃಪೆಯಿಂದ)



**ಇಂದು ಮತ್ತೆ ಜನಪ್ರಿಯವಾಗುತ್ತಿರುವ ಇಡ್ಡಲಿಗೆ ಸಾವಿರ ವರುಷದ ಇತಿಹಾಸವಿದೆ.**

# ಇಡಲಿಯ ಕಥೆ

ಆವಡಿಯ ಸತ್ಯಮೂರ್ತಿ ನಗರದಲ್ಲಿ ನಡೆದ ಕಾಂಗ್ರೆಸ್ಸಿನ ಅಧಿವೇಶನವು ಉತ್ತರ ದಕ್ಷಿಣಗಳ ನಡುವಣ ಸ್ನೇಹ ಬಂಧನವನ್ನು ಮತ್ತಷ್ಟು ಮಧುರಗೊಳಿಸಿತು ; ಈ ಸ್ನೇಹಬಂಧದ ಉಪಕರಣವಾದದ್ದು ದಕ್ಷಿಣದವರ ಸರಳ-ಸ್ಫುಟ ರುಚಿಯ ಪ್ರತೀಕವಾದ ಇಡಲಿ. 'ಮದರಾಸಿನ ಮುಖ್ಯಮಂತ್ರಿ ಕಾಮರಾಜ ನಾಡಾರರು ಏರ್ಪಡಿಸಿದ ಇಡ್ಲಿಯ ಸಮಾರಾಧನೆ ಭಾರತದ ಎಲ್ಲ ರಾಜಕಾರಣಿಗಳನ್ನು ತೃಪ್ತಿಗೊಳಿಸಿತು' ಎಂದು, ಇಡ್ಡಲಿಯ ಸೇವನೆಯಿಂದ ತಾವೂ ತೃಪ್ತರಾದ ಪತ್ರಿಕೋದ್ಯೋಗಿಗಳು ವರದಿ ಮಾಡಿದ್ದರು.

ಇದಕ್ಕೂ ಮೊದಲು ಉತ್ತರ ಭಾರತದಲ್ಲಿ ಇಡಲಿಗೆ ಪ್ರಚಾರವಿದ್ದಿರಲಿಲ್ಲವೆಂದಲ್ಲ. ಆದರೆ ನೂರಾರು ವರ್ಷಗಳಿಂದ ಅದು ಉತ್ತರದಲ್ಲಿ ಲುಪ್ತವಾಗಿ ದಕ್ಷಿಣದಲ್ಲಿ ಆಶ್ರಯಪಡೆದಿತ್ತು. ಅದನ್ನು ಪುನರುದ್ಧಾರ ಮಾಡಿ 'ಇಡಲಿವೈಭವ'ವನ್ನು ಪುನಃ ಆಸೇತು ಹಿಮಾಚಲ ಪಸರಿಸಿದವರು —ವಿಶೇಷವಾಗಿ— ಪಾಲ್ಘಾಟಿನ ಅಯ್ಯರರು ತಾನೆ. ಇಂದು ಮದರಾಸಿಗರೋ ಉಡುಪಿಯವರೋ ಇರುವ ಎಡೆಯೆಲ್ಲಿ ಇಡ್ಲಿ ದೊರೆತೇ ದೊರೆಯುವುದೆಂಬುದು ಅನುಭವಸಿದ್ಧವಾದ ಮಾತು.

ಇಡ್ಡಲಿಯನ್ನು ಅವರು ಹೋದಲ್ಲೆಲ್ಲಾ ತಮ್ಮ ಜೊತೆಗೆ ಕೊಂಡೊಯ್ಯಲು ಮತ್ತು ಅಲ್ಲಿ ಅದು ಜನಪ್ರಿಯವಾಗಲು ಅದರಲ್ಲಿನ ಹೆಚ್ಚಿನ ಗುಣಗಳೇ ಕಾರಣ. ಇಡ್ಡಲಿಯು ಆವಿಯಿಂದ ಬೇಯುತ್ತದೆ. ಆದ್ದರಿಂದ ಅದರಲ್ಲಿನ ವಿಟಾಮಿನ್‌ಗಳು ನಷ್ಟವಾಗುವುದಿಲ್ಲ. ಎಣ್ಣೆಯಲ್ಲಿ ಕರಿದ ಅಥವಾ ಹಂಚಿನಲ್ಲಿ ಕಾಯಿಸಿದ ತಿನಸುಗಳಲ್ಲಿರಬಹುದಾದಂಥ ಕೆಡಕುಗಳು ಇದರಲ್ಲಿಲ್ಲ. ಅಲ್ಲದೆ ಅದರ ತಯಾರಿಕೆಯ ವಿಧಾನವೂ ಸರಳವಾದುದು.

ಇಂದು ಇಡಲಿ ದಕ್ಷಿಣದವರ ವೈಶಿಷ್ಟ್ಯವೆನಿಸಿದರೂ ಸಾವಿರ ವರ್ಷಗಳ ಹಿಂದೆ ಅದು ಉತ್ತರದಲ್ಲಿಯೂ ಪ್ರಚಲಿತವಾಗಿತ್ತು. [illegible] ಕ್ರಿ. ಶ. ೧೧೩೦ ರಲ್ಲಿದ್ದ ಚಾಳುಕ್ಯರ [illegible]-

'ಪ್ರಜಾವಾಣಿ' ಯಲ್ಲಿ ಬಂದ ಕೆ. ನಾಗರಾಜರ ಲೇಖದ ರೂಪಾಂತರ

ಶ್ವರನ "ಮಾನಸೋಲ್ಲಾಸ" ಇಲ್ಲವೆ "ಅಭಿಲಷಿತಾರ್ಥಚಿಂತಾಮಣಿ" ಯೆಂಬ ಗ್ರಂಥದ ಅನ್ನಾಭೋಗ ಎಂಬ ಪರಿಚ್ಛೇದದಲ್ಲಿ ಇಡಲಿಯ ಉಲ್ಲೇಖವಿದೆ. ಸೋಮೇಶ್ವರನು ತನ್ನ ಗ್ರಂಥದ ಈ ಪರಿಚ್ಛೇದದಲ್ಲಿ ಮಹಾರಾಷ್ಟ್ರ ಕರ್ನಾಟಕ ತಮಿಳು ನಾಡುಗಳಲ್ಲಿನ ತಿಂಡಿತಿನಸುಗಳ ಬಗ್ಗೆ ತಿಳಿಸಿದ್ದಾನೆ. ಅವನ ಕಾಲದಲ್ಲಿ ಇಡಲಿ ಮಾಡುತ್ತಿದ್ದ ವಿಧಾನ ಈ ಪದ್ಯದಲ್ಲಿದೆ:

ಅಮ್ಲೀಭೂತಂ ಮಾಷಪಿಷ್ಟಂ
ವಟಕಾಸು ವಿನಿಕ್ಷಿಪೇತ್ ।
ವಸ್ತ್ರಗರ್ಭಾಭಿರನ್ಯಾಭಿಃ
ಪಿಧಾಯ ಪರಿಪಾಚಯೇತ್ ॥
ಅವತಾರ್ಯಾತ್ರ ಮರಿಚಂ
ಚೂರ್ಣಿತಂ ವಿಕಿರೇದ್ ಅನು ।
ಘೃತಾಕ್ತ ಹಿಂಗುಸರ್ಷಾಭ್ಯಾಂ ಜೀರಕೇನ ಚ
ಧೂಪಯೇತ್ ॥
ಸುಶೀತಾ ಧವಲಾ ಶ್ಲಕ್ಷ್ಣಾ ಏತಾ
ಇಡುರಿಕಾ ವರಾಃ

ಹುಳಿಸಿದ ಉದ್ದಿನ ಹಿಟ್ಟನ್ನು ವಾಟಕಗಳಲ್ಲಿ ಹೊಯ್ದು ವಸ್ತ್ರ ಹರಡಿದ ಇನ್ನೊಂದು ಪಾತ್ರೆಯಲ್ಲಿಟ್ಟು ಮುಚ್ಚಿ ಬೇಯಿಸಬೇಕು. ಅನಂತರ ಇಳಿಸಿ ಅದರ ಮೇಲೆ ಮೆಣಸಿನ ಪುಡಿ ಚೆಲ್ಲಿ ಹಿಂಗು, ಸಾಸಿವೆ, ಜೀರಿಗೆಗಳೊಡನೆ ತುಪ್ಪದಲ್ಲಿ ಒಗ್ಗರಣೆ ಹಾಕಬೇಕು. ಇವು ಒಳ್ಳೆಯ ಇಡಲಿಗಳು ಎಂದು ಅವನು ಹೇಳಿದ್ದಾನೆ.

ಈ ಗ್ರಂಥಕರ್ತನು ಬರಿ ಉದ್ದಿನ ಹಿಟ್ಟನ್ನುಲ್ಲೇಖಿಸಿದ್ದಾನೆ. ಇಂದು ಇಡಲಿಯಲ್ಲಿ ಉದ್ದಿನ ಹಿಟ್ಟಿನೊಡನೆ ಅಕ್ಕಿ ಇಲ್ಲವೆ ಗೋದಿ ರವಾ ಬೆರಸಿಯೇ ಇರುತ್ತದೆ. ಅಲ್ಲದೆ ಅವನು ಹಬೆಯಲ್ಲಿ ಬೇಯಿಸುವ ಪ್ರಸ್ತಾಪ ಎತ್ತಿಲ್ಲ. ಬಹುಶಃ ಇವೆರಡನ್ನೂ ಅವನು ಗೃಹೀತವಾಗಿಟ್ಟುಕೊಂಡಿರಬೇಕು. ಇಲ್ಲವಾದರೆ ಮೇಲಿನ ಶ್ಲೋಕಗಳಲ್ಲಿ ಅರ್ಥ ಉಳಿಯುವುದಿಲ್ಲ.

ಪ್ರಾಕೃತದಲ್ಲಿ ಗುಜರಾಥದ ಲಕ್ಷ್ಮಣಗಣಿ ಎಂಬ ಜೈನಾಚಾರ್ಯರಿಂದ ಬರೆಯಲ್ಪಟ್ಟ "ಸುಪಾಸನಾಹಚರಿಯ" (ಸುಪಾರ್ಶ್ವನಾಥ ಚರಿತ) ಎಂಬ ಗ್ರಂಥದಲ್ಲಿನ ದತ್ತಕನ ಕಥೆಯಲ್ಲಿ "ಸೌರಾಷ್ಟ್ರಗಿರಿ ನಗರ ಎಂಬ ಪಟ್ಟಣದಲ್ಲಿ ಮಹೇಶ್ವರ ದತ್ತನೆಂಬ ಶ್ರೇಷ್ಠಿ ಇದ್ದನು. ಅವನ ಮಗ ದತ್ತನು ಊರೂರು ಸುತ್ತುತ್ತಾ ಜೂಜು, ಮದ್ಯಪಾನ, ಸೂಳೆಗಾರಿಕೆ ಮೊದಲಾದವುಗಳಲ್ಲಿ ತಲ್ಲೀನನಾಗಿದ್ದನು. ಒಮ್ಮೆ ಅವನು ಸರೋವರದ ಬಳಿ ವನಭೋಜನವನ್ನು ಏರ್ಪಡಿಸಿದಾಗ ಅಲ್ಲಿ ಉಪಾಹಾರಕ್ಕಾಗಿ ತನ್ನ ಜೊತೆಗೆ ಗಾಡಿಗಳಲ್ಲಿ ಇಡ್ಡಲಿಗಳನ್ನು ಕೊಂಡೊಯ್ದಿದ್ದನು" ಎಂದು ಹೇಳಿದೆ. ೧೨ ನೇ ಶತಮಾನದಲ್ಲಿ ಬರೆದ ಈ ಕಥೆಯೇ ಆ ಕಾಲದಲ್ಲಿ ಇಡ್ಡಲಿ ಗುಜರಾತಿನಲ್ಲಿಯೂ ಪ್ರಸಿದ್ಧವಾಗಿತ್ತೆಂದು ತಿಳಿಸುತ್ತದೆ.

ಇನ್ನೂ ಪುರಾತನ ಪುರಾವೆಗಳು ಬೇಕಿದ್ದರೆ ನಾವು ಕನ್ನಡ "ವಡ್ಡಾರಾಧನೆ"ಯನ್ನು ನೋಡಬೇಕು. ಕ್ರಿಸ್ತ ಶಕ ಸುಮಾರು ೯೩೦ ರದೆಂದು ಗಣಿಸಲಾಗುವ ಈ ಗದ್ಯಕಥೆಯಲ್ಲಿ ಇಡಲಿಯ ಉಲ್ಲೇಖ ಹೀಗಿದೆ:

"**ಭಟ್ಟಾರಕರ್ಗೆ ಅರಸಂ ತಾನೆ ಬಡ್ಡಿಸಲ್** ತಗುಳ್ದ ಬಳಿಯಂ ರಾಜಾನ್ನದ **ಕೂಳುಂ, ಪೆಸರ ತೊವೆಯುಂ, ಜೆಣ್ಣೆ**ಗಾಸಿದಾವೋದ **ಸುಗಂಧ ಪರಿಮಳಂ ನಾರ್ಪ ತುಪ್ಪಮುಂ ಪಲವು ತೆರೆದ ಬಾಡುಗಳುಂ, ತುಯ್ಯಲುಂ, ಪೂರಿಗೆ ಇಡ್ಡಲಿಗೆ ಸೋಧಿಗೆ ಲಾವಣಿಗೆ ಘೃತಪೂರಂ ಲಡ್ಡುಗೆ ಮಂಡಗೆ ಮೊದಲಾಗೊಡೆಯ ಪದಿನೆಂಟುಂ ತೆರೆದ ಭಕ್ಷ್ಯರೂಪಂಗಳುಮಂ ನಾನಾ ಪ್ರಕಾರದ ಪಾನಂಗಳುಮಂ ಭಟ್ಟಾರರ್ಗೆ ಬಡ್ಡಿಸಿದಂತೆ ಬ್ರಹ್ಮಯ್ಯಂಗೆ ಮಹಾದೇವಿ ಬಡ್ಡಿಸಿದೊಡೆ ದೇಸಿಗಂ ಬೆರಗಾಗಿ....**" ಜೈನ ಭಟ್ಟಾರಕರೊಬ್ಬರಿಗೆ ಒಬ್ಬ ಅರಸನಿತ್ತ ಭೋಜನದ ವರ್ಣನೆಯಿದು. ಇದರಲ್ಲಿ ಇಡಲಿ ಹದಿನೆಂಟು ಮಹಾ ಭಕ್ಷ್ಯಗಳಲ್ಲೊಂದೆಂದು ಹೇಳಲ್ಪಟ್ಟಿದೆ.

ಕರ್ನಾಟಕದಲ್ಲಿ ಇಡಲಿ ಮುಂದೆಯೂ ಸಾಕಷ್ಟು ಪ್ರಸಿದ್ಧವಾಗಿತ್ತೆಂದು ಬಸವ ಪುರಾಣದಲ್ಲಿ ಬರುವ ಉಲ್ಲೇಖಗಳೂ ತೋರಿಸುತ್ತವೆ.

ಹೀಗೆ ಗುಜರಾಥದಿಂದ ದಕ್ಷಿಣದವರೆಗೆ, ಹಿಂದೆ ಇಡ್ಡಲಿ ಅಥವಾ ಇಡ್ಡಲಿಕೆಗಳು ಪ್ರಚಲಿತವಾಗಿ

ದ್ದರೂ ಅದರ ಮೂಲ ಸ್ಥಾನ ದಕ್ಷಿಣಾಪಥವೇ ಇರಬೇಕೆಂದು ತೋರುತ್ತದೆ. "ಇಡ್ಡಲಿಕಾ" ಎಂಬುದು ಇಡ್ಡಲಿಯೆಂದು ತದ್ಭವವಾಗಿದೆಯೆಂಬುದಕ್ಕಿಂತಲೂ ದ್ರಾವಿಡ "ಇಡ್ಡಲಿ" ಯೇ "ಇಡ್ಡಲಿಕಾ" ಎಂದು ಸಂಸ್ಕೃತೀಕರಿಸಲ್ಪಟ್ಟಿರಬೇಕು. "ಅಡು" (ಬೇಯಿಸು) "ಇಡು" (ಚಿಕ್ಕಚಿಕ್ಕ ಮುದ್ದೆಗಳನ್ನು ಇಕ್ಕು) ಇವೆರಡು ಧಾತುಗಳಲ್ಲಿ ಒಂದು ಇಡ್ಡಲಿಗೆ ಜನ್ಮವಿತ್ತಿರಬಹುದು. ಇಡ್ಡಲಿಯ ಒಂದು ರೂಪಾಂತರಕ್ಕೆ ತುಳು ಭಾಷೆಯಲ್ಲಿ ಇಂದಿಗೂ "ಅಡ್ಡೆ", "ಅಡ್ಯೆ" ಎಂಬ ಹೆಸರು ಇದೆಯೆಂದು ಗಮನಿಸಬೇಕು.

ಕಡುಬು ಮತ್ತು ಇಡಲಿ ಇವು ಒಂದೇಯೋ ಬೇರೆಬೇರೆಯೋ ಎಂಬ ವಿವಾದವೆದ್ದಿದೆ. ಇದಕ್ಕೆ ಕಾರಣ "ಕಡುಬು" ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಪದಾರ್ಥಗಳನ್ನು ನಿರ್ದೇಶಿಸುವುದಾಗಿದೆ. ದಕ್ಷಿಣ ಕನ್ನಡದಲ್ಲಿ ಕಡುಬು ಇಡಲಿಯನ್ನೇ ನಿರ್ದೇಶಿಸುತ್ತದೆ. ಆದರೆ ಒಂದು ಚಿಕ್ಕ ಅಂತರವುಂಟು. ಇಡಲಿಯ ಹಿಟ್ಟನ್ನೇ "ಕೊಟ್ಟೆ"ಗಳಲ್ಲಿ ಹಾಕಿ ಬೇಯಿಸಿದರೆ ಅದು ಅಲ್ಲಿ ಕಡುಬೆನಿಸುತ್ತದೆ. ಈ ಕೊಟ್ಟೆಗಳನ್ನು ಬಾಳೆಎಲೆ, ಹಲಸಿನೆಲೆ, ಮುತ್ತುಗದ ಎಲೆ ಅಥವಾ ಮುಂಡಗೆ (ಕೇದಗೆಯ ಜಾತಿಯ ಹಿಂಡು ಮುಳ್ಳುಕಂಟಿ) ಗರಿ ಇವುಗಳನ್ನು ದೊನ್ನೆಯಂತೆ ಕಡ್ಡಿಗಳಿಂದ ಹೆಟ್ಟಿ ತಯಾರಿಸುತ್ತಾರೆ. ಇದು ತುಳುವರಿಗೆ ದೊಡ್ಡ ಭಕ್ಷ್ಯ. ದೀಪಾವಳಿ ಮೊದಲಾದ ಹಬ್ಬಗಳಲ್ಲಿ ಅದರದೇ ನೈವೇದ್ಯ, ಸಮಾರಾಧನೆ. ಇಡಲಿಯು ಲೋಹದ ಪಾತ್ರಗಳಲ್ಲೇ ಹೊಯ್ದು ಬೇಯಿಸಲ್ಪಡುತ್ತದೆ ಮತ್ತು ಅದರ ಆಕಾರ ಚಿಕ್ಕದು. ಆದರೆ ಎರಡರ ಹಿಟ್ಟೂ ಒಂದೇ; ಬೇಯಿಸುವುದೂ ಒಂದೇ ತರಹ—ಆವಿಯಲ್ಲಿ. ಉತ್ತರ ಕರ್ನಾಟಕದಲ್ಲಿ ಕಡುಬೆಂದರೆ ಹೂರಣದ ಕಡುಬು. ಅದು ಆಕೃತಿಯಲ್ಲಿ ಚಿಕ್ಕದು. ಅದನ್ನು ಕರಿದರೆ ಕರಿಗಡುಬು, ನೀರಲ್ಲಿ ಬೇಯಿಸಿದರೆ ಕುಚ್ಚಿದ ಕಡುಬು.

ಇಡಲಿಯ ಹಿಟ್ಟಿನಲ್ಲಿ ಹಸಿಮೆಣಸಿನಕಾಯಿ ಹಸಿಶುಂಠಿಗಳ ತುಣುಕುಗಳನ್ನು ಬೆರಸಿ ಬೇಯಿಸುವ ಪದ್ಧತಿ ಇಂದು ಕೆಲವೆಡೆಗಳಲ್ಲಿದ್ದರೂ "ಮಾನಸೋಲ್ಲಾಸ" ದಲ್ಲಿ ಹೇಳಿದ ಇಡ್ಡಲಿಕೆ ಇಂದು ಜನಪ್ರಿಯವಾಗಿಲ್ಲ. ಅತ್ಯಂತ ಜನಪ್ರಿಯವಾದ ಇಡಲಿಯೆಂದರೆ ಯಾವ ಮಸಾಲೆಯನ್ನೂ ಹಾಕದ ಸಪ್ಪಗಿನ ಇಡಲಿ. ಬೇಕಾದ ತರದ ವ್ಯಂಜನ—ಸಾಂಬಾರು, ಚಟ್ನಿ, ಮೊಸರು ಇತ್ಯಾದಿ—ಹಾಕಿಕೊಂಡು ತಿನ್ನಲು ಅನುಕೂಲವಿರುವುದೇ ಅದರ ಜನಪ್ರಿಯತೆಯ ಗುಟ್ಟು.

ಭಾರತಕ್ಕೆಲ್ಲಾ ಒಂದೇ ಆದ ರಾಷ್ಟ್ರೀಯ ತಿನಸಿನ ಅಗತ್ಯತೆ ಇಂದು ಕಂಡುಬಂದಿದೆ. ಸ್ವಲ್ಪ ಮಟ್ಟಿಗೆ ರೊಟ್ಟಿ ಇಂದು ಆ ಸ್ಥಾನಕ್ಕೆ ಬರುವಂತೆ ತೋರುವುದಾದರೂ ರುಚಿಯಿಂದಾಗಲಿ ಆರೋಗ್ಯ ದೃಷ್ಟಿಯಿಂದಲಾಗಲಿ ಇಡ್ಡಲಿ ಅದಕ್ಕೆ ಕಡಮೆಯೇನೂ ಅಲ್ಲ. ಆದರೆ ಇಡಲಿಯ ಸ್ವಾರಸ್ಯವೆಂದರೆ ಬೆಂದ ಬಿಸಿಬಿಸಿಯಲ್ಲಿಯೇ ಅದು ರುಚಿಯಾಗಿರುತ್ತದೆ.



## ಉಣಿಸಿನ ಸುಖ

ತಿನ್ನಲೂ ಕುಡಿಯಲೂ ಇಲ್ಲದ ಸ್ವರ್ಗಲೋಕದಲ್ಲಿರುವ ಸುಖವಾದರೂ ಏನು?

— ವಿದೂಷಕ ಮಾಢವ್ಯ

ಇಂದು ನಾವು ಕುಡಿಯೋಣ, ತಿನ್ನೋಣ; ಏಕೆಂದರೆ ನಾಳೆ ಸಾಯಬಹುದು.

— ಓಲ್ಡ್ ಟೆಸ್ಟಮೆಂಟ್

ನಾನು ಬದುಕಲೆಂದು ಉಣ್ಣುವೆನಾದರೆ ಇತರರು ಉಣ್ಣಲೆಂದೇ ಬದುಕುತ್ತಾರೆ.

— ಸಾಕ್ರೆಟೀಸ



# ಇದನ್ನೂ ಗಂಗೆಯಲ್ಲಿ ಎಸೆದುಬಿಡು!

ಆ ಕಾಲದಲ್ಲಿ ಬಂಗಾಲಿ ಕಾದಂಬರಿಕಾರ ಶರತ್‌ಚಂದ್ರರು ಕಲಕತ್ತೆಯಲ್ಲಿ ವಾಸಿಸುತ್ತಿದ್ದರು. ಯತೀನದಾಸ ರಸ್ತೆಯಲ್ಲಿರುವ ಸತೀಶಸಿಂಹರ ಮನೆಯಲ್ಲಿ ಪ್ರತಿ ಆದಿತ್ಯವಾರವೂ "ರಸಚಕ್ರ" ದ ಸಭೆಯು ನಡೆಯುತ್ತಿತ್ತು. ಶರತ್‌ಬಾಬುಗಳ ಮನೆಯು ಅಲ್ಲಿಗೆ ಹತ್ತಿರದಲ್ಲೇ ಇದ್ದುದರಿಂದ ಅವರೂ ಅಲ್ಲಿಗೆ ಹೆಚ್ಚಾಗಿ ಬರುತ್ತಿದ್ದರು.

ಆ ದಿನ "ರಸಚಕ್ರ" ದ ವಿಶೇಷ ಅಧಿವೇಶನವಿತ್ತು. ಸಂತೋಷಕೂಟದೊಡನೆ ಉಪಾಹಾರದ ವ್ಯವಸ್ಥೆಯನ್ನು ಮಾಡಲಾಗಿತ್ತು. "ರಸಚಕ್ರ" ದ ಸದಸ್ಯರಲ್ಲದವರೂ ಆಮಂತ್ರಿತರಾಗಿದ್ದರು. ಶರತ್‌ಬಾಬುಗಳೂ ಬಂದಿದ್ದರು.

ಅದೇ ಹೊತ್ತಿಗೆ "ರಸಚಕ್ರ" ದ ಸದಸ್ಯರಲ್ಲಿ ಒಬ್ಬರಾದ ನಟಬಿಹಾರೀ ಮುಖ್ಯೋಪಾಧ್ಯಾಯರೂ ಅಲ್ಲಿಗೆ ಬಂದಿದ್ದರು. ಒಳಗೆ ಪ್ರವೇಶಿಸುತ್ತ ಅವರು ಹೇಳಿದರು:

"ಹೊರಗೆ ಇಷ್ಟು ಜನರ ಚಪ್ಪಲಿಗಳನ್ನು ಇಟ್ಟಿದೆ, ಬೀದಿಯ ಮಗ್ಗಲ ಮನೆ; ಯಾರಾದರೂ ಚಪ್ಪಲಿ ಎತ್ತಿಕೊಂಡು ಹೋದರೆ ತಿಳಿಯುವಂತೆಯೂ ಇಲ್ಲ. ಆದ್ದರಿಂದ ಹೊರಗಡೆ ಒಬ್ಬ ಆಳನ್ನು ಇರಿಸಬೇಕು."

ಸ್ವಲ್ಪ ಸಮಯದ ತನಕ ಬೇರೆ ಬೇರೆ ಮಾತುಕತೆಗಳಾದವು. ಆಗ ನಟಬಿಹಾರಿಯವರು ಪ್ರಸ್ತಾಪಿಸಿದರು:

"ಶರತ್‌ಮಾಮಾ, ಸಭೆ ಆರಂಭವಾಗಲು ಇನ್ನೂ ಹೊತ್ತು ಇದೆ. ಅಷ್ಟರೊಳಗೆ ನಿಮ್ಮದೇ ಒಂದು ಕತೆ ಹೇಳಿರಿ."

"ಬರುತ್ತಲೇ ಚಪ್ಪಲಿ ಕಳೆದು ಹೋಗುವ ಹೆದರಿಕೆ ವ್ಯಕ್ತ ಪಡಿಸಿದಿರಲ್ಲ, ಅದರಿಂದ ಚಪ್ಪಲಿ ಕಳೆದ ಒಂದು ಘಟನೆಯನ್ನು ಹೇಳುತ್ತೇನೆ." ಶರತ್ ಬಾಬು ಆರಂಭಿಸಿದರು:

"ಆಗ ನಾನು ಶಿವಪುರದಲ್ಲಿ ವಾಸಿಸುತ್ತಿದ್ದೆ. ಒಂದು ದಿನ ಮನಮೋಹನ ಥಿಯೇಟರಿಗೆ ಸಿನೇಮಾ ನೋಡುವುದಕ್ಕೆ ಹೋಗಿದ್ದೆ. ನನ್ನ "ಅಂಧಾರೇ ಆಲೋ" ಪುಸ್ತಕದ ಆಧಾರದ ಮೇಲೆ ಆ ಚಿತ್ರವು ರಚಿತವಾಗಿತ್ತು. ಥಿಯೇಟರಿನ ಮಾಲಕ ತಾನೇ ಬಂದು ನನ್ನನ್ನು ಸಿನೇಮಾ ನೋಡಲು ಕರೆದೊಯ್ದು "ಬಾಕ್ಸಿ" ನಲ್ಲಿ ದಿಂಬು

ಹಿಂದೀ 'ನವನೀತ' ದಿಂದ

ಮುಂತಾದವನ್ನು ಇರಿಸಿ ನನಗೆ ಕುಳಿತುಕೊಳ್ಳಲು ವಿಶೇಷ ವ್ಯವಸ್ಥೆಯನ್ನೇ ಮಾಡಿದ್ದನು. ಎರಡೂ ಕಾಲುಗಳನ್ನು ಮೇಲಿಟ್ಟು ಸಂಪೂರ್ಣ ಆರಾಮವಾಗಿ ನಾನು ಚಿತ್ರವನ್ನು ನೋಡಿದೆ. ಆದರೆ ಪ್ರದರ್ಶನ ಮುಗಿದ ಬಳಿಕ ನನ್ನ ಒಂದು ಚಪ್ಪಲಿ ಸಿಗಲೊಲ್ಲದು. ಕೇವಲ ಎರಡು ದಿನಗಳ ಹಿಂದೆ ನಾನೇ ಆರಿಸಿ ಅವುಗಳನ್ನು ಕೊಂಡು ಕೊಂಡಿದ್ದೆ. ನನಗೆ ಬಹಳ ವ್ಯಸನವಾಯಿತು.

"ಥಿಯೇಟರ ಮಾಲಿಕನಿಗೆ ಈ ವಿಷಯ ತಿಳಿದಾಗ ಅವನು ತಾನೇ 'ಮುದ್ದಾಂ' ಆಗಿ ಹಲವು ಜನರೊಡನೆ ವಿಚಾರಿಸಿದ. ಆದರೆ ಚಪ್ಪಲಿ ಎಲ್ಲಿಯೂ ಸಿಗಲಿಲ್ಲ. ಎಲ್ಲರಿಗೂ ಒಂಟಿ ಚಪ್ಪಲಿ ಯಾರು ಎತ್ತಿಕೊಂಡರೆಂದು ಆಶ್ಚರ್ಯವಾಯಿತು.

"ಥಿಯೇಟರ ಮಾಲಕ 'ಒಂದು ಜೋಡಿ ಹೊಸ ಚಪ್ಪಲಿ ತಮಗೆ ಕೊಡಿಸುತ್ತೇನೆ' ಎಂದ.

"ಆದರೆ ನಾನು ಅದನ್ನು ಒಪ್ಪುವುದು ಸಾಧ್ಯವಾಗಲಿಲ್ಲ.

"'ನಮ್ಮಲ್ಲಿ ತಮ್ಮ ಚಪ್ಪಲಿ ಹೋಗಿರುವಾಗ ಹೊಸಚಪ್ಪಲಿ ಕೊಂಡುಕೊಡುವುದು ನಮ್ಮ ಕರ್ತವ್ಯವೇ ಆಗಿದೆ' ಎಂದು ಆತ ಹೇಳಿದ.

"ನಾನೆಂದೆ- 'ಕಳ್ಳ ಕದ್ದುದಕ್ಕೆ ನಿಮಗೆ ದಂಡವೇಕೆ? ಇರಲಿ ಈಗ ಹೋಗೋಣ. ಈ ಒಂದು ಚಪ್ಪಲಿಯನ್ನು ನನ್ನ ಜೊತೆಗೆ ಒಯ್ಯುತ್ತೇನೆ.'

"ಜನರಿಗೆ ಆಶ್ಚರ್ಯವಾಯಿತು.

"ಅವರು ಕೇಳಿದರು: 'ಶರತ್ ಮಾಮಾ. ಒಂದು ಚಪ್ಪಲಿಯನ್ನೊಯ್ದು ನೀವೇನು ಮಾಡುವಿರಿ? ಯಾವ ಕೆಲಸಕ್ಕೂ ಬರುವ ಹಾಗಿಲ್ಲ.

"ನಾನು ಅವರಿಗೆ ಹೇಳಿದೆ: 'ನಿಮಗೆ ಗೊತ್ತಿಲ್ಲ ಒಂದು ಚಪ್ಪಲಿಯನ್ನು ಕದ್ದ ಕಳ್ಳ ಅವನಿಲ್ಲೆಲ್ಲಾದರೂ ಇರಲೇಬೇಕು. ಒಂದು ಚಪ್ಪಲಿಯಿಂದ ಅವನಿಗೆ ಯಾವ ಪ್ರಯೋಜನವೂ ಇಲ್ಲ. ನಾನು ಈ ಚಪ್ಪಲಿಯನ್ನು ಇಲ್ಲಿ ಬಿಟ್ಟರೆ ಅವನು ಅದನ್ನು ಒಯ್ಯಬಹುದು; ಆದರೆ ನಾನು ಹಾಗೆ ಆಗಗೊಡಲಾರೆ. ಹೋಗುತ್ತ ದಾರಿಯಲ್ಲಿ ಗಂಗೆಗೆ ಎಸೆದು ಬಿಡುತ್ತೇನೆ.'

"ನನ್ನ ಮಾತು ಕೇಳಿ ಎಲ್ಲರೂ ನಗತೊಡಗಿದರು. ನಾನು ಚಪ್ಪಲಿಯನ್ನು ಕಂಕುಳಲ್ಲಿರಿಸಿಕೊಂಡೇ ಹಿಂತಿರುಗಿದೆ; ಮತ್ತು ದಾರಿಯಲ್ಲಿ ಅದನ್ನು ಗಂಗೆಯಲ್ಲಿ ಎಸೆದೂಬಿಟ್ಟೆ.

"ಮರುದಿನ ನಾನು ಬೆಳಗ್ಗೆ ಎದ್ದು ಹುಕ್ಕಾ ಸೇದುತ್ತಿದ್ದೆ; ಅಷ್ಟರಲ್ಲಿ ಒಬ್ಬ ಮನುಷ್ಯ ಬಂದು 'ಶರತ್ ಬಾಬು ಅವರ ಮನೆ ಇದುವೆ ಏನು?' ಎಂದು ಕೇಳಿದ.

"ನಾನು ಹೇಳಿದೆ: 'ಹೌದು, ನಾನೇ ಶರತ್.'

"ಅವನು ನನಗೆ ನಮಸ್ಕರಿಸಿ ಒಂದು ಪತ್ರವನ್ನು ಕೊಟ್ಟ. ಥಿಯೇಟರಿನ ಒಡೆಯ ಆ ಪತ್ರವನ್ನು ಬರೆದಿದ್ದನು. ಅದರಲ್ಲಿ ಹೀಗೆ ಬರೆದಿತ್ತು: 'ರಾತ್ರಿ ತಮ್ಮ ಒಂದು ಚಪ್ಪಲಿ ಕಳೆದು ಹೋಯಿತು. ಇದರಿಂದ ನನಗೆ ಬಹಳ ವ್ಯಸನವಾಗಿತ್ತು. ಇಡೀ ರಾತ್ರಿ ನಿದ್ದೆಯೇ ಬರಲಿಲ್ಲ. ಇಂದು ಬೆಳಗಾದೊಡನೆಯೇ ಮತ್ತೆ ಥಿಯೇಟರಿಗೆ ಹೋಗಿ ಪ್ರತಿಯೊಂದು ಕಡೆಯೂ ಹುಡುಕಾಡಿದೆ. ತಮ್ಮ ಚಪ್ಪಲಿ ತಾವು ಕುಳಿತಲ್ಲಿಂದ ಸ್ವಲ್ಪ ದೂರ ಬಿದ್ದಿತ್ತು. ಅದನ್ನು ಹಿಂದೆ ಕಳಿಸಿದ್ದೇನೆ. ನಮ್ಮಲ್ಲಿಂದ ತಮ್ಮ ಚಪ್ಪಲಿ ಕಳವಾಗಿಲ್ಲವೆಂದು ಸ್ವಲ್ಪ ನೆಮ್ಮದಿ ತಾಳಿದ್ದೇನೆ. ಎರಡನೆಯ ಚಪ್ಪಲಿಯನ್ನು ತಾವು ಗಂಗೆಗೆ ಇನ್ನೂ ಎಸೆದಿರಲಾರಿರಿ, ಎಂದು ನಂಬುತ್ತೇನೆ.'

"ಪತ್ರವನ್ನು ನಾನು ಓದಿ ಮುಗಿಸುವುದರೊಳಗೆ ಆತ ಅದೇ ವಿಶ್ವಾಸಘಾತಕ ಚಪ್ಪಲಿಯನ್ನು ನನ್ನ ಮುಂದೆ ಇರಿಸಿದ. ಅದನ್ನು ನೋಡಿ ನನಗೆ ಪಶ್ಚಾತ್ತಾಪವಾಯಿತು. ಎರಡನೆಯ ಚಪ್ಪಲಿಯನ್ನು ಗಂಗೆಗೆ ಎಸೆಯದಿರುತ್ತಿದ್ದರೆ ಉಪಯೋಗಕ್ಕೆ ಬರುತ್ತಿತ್ತು; ಆದರೆ ಇನ್ನು ಅದರಿಂದೇನು?

"ಕೊನೆಗೆ ನಾನು ಅವನಿಗೆ ಹೇಳಿದೆ: 'ಇದು ಇನ್ನು ನನಗೆ ಬೇರಾವ ಉಪಯೋಗಕ್ಕೂ ಬರುವಂತಿಲ್ಲ. ಒಂದು ಚಪ್ಪಲಿಯನ್ನು ನಿನ್ನೆ ನಾನು ಹಿಂತಿರುಗಿದಾಗಲೇ ಗಂಗೆಗೆ ಎಸೆದುಬಿಟ್ಟಿದ್ದೆ; ನೀನು ಹೋಗುವಾಗ ಇದನ್ನೂ ಗಂಗೆಗೆ ಎಸೆದುಬಿಡು."

ಮಕ್ಕಳನ್ನು ಪೀಡಿಸುವ ಬೇನೆ

# ಡಿಫ್ತೀರಿಯಾ



ಹೆಚ್ಚಾಗಿ ಮಕ್ಕಳಿಗೆ ಬರುವ ರೋಗಗಳಲ್ಲಿ "ಡಿಪ್ತೀರಿಯಾ" ಒಂದು. ಅದೊಂದು ಬಗೆಯ ಗಂಟಲು ಬೇನೆ. ಗಂಟಲುಬೇನೆಯಿಂದ ನೋಡನೋಡುತ್ತ ಮಗು ತೀರಿಕೊಂಡಿತೆಂಬ ವಾರ್ತೆಯನ್ನು ನಾವು ಆಗಾಗ್ಗೆ ಕೇಳುತ್ತೇವೆ. ಇಂಥವು ಬಹುತರವಾಗಿ ಡಿಪ್ತೀರಿಯಾ ಪ್ರಕರಣಗಳೇ ಇರುತ್ತವೆ.

ಡಿಪ್ತಿರಿಯಾದ ಹಾವಳಿ ವಿಶೇಷವಾಗಿರುವುದು ಸಮಶೀತೋಷ್ಣವಲಯದ ದೇಶಗಳಲ್ಲಿ. ಆದರೆ ಅದು ತುಸು ಕಡಿಮೆ ಪ್ರಮಾಣದಲ್ಲಿ ಜಗತ್ತಿನ ಎಲ್ಲ ದೇಶಗಳಲ್ಲಿ ಹಬ್ಬಿದೆ. ಭಾರತದಲ್ಲೂ ಅದರ ಉಪಟಳವುಂಟು. ಅದು ಬಹುಶಃ ನವಂಬರದಿಂದ ಜನೆವರಿ ವರೆಗಿನ ಚಳಿಯ ತಿಂಗಳುಗಳಲ್ಲಿ ಪ್ರಬಲವಾಗಿರುತ್ತದೆ.

ಡಿಪ್ತೀರಿಯಾ ದೊಡ್ಡವರಿಗೆ ಬರುವುದಿಲ್ಲವೆನ್ನಲಾಗುವುದಿಲ್ಲವಾದರೂ ಹೆಚ್ಚಾಗಿ ಮಕ್ಕಳನ್ನೇ ಪೀಡಿಸುವ ಪಿಡುಗು. ನೂರಕ್ಕಿಪ್ಪತ್ತರಷ್ಟು ಪ್ರಕರಣಗಳಲ್ಲಿ ಮಾತ್ರ ವಯಸ್ಕರು ಅದರಿಂದ ಪೀಡಿತ ರಾಗುತ್ತಾರೆ. ಮಕ್ಕಳಲ್ಲಿಯೂ ಒಂದು ವರ್ಷ ದೊಳಗಿನ ಹಸುಳೆಗಳು ಅದರಿಂದ ಬಹುಶ ಮುಕ್ತವಾಗಿರುತ್ತವೆ. ಎರಡನೇ ವರ್ಷದಿಂದ ಆರನೇ ವರ್ಷದ ವರೆಗಿನ ಮಕ್ಕಳಿಗೆ ಅದರ ಪೀಡೆ ಉತ್ತರೋತ್ತರವಾಗಿ ಹೆಚ್ಚುತ್ತದೆ.

ಪ್ಲೈಲಿ ಮೊದಲಾದವುಗಳಂತೆ ಡಿಪ್ತೀರಿಯವೂ ಒಂದು ಪಿಡುಗಿನ ಸ್ವರೂಪದ ಸಾಂಕ ಬೇನೆ. ಅದೊಂದುವಿಧದ ರೋಗಾಣು ಜೀವಿ ಯಿಂದ ಉಂಟಾಗುತ್ತದೆ. ಡಿಪ್ತೀರಿಯಾ ಕ್ರಿಮಿಗ ಳಲ್ಲಿ ಮೂರು ಜಾತಿಗಳಿವೆಯೆಂದು ಗೊತ್ತಾಗಿದೆ ಅವು ಸಾಮಾನ್ಯವಾಗಿ ಗಂಟಲ ಪ್ರದೇಶದಲ್ಲೇ ಉಳಿದು ವೃದ್ಧಿಹೊಂದುತ್ತವೆ.

ಡಿಪ್ತೀರಿಯಾ ಕೃಮಿಗಳು ಒಂದು ತೆರದ ವಿ ವನ್ನುಂಟುಮಾಡುತ್ತವೆ. ಅದು ಅತ್ಯುಗ್ರ ನಂಜಾ ಗಿದ್ದು ಕೂಡಲೆ ದುಷ್ಪರಿಣಾಮವುಂಟುಮಾಡ ವುದು. ಪ್ರಾಯೋಗಿಕ ಪ್ರಾಣಿಯಾದ ಗಿ ಪಿಗ್ಗಿನ ದೇಹದೊಳಗೆ ಇದು ಘನ ಸೆಂಟಿಮಿ

'ಹೆರಾಲ್ಡ್ ಆಫ್ ಹೆಲ್ತ್' ಆಧಾರದಿಂದ

ರಿನ ೧/೫ ದಷ್ಟು ಸೇರಿಕೊಂಡರೂ ಅದು ಸತ್ತು ಹೋಗುತ್ತದೆ. ಈ ವಿಷವು ರಕ್ತದಲ್ಲಿ ಸೇರಿಕೊಂಡು ಜ್ಞಾನತಂತುಗಳಗುಂಟ ದೇಹವನ್ನೆಲ್ಲ ವ್ಯಾಪಿಸಿ ಕೋಶಕೋಶದಲ್ಲಿಯೂ ಸೇರಿಕೊಳ್ಳುವುದು. ಕಂಠಪ್ರದೇಶದಲ್ಲಿ ಮತ್ತು ಶ್ವಾಸನಲಿಕೆಗಳಲ್ಲಿ ಅದು ರೋಗದ ಪರೆಯನ್ನು ನಿರ್ಮಿಸುತ್ತದೆ. ಇದು ಮಾರಣಾಂತಿಕವಾಗುವುದುಂಟು.

ಡೀಫ್ತೀರಿಯಾ ಪ್ರಸಾರಕ್ಕೆ ಆ ರೋಗದಿಂದ ಬಳಲುವವರ ಸಂಪರ್ಕವೇ ಪ್ರಧಾನ ಕಾರಣವಾಗಿದೆ. ಅವರ ಕೆಮ್ಮು, ಉಸಿರಾಟ ಅಥವಾ ಸೀನುಗಳಲ್ಲಿ ಹೊರಬಿದ್ದ ಕೃಮಿಗಳನ್ನು ಶ್ವಾಸ ಮೂಲಕ ತೆಗೆದುಕೊಂಡರೆ, ಇಲ್ಲವೆ ಆ ಕೃಮಿಗಳು ಸೇರಿಕೊಂಡ ಹಾಲು, ಆಹಾರ ಮೊದಲಾದವುಗಳ ಸೇವನೆಯಿಂದ ರೋಗ ಹಬ್ಬುತ್ತದೆ. ಆದರೆ ಕೆಲ ವೇಳೆ "ರೋಗವಾಹಕ" ಜನರೂ ಅದರ ಪ್ರಸಾರ ಮಾಡುವುದುಂಟು. ಈ "ವಾಹಕ"ರ ಶರೀರದಲ್ಲಿ ಲಕ್ಷಾಂತರ ಡಿಫ್ತೀರಿಯಾ ಜಂತುಗಳಿದ್ದರೂ ಅವರು ಆ ರೋಗದ ಯಾವ ಲಕ್ಷಣದಿಂದಲೂ ಬಳಲುತ್ತಿರುವುದಿಲ್ಲ.

ಡಿಫ್ತೀರಿಯಾ ಪೀಡೆ ಹಳ್ಳಿಗಳಿಗಿಂತ ನಗರಗಳಲ್ಲೇ ಹೆಚ್ಚು. ನಿಸ್ಸಾರ ಆಹಾರ, ಕೊಳಕು, ತಣ್ಣಗಿನ ಮನೆ, ಜನದಟ್ಟಣೆ ಇವು ಅದರ ಹಬ್ಬುಗೆಗೆ ಪೋಷಕವಾಗುತ್ತವೆ.

ಒಮ್ಮೆ ಡಿಫ್ತೀರಿಯಾ ಆಗಿ ಗುಣ ಹೊಂದಿದವರಿಗೆ ಮತ್ತೊಮ್ಮೆ ಅದು ಆಗುವುದು ತೀರ ವಿರಳ. ಹುಟ್ಟುವಾಗ ಮಕ್ಕಳ ಮೈಯಲ್ಲಿ ತಾಯಿಯಿಂದ ಬಂದ 'ನಂಜು ನಿರೋಧಕ' ದ್ರವ್ಯವಿರುವುದರಿಂದ ಹಸುಳೆಗಳಿಗೆ ಅದು ಸಹಜವಾಗಿ ತಗಲುವದಿಲ್ಲ. ಆದರೆ ಆರು ತಿಂಗಳ ನಂತರ ಅವುಗಳಿಗೆ ಈ ರೋಗದ ಅಪಾಯ ಪ್ರಾರಂಭವಾಗುತ್ತದೆ.

ಡಿಫ್ತೀರಿಯಾ ಕೃಮಿಗಳು ದೇಹವನ್ನು ಪ್ರವೇಶಿಸಿ ಮೂರರಿಂದ ಏಳು ದಿನಗಳ ನಂತರ ರೋಗ ಲಕ್ಷಣಗಳು ಪ್ರಕಟವಾಗುತ್ತವೆ. ಪ್ರಾರಂಭದಲ್ಲಿ ಲಕ್ಷಣಗಳು ತೀವ್ರವಾಗಿರುವುದಿಲ್ಲ; ಇದರಿಂದ ಅದನ್ನು ಅಸಡ್ಡೆ ಮಾಡಿಬಿಡುವ ಸಂಭವವಿದೆ. ಗಂಟಲು ದನಿ ಬಿದ್ದು ಹೋಗುವುದು, ಬರಬರುತ್ತ ಜ್ವರ (೧೦೧-೧೦೨ ಡಿಗ್ರಿ), ಮತ್ತು ಆಯಾಸ ಇವು ಕಾಣಿಸಿಕೊಳ್ಳುತ್ತವೆ. ಇಂಥ ಲಕ್ಷಣಗಳು ಕಾಣಿಸಿದೊಡನೆ ಮಗುವಿನ ಬಾಯಲ್ಲಿ ಒಂದು ಚಮಚೆಯ ಹಿಡಿಕೆಯನ್ನು ಹಾಕಿ ನಾಲಗೆಯನ್ನು ಕೆಳಗೊತ್ತಿ ಗಂಟಲನ್ನು ಪರೀಕ್ಷಿಸಬೇಕು. ಗಂಟಲ ಪ್ರದೇಶದಲ್ಲಿ ಬೆಳ್ಳನ್ನ ಪರೆಯಂಥದು ಕಂಡರೆ ಕೂಡಲೇ ಡಾಕ್ಟರರ ಕಡೆ ಹೋಗುವುದು ಅಗತ್ಯ. ಇತರ ರೋಗಗಳಿಂದಲೂ ಗಂಟಲಲಲ್ಲಿ ಪರೆ ಹುಟ್ಟಬಹುದಾದರೂ ಮುಂಜಾಗ್ರತೆ ತೆಗೆದುಕೊಂಡರೆ ಒಳಿತು. ಡಾಕ್ಟರರು ಡಿಫ್ತೀರಿಯಾ "ನಂಜುನಿರೋಧಕ" ಔಷಧವನ್ನು ಕೊಟ್ಟರೆ ಪ್ರಕರಣ ಅಪಾಯದ ಮಟ್ಟಕ್ಕೆ ಹೋಗಲಾರದು.

ಡಿಫ್ತೀರಿಯದಲ್ಲಿ ಹಲ ಪ್ರಕಾರಗಳುಂಟು. ಪುಣ್ಯಕ್ಕೆ ಸೇಕಡಾ ೫೦ ರಷ್ಟು ಪ್ರಕರಣಗಳು ಅಷ್ಟು ಅಪಾಯಕರವಲ್ಲದ ಗಲಗ್ರಂಥಿ (tonsillar) ಯ ಡಿಫ್ತೀರಿಯದವಾಗಿರುತ್ತವೆ. ಈ ಪ್ರಕಾರದ ರೋಗದಲ್ಲಿ ಸೇಕಡಾ ೧-೨ಕ್ಕಿಂತ ಹೆಚ್ಚು ಮರಣಗಳಾಗುವುದಿಲ್ಲ.

ಎರಡನೇ ತರದ, ಮೂಗು-ಗಂಟಲುಗಳೆರಡನ್ನೂ ಆವರಿಸುವ (naso-pharyngeal) ಡಿಫ್ತೀರಿಯವು ಹೆಚ್ಚು ಗಂಭೀರವಾದದ್ದು. ಡಿಫ್ತೀರಿಯದಿಂದ ಸಾಯುವವರಲ್ಲಿ ನೂರಕ್ಕೆಪ್ಪತ್ತೈದರಷ್ಟು ಜನರು ಇದಕ್ಕೇ ಬಲಿಯಾಗುತ್ತಾರೆ. ಇದರಲ್ಲಿ ದವಡೆ, ಕೊರಳುಗಳು ಊದಿಕೊಳ್ಳುವುದಲ್ಲದೆ ಮೂಗಿನಿಂದ ರಕ್ತದಂಥ ದ್ರವ ಸೂಸಬಹುದಾಗಿದೆ.

ಬೇರೆ ಕೆಲ ವಿಧದ ಡಿಫ್ತಿರಿಯಾ ಶ್ವಾಸನಲಿಕೆಗಳನ್ನು ಆಕ್ರಮಿಸಿ ಮುಚ್ಚಿಬಿಡಬಹುದು. ಹಾಗಾದರೆ ಡಾಕ್ಟರರು ರೋಗಿಗೆ ಉಸಿರಾಡಿಸಲು ಸಾಧ್ಯವಾಗುವಂತೆ ಕೊರಳಲ್ಲಿ ತೂತನ್ನೇ ಕೊರೆಯುವ ಪ್ರಸಂಗ ಬರುವುದುಂಟು.

ಡಿಫ್ತೀರಿಯಾ ಕೃಮಿಗಳಿಂದ ಮೂಗಿನ ಹೊರಳೆಗಳ ಬಳಿ, ಕೊರಳು, ಬೆರಳು, ನಾಭಿ, ಕಿವಿಯ ಹಿಂದೆ, ತುಟಿ, ಕಪೋಲ ಮತ್ತು ಜನನೇಂದ್ರಿಯಗಳ ಚರ್ಮದಲ್ಲಿ ಉರುಬುಗಳಾಗಬಹುದು.

ಆದರೆ ಡಿಫ್ತೀರಿಯದ ಗಂಭೀರ ಪ್ರಕಾರಗಳಲ್ಲಿ ಇದಕ್ಕಿಂತಲೂ ಅಪಾಯಕರ ಉಪದ್ರವಗಳು

ಉಂಟಾಗುವುವು. ಡಿಪ್ತೀರಿಯಾ ವಿಷ ದೊಡ್ಡ ಮಾನದಲ್ಲಿ ರಕ್ತದಲ್ಲಿ ಸೇರಿ ರಕ್ತನಾಳಗಳನ್ನೂ ಮಾಂಸ ಖಂಡಗಳನ್ನು ಮೂತ್ರಪಿಂಡಗಳನ್ನೂ ನರಮಂಡಲವನ್ನೂ ಹವಣುಗೆಡಿಸುವುದು. ಇದರಿಂದ ಶೀಘ್ರ ಮರಣವೊದಗುವುದುಂಟು; ಇಲ್ಲವೆ ಹೃದಯ ಕೋಶವು ತೀರ ದುರ್ಬಲವಾಗಿ ವಿವಿಧ ಅಂಗಗಳಿಗೆ ಬೇಕಾದಷ್ಟು ರಕ್ತ ಪೂರೈಸಲಾರದೆ ರೋಗಿಯನ್ನು ನಿರ್ವಿಣ್ಣಗೊಳಿಸಬಹುದು.

ಇನ್ನೊಂದು ಭಯ ದೇಹದ, ವಿಶೇಷವಾಗಿ ಕಂಠ ಪ್ರದೇಶದ ಮಾಂಸ ಖಂಡಗಳು ಅರ್ಧಾಂಗ ವಾಯು ಪೀಡಿತವಾಗುವುದು. ರೋಗಿಗೆ ನುಂಗುವುದು ಕಠಿನವಾಗಬಹುದು, ಕಣ್ಣಿನ ಮಾಂಸ ಖಂಡದ ಮೇಲೆ ಪರಿಣಾಮವಾಗಿ ಒಂದು ಕಣ್ಣ ಗೊಂಬೆ ಮೆಳ್ಳಾಗಬಹುದು. ಎಲ್ಲಕ್ಕೂ ಅಪಾಯಕರವೆಂದರೆ ಶ್ವಾಸಾಂಗಗಳ ಜಡತ್ವದಿಂದ ಉಸಿರಾಡಿಸಲು ಅಸಾಧ್ಯವಾಗುವುದು.

ಡಿಪ್ತೀರಿಯಾ ಆದವರು ಬದುಕುವುದು, ಅಥವಾ ರೋಗವು ವಿಶೇಷ ಜಟಿಲವಾಗದಂತೆ ಮಾಡುವುದು ಎಷ್ಟು ಮಟ್ಟಿಗೆ ಸಾಧ್ಯ ?

ರೋಗ ಲಕ್ಷಣಗಳು ಕಾಣಿಸಿ ಎಂಟು ಹತ್ತು ದಿನಗಳ ವರೆಗೆ ಬದುಕಿ ಉಳಿದರೆ ರೋಗಿ ಬದುಕುವ ಸಂಭವ ಹೆಚ್ಚಾಗುತ್ತದೆ. ನಂಜು ನಿರೋಧಕ ಔಷಧವನ್ನು ಸಕಾಲಕ್ಕೆ ಸಾಕಷ್ಟು ಕೊಟ್ಟದ್ದಾದರೆ ರೋಗ ಉಲ್ಬಣಿಸುವುದು ಕಡಿಮೆ. ರೋಗನಿದಾನ ಎಷ್ಟು ಬೇಗ ಆದರೆ ಅಷ್ಟು ಯಶಸ್ವಿಯಾಗಿ ಪ್ರತೀಕಾರೋಪಾಯಗಳನ್ನು ಕೈಕೊಳ್ಳಬಹುದು.

ನಂಜು ನಿರೋಧಕ ಔಷಧದ ಉಪಯೋಗವು ಅಮೇರಿಕದಲ್ಲಿ ಡಿಪ್ತೀರಿಯದ ಹಾವಳಿಯನ್ನು ಬಹಳ ಬಲಗುಂದಿಸಿದೆ. ಆದರೆ ಒಮೆ ಡಿಪ್ತೀರಿಯ ಉಲ್ಬಣಕ್ಕೆ ಬಂತೆಂದರೆ ಅದು ಗುಣವಾದರೂ ಬಹುಶಃ ಒಂದಲ್ಲ ಒಂದು ಅಂಗವನ್ನು ಊನ ಮಾಡದೆ ಬಿಡುವುದಿಲ್ಲ.

ವೈಲಿ ಬೇನೆಗೆ ಚುಚ್ಚುವಂತೆ ಡಿಪ್ತೀರಿಯಕ್ಕೂ ವೈಲಿ ಚುಚ್ಚುವ ಪದ್ಧತಿ ಈಗ ಅಮೇರಿಕ ಮೊದಲಾದ ದೇಶಗಳಲ್ಲಿ ಪ್ರಾರಂಭವಾಗಿದೆ. ಇದು ಶಾಶ್ವತ ರಕ್ಷಣೆ ನೀಡುವುದಿಲ್ಲಾದರೂ ಪಿಡುಗಿನ ಸಮಯದಲ್ಲಿ ತುಂಬ ಉಪಯುಕ್ತವಾಗುತ್ತದೆ.

ಭಾರತ ಉಷ್ಣದೇಶವಾದ್ದರಿಂದ ಇಲ್ಲಿ ಡಿಪ್ತೀರಿಯಾ ಹಾವಳಿ ಪಿಡುಗಿನ ಸ್ವರೂಪದಲ್ಲಿ ಹಬ್ಬುವುದು ಅಪರೂಪ. ಆದರೆ ಅಲ್ಲಲ್ಲಿ ಪ್ರಾಣಾಂತಿಕ ಡಿಪ್ತೀರಿಯಾ ಪ್ರಕರಣಗಳಾಗುವುದುಂಟಾದ್ದರಿಂದ ಹೆತ್ತವರು ಇದರ ಲಕ್ಷಣಗಳನ್ನು ತಿಳಿದಿರುವುದು ಮೇಲು.

ಡಿಪ್ತೀರಿಯಾ ಸೋಂಕು ರೋಗವಾದ್ದರಿಂದ ಅದು ಆದ ಮಗುವಿನ ಸಂಪರ್ಕ ಇತರ ಮಕ್ಕಳಿಗೆ ಬಾರದಂತೆ ನೋಡಿಕೊಳ್ಳಬೇಕು. ಮನೆಯಲ್ಲಿ ಒಂದು ಡಿಪ್ತೀರಿಯಾ ಪ್ರಕರಣವಿದ್ದ ಇತರ ಮಕ್ಕಳನ್ನು ಶಾಲೆಗೆ ಕಳಿಸದೆ ದಿನವೂ ಅವುಗಳ ಗಂಟಲುಗಳನ್ನು ಪರೀಕ್ಷಿಸುತ್ತಿರಬೇಕು ಮತ್ತು ಸಂಶಯಾಸ್ಪದ ಲಕ್ಷಣಗಳಿದ್ದರೆ ಕೂಡಲೆ ಡಾಕ್ಟರರಿಗೆ ತೋರಿಸಬೇಕು. ರೋಗಿಗೆ ಸಂಪೂರ್ಣ ವಿಶ್ರಾಂತಿ ಕೊಡಬೇಕು. ಸ್ವಚ್ಛ ಹವೆ, ವಿಶ್ರಾಂತಿ, ಒಳ್ಳೆಯ ಆಹಾರ, ಪ್ರಾರಂಭಿಕ ಅವಸ್ಥೆಯಲ್ಲೇ ವೈದ್ಯಕೀಯ ಉಪಚಾರ ಇವು ಗಳು ಗಂಭೀರ ಪ್ರಕಾರದ ಡಿಪ್ತೀರಿಯವನ್ನು ಹಿಡಿತಕ್ಕೆ ತರಲು ನೆರವಾಗುತ್ತವೆಂದು ಮರೆಯಬಾರದು.



**ಸಾಹಿತ್ಯಮಂದಿರದಲ್ಲಿ ಸಾಹಿತ್ಯವೇ ಹಸು, ಸಂಗೀತಾದಿಗಳು ಅದರ ಬಾಲ,**
**ಹಸು ಬಾಲವನ್ನು ಅಲ್ಲಾಡಿಸಬೇಕೇ ಹೊರತು ಬಾಲ ಹಸುವನ್ನು ಅಲ್ಲಾಡಿಸಬಾರದು.**

**— ಎ. ಆರ್. ಕೃಷ್ಣಶಾಸ್ತ್ರಿಗಳು.**

# ಹುಬ್ಬಳ್ಳಿ

**ಬಾಕುಮ ಬರೆದುದು**

ಉತ್ತರ ಕರ್ನಾಟಕದ ಪ್ರಮುಖ ಉದ್ದಿಮೆ ಮತ್ತು ವ್ಯಾಪಾರ ಕೇಂದ್ರವಾದ ಹುಬ್ಬಳ್ಳಿಗೆ ಸುಮಾರು ಒಂದು ಸಾವಿರ ವರ್ಷಗಳ ಇತಿಹಾಸವಿದೆ; ಆದರೆ ಇಂದಿನ ಹೊಸ ಹುಬ್ಬಳ್ಳಿ ರಚನೆಯೊಂದು ಆಕಸ್ಮಿಕ ಘಟನೆ.

ಇಂದಿಗೆ ಸುಮಾರು ಇನ್ನೂರ ಮೂವತ್ತೈದು ವರ್ಷಗಳ ಹಿಂದೆ ಹಳೆಹುಬ್ಬಳ್ಳಿಯ ಸಾಮಾಜಿಕ ಮುಂದಾಳು ಮತ್ತು ವರ್ತಕನಾಗಿದ್ದ ಕಲ್ಯಾಣ ಸೆಟ್ಟಿಗೂ ಅವನ ಸೋದರಳಿಯ ಬಸ್ಪಪ್ಪಸೆಟ್ಟಿಗೂ ಜಗಳವಾಗದಿರುತ್ತಿದ್ದರೆ ಬೊಮ್ಮಾಪುರ, ಮರಿಯನ ತಿಮಸಾಗರ, ಮಾದಿನಾಯಕನ ಅರಳೀಕಟ್ಟಿ, ಬೀಡನಹಾಳ, ಯಲ್ಲಾಪುರ, ವೀರಾಪುರ, ನಾರಾಯಣಪುರ, ನಾಗಶೆಟ್ಟಿಕೊಪ್ಪ ಮತ್ತು ಕೇಶವಾಪುರ ಗ್ರಾಮಗಳನ್ನೊಳಗೊಂಡ ಹೊಸ ಹುಬ್ಬಳ್ಳಿಯ ರಚನೆಯು ಬಹುಶಃ ಆಗುವ ಸಂಭವವಿದ್ದಿಲ್ಲ.

ಬಸಪ್ಪಸೆಟ್ಟಿ ತನ್ನ ಮಾವನ ಜೊತೆಗೆ ಜಗಳ ಹೂಡಿದಾಗ ಅವನ ಬೆನ್ನುಕಟ್ಟುವ ಜನರು ಇದ್ದರೂ ಹಳೇಹುಬ್ಬಳ್ಳಿಯಲ್ಲಿ ಅವನ ಜನರ ದೇನೂ ನಡೆಯಲಿಲ್ಲ. ಅದಕ್ಕೆಂದು ಆ ಒಂದು ಗುಂಪೇ ಒಟ್ಟಾಗಿ ಬೊಮ್ಮಾಪುರಕ್ಕೆ ಬಂದು ನೆಲೆಸಿತು. ಇದು ೧೭೨೭ ರ ಸುಮಾರಿಗೆ. ಅದೇ ಹೊತ್ತಿಗೆ ಸವಣೂರಿನ ನವಾಬ ಮಜೀದ್ ಖಾನನು ಆತನಿಗೆ ಸುತ್ತುಮುತ್ತಲ ಹಳ್ಳಿಗಳನ್ನು ಒಂದುಗೂಡಿಸಿ ಪಟ್ಟಣ ರಚಿಸಲು ಬೆಂಬಲವಿತ್ತನು.

ಬಸಪ್ಪಸೆಟ್ಟಿ ಆಗ ಕಟ್ಟಿಸಿದ ಹೊಸಹುಬ್ಬಳ್ಳಿ ಕೋಟೆಗೆ ೨,೫೦೦ ರೂಪಾಯಿಗಳ ವೆಚ್ಚವಾಯಿತು.

ಯೋಗಾಯೋಗವೆಂಬಂತೆ ಈ ಸಮಯಕ್ಕೆ ಸರಿಯಾಗಿಯೇ ಚಿತ್ರದುರ್ಗದ ಮುರುಘಾಸ್ವಾಮಿಗಳೊಡನೆ ಇದ್ದ ಮೂರುಸಾವಿರದ "ಅಪ್ಪಾ" ಅವರಿಗೂ ಮುರುಘಾಸ್ವಾಮಿಗಳಿಗೂ ಭಿನ್ನಾಭಿಪ್ರಾಯವುಂಟಾಯಿತು. ಆ ಪರಿಣಾಮವಾಗಿ ಮೂರುಸಾವಿರ ಮಠದ ಗುರುಸಿದ್ಧ ಸ್ವಾಮಿಗಳು ಹುಬ್ಬಳ್ಳಿಗೆ ಬಂದರು. ಬಸಪ್ಪಸೆಟ್ಟಿ ಸ್ವಾಮಿಗಳನ್ನು ಸ್ವಾಗತಿಸಿ ಭೂಸಪೇಟೆಯ ತನ್ನ ಮನೆಯ ಹತ್ತಿರವೇ ಅವರಿಗೆ ಮಠವನ್ನು ಕಟ್ಟಿಸಿಕೊಟ್ಟನು. ಇಂದಿನ ಮೂರುಸಾವಿರ ಮಠವನ್ನು ೧೮೫೦ ರಲ್ಲಿ ವಂತಿಗೆಯಿಂದ ಕಟ್ಟಿಸಲಾಯಿತು. ಇಂದು ಈ ಮಠದ ಸ್ವಾಮಿಗಳು ಈ ನಗರದ ಶೈಕ್ಷಣಿಕ ರಂಗದಲ್ಲಿ ಅಮಿತವಾದ ಸೇವೆ ಸಲ್ಲಿಸುತ್ತಿದ್ದಾರೆ.

ಸವಣೂರ ನವಾಬನಾದರೂ ಹುಬ್ಬಳ್ಳಿಯ ಅಭಿವೃದ್ಧಿಯಲ್ಲಿ ಆಸ್ಥೆ ವಹಿಸದೆ ಇಲ್ಲ. ಹೊಸ ಹುಬ್ಬಳ್ಳಿಯ ಮುಖ್ಯ ಬೀದಿಯನ್ನು ಆತ ತನ್ನ ವೆಚ್ಚದಿಂದಲೇ ಕಟ್ಟಿಸಿ ಅದಕ್ಕೆ ಮಜೀದ್‌ಪುರ ಎಂದು ಹೆಸರಿಟ್ಟನು.

ಹೀಗಾಗಿ ಕ್ರಮೇಣ ಹಳೇ ಹುಬ್ಬಳ್ಳಿಗೆ ಸಮ

ನಾದ ಪ್ರಾಶಸ್ತ್ಯವನ್ನು ಹೊಸ ಹುಬ್ಬಳ್ಳಿ ಕೂಡ ಗಳಿಸಿತು. ಉದ್ದಿಮೆ ವ್ಯಾಪಾರಗಳ ಕ್ಷೇತ್ರಕೂಡ ವಿಸ್ತರಿಸಿದಂತಾಯಿತು. ಇಂದು ಹೊಸ ಹುಬ್ಬಳ್ಳಿಯೇ ಈ ಪಟ್ಟಣದಲ್ಲಿ ಪ್ರಮುಖವಾಗಿಬಿಟ್ಟಿದೆ.

ಹುಬ್ಬಳ್ಳಿಯ ಒಂದು ಸಾವಿರ ವರ್ಷದ ಇತಿಹಾಸವೇನು ? ಈ ಬಗೆಗೆ ಇಲ್ಲಿನ ಭವಾನಿ ಶಂಕರ ದೇವಾಲಯದಲ್ಲಿರುವ ಶಿಲಾಲೇಖವೇ ಉತ್ತರ ಕೊಡುತ್ತದೆ. ಈ ದೇವಾಲಯದಲ್ಲಿರುವ ಸುವಾಚ್ಯವಾದ ಶಾಸನದಲ್ಲಿ ಹಳ್ಳೂರಿನ ಭವಾನೀಶನಿಗೆ ಪಶ್ಚಿಮ ಚಾಳುಕ್ಯರಾಜ ಭುವನೈಕಮಲ್ಲನು (೧೧ ನೇ ಶತಮಾನ) ಭೂದಾನವಿತ್ತ ಉಲ್ಲೇಖವಿದೆ. ಹುಬ್ಬಳ್ಳಿ, ಪೂರ್ವದ ಹಳ್ಳಿ ಎಂದು ಊರಿಗೆ ಹಿಂದಿನ ಹೆಸರಿತ್ತೆಂದು ತಿಳಿಯುತ್ತದೆ. ಹಳೆಯ ಹುಬ್ಬಳ್ಳಿಯನ್ನೇ ಸ್ಥಳೀಯ ಜನರು ರಾಯರ ಹುಬ್ಬಳ್ಳಿ ಎಂದು ಕರೆಯುವುದುಂಟು. ವಿಜಯ ನಗರದ ರಾಯರಿಂದ ಹುಬ್ಬಳ್ಳಿಯು ನಗರವಾಗಿ ಸ್ಥಾಪಿತವಾದುದೇ ಅದಕ್ಕೆ ಕಾರಣ.

ಇತಿಹಾಸದಲ್ಲಿ ಮೊದಲಬಾರಿ ಹುಬ್ಬಳ್ಳಿಯ ಹೆಸರು ನಮಗೆ ಕಾಣಸಿಗುವುದು ವಿಜಯ ನಗರದ ರಾಯರಿಗೂ ಪೋರ್ಚುಗೀಸರಿಗೂ ನಡೆದ ಒಡಂಬಡಿಕೆಯೊಂದರಲ್ಲಿ. ೧೫೪೭ ರಲ್ಲಿ ಮಾಡಲಾದ ಈ ಒಡಂಬಡಿಕೆಯಲ್ಲಿ "ಒಬೆಲಿ" ಅಥವಾ ಹುಬ್ಬಳ್ಳಿಯು ವಿಜಾಪುರ ದೇಶದ ವಾಣಿಜ್ಯದ ಕ್ಷೇತ್ರವೆಂದು ಪ್ರಸ್ತಾಪಿಸಲಾಗಿದೆ. ೧೬೭೩ ರ ಹೊತ್ತಿಗೆ ಹುಬ್ಬಳ್ಳಿ ಸಂಪನ್ನ ಪಟ್ಟಣವಾಗಿತ್ತು. ವಾಣಿಜ್ಯೋದ್ಯಮಗಳಲ್ಲಿ ಇದಕ್ಕೆ ಇನ್ನಷ್ಟು ಹೆಚ್ಚು ಪ್ರಾಮುಖ್ಯ ಬಂದಿದ್ದಿತು. ಆಗ ಶಿವಾಜಿಯ ಸೇನಾಪತಿ ಅಣ್ಣಾಜಿ ದತ್ತು ಎಂಬವನು ಪಟ್ಟಣವನ್ನು ಸಂಪೂರ್ಣವಾಗಿ ಸೂರೆ ಮಾಡಿದನು. ಪಟ್ಟಣದ ರಕ್ಷಣೆಗಾಗಿ ಇಟ್ಟಿದ್ದ ವಿಜಾಪುರದ ಸೇನೆಯು ಮರಾಠಿಗರು ಸೂರೆ ಮಾಡಿ ಉಳಿದಂಶವನ್ನು ಲೂಟಿ ಮಾಡಿತು !

ಕಾರವಾರದಲ್ಲಿದ್ದ ಬ್ರಿಟಿಶ ಸೇಯ್ಗೆ ಕಾರಖಾನೆಯ ಮಾರಾಟಗಾರನೊಬ್ಬ ಹುಬ್ಬಳ್ಳಿಯಲ್ಲಿರುತ್ತಿದ್ದ. ಈ ಕಾರಖಾನೆಯು ಧಾರವಾಡ ಜಿಲ್ಲೆಯಲ್ಲಿ ೫೦,೦೦೦ ನೇಕಾರರನ್ನು ನೇಮಿಸಿಕೊಂಡಿತ್ತು. ಶಿವಾಜಿಯ ಸೈನಿಕರು ಹುಬ್ಬಳ್ಳಿಯಲ್ಲಿದ್ದ ಬ್ರಿಟಿಶ ಕಾರ್ಖಾನೆಯನ್ನು ಕೂಡ ಲೂಟಿ ಮಾಡಿದರೆಂದು ಬ್ರಿಟಿಶರು ಅವನಲ್ಲಿ ಪರಿಹಾರ ಕೇಳಿದ್ದರು.

ಸುಮಾರು ೧೬೭೫ ರ ಹೊತ್ತಿಗೆ ಇಂಗ್ಲಿಷ ಪ್ರವಾಸಿಕ ಫ್ರಯರನು ಹುಬ್ಬಳ್ಳಿಯು ವಿಜಾಪುರದ ಮಾರ್ಕೆಟ ಪಟ್ಟಣವೆಂದು ಬರೆದಿದ್ದಾನೆ. ೧೭-೧೮ ನೆಯ ಶತಮಾನಗಳಲ್ಲಿ ಹಳೇ ಹುಬ್ಬಳ್ಳಿ ಹಲವುಸಲ ದಾಳಿಗೊಳಗಾಗಿ ಮೊಗಲ, ಮರಾಠ, ಮೈಸೂರು ಮತ್ತು ಕೊನೆಗೆ ಇಂಗ್ಲೀಷರ ವಶಕ್ಕೆ ಹೋಯಿತು. ೧೬೭೭ರಲ್ಲಿ ಔರಂಗಜೇಬನ ಸೈನ್ಯವು ಈ ಪ್ರದೇಶವನ್ನು ಗೆದ್ದಾಗ ಟಾರಿನ ವಂಶದ ತನ್ನ ಮುಸ್ಲಿಮ ಸೇನಾಪತಿಯೊಬ್ಬನ ಮಗನಿಗೆ ಹುಬ್ಬಳ್ಳಿ ಮೊದಲಾದ ಭಾಗಗಳನ್ನು ಜಾಗೀರಿಯೆಂದು ಕೊಟ್ಟನು. ಶಿವಾಜಿಯ ಮಗ ಸಂಭಾಜಿಯು ಈ ಪ್ರದೇಶವನ್ನು ಗೆದ್ದ ಮೇಲೆ ಔರಂಗಜೇಬನ ಮಗ ಸುಲ್ತಾನ ಮುವಾಜಿಮನು ೧೬೮೫ ರಲ್ಲಿ ಅದನ್ನು ತಿರುಗಿ ವಶಪಡಿಸಿಕೊಂಡು ಟಾರಿನ ವಂಶಜರಿಗೇ ಕೊಟ್ಟನು. ೧೬೮೯ ರಲ್ಲಿ ಕಿತ್ತೂರು ದೇಸಾಯಿಯ ಪರಾಕ್ರಮಕ್ಕೆ ಬಹುಮಾನವೆಂದು ಹಳೇ ಹುಬ್ಬಳ್ಳಿ ಜಿಲ್ಲೆಯ ಸರದೇಶಮುಖಿಯನ್ನು ಕೊಡಲಾಯಿತು. ಅವನ ಕೈಯಲ್ಲಿ ಅದು ಬಹುಕಾಲ ಉಳಿದಂತಿಲ್ಲ.

ಹೊಸ ಹುಬ್ಬಳ್ಳಿ ಕಿಲ್ಲೆಯನ್ನು ಕಟ್ಟಿದ ೨೩ ವರ್ಷಗಳಲ್ಲಿ ಮರಾಠರು ದಾಳಿಮಾಡಿ ಕೆರೂರು, ಬೆಳಗಾವಿ ಕಿಲ್ಲೆಗಳೊಡನೆ ಹೊಸ ಹುಬ್ಬಳ್ಳಿ ಕಿಲ್ಲೆಯನ್ನು ಸವಣೂರು ನವಾಬನಿಂದ ಕಸಿದುಕೊಂಡರು. ಹಳೆ ಹುಬ್ಬಳ್ಳಿಯನ್ನು ಮಾತ್ರ ಟಾರಿನ ವಂಶದವರ ಕೈಯಲ್ಲಿಯೇ ಬಿಡಲಾಯಿತು. ೧೭೭೮ ರಲ್ಲಿ ಅದು ಮೈಸೂರಿನ ಹೈದರಲಿಯ ವಶವಾಯಿತು. ಅವನು ಮಲಪ್ರಭೆಯ ವರೆಗಿನ ಮುಂಬಯಿ ಕರ್ನಾಟಕವನ್ನೆಲ್ಲ ಗೆದ್ದನು. ಆದರೆ ೧೭೭೯ ರಲ್ಲಿ ಸವಣೂರು ನವಾಬನ ಮಗಳನ್ನು ಅವನು ತನ್ನ ಮಗ ಅಬ್ದುಲ್ ಹಕೀಮನಿಗೆ ತಂದುಕೊಂಡ ಮೇಲೆ ಸವಣೂರು ನವಾಬಶಾಹಿಯಲ್ಲಿ ಮರಾಠರು ಗೆದ್ದುಕೊಂಡಿದ್ದ ಭಾಗವು ತಿರುಗಿ ನವಾಬರಿಗೆ ಕೊಡಲ್ಪಟ್ಟಿತು. ಆದರೆ

ಸವಣೂರು ನವಾಬನಿಗೂ ಹೈದರನ ಮಗ ಟಿಪ್ಪುವಿಗೂ ಜಗಳ ಬಂದದ್ದರಿಂದ ೧೭೮೩ ರಲ್ಲಿ ಟಿಪ್ಪು ಹಳೆ ಹುಬ್ಬಳ್ಳಿಯನ್ನು ಮತ್ತೆ ನವಾಬರಿಂದ ಕಸಿದುಕೊಂಡನು. ೧೭೮೭ ರಲ್ಲಿ ಅದನ್ನು ಪೇಶ್ವೆಯ ಪರವಾಗಿ ತುಕೋಜಿ ಹೋಳ್ಕರನು ಮತ್ತೆ ಗೆದ್ದು ಟಾರಿನ ವಂಶದವರಿಗಿತ್ತನು. ೧೭೮೮ ರಲ್ಲಿ ಅದನ್ನು ಪುನಃ ಟಿಪ್ಪು ಕಿತ್ತುಕೊಂಡನು. ೧೭೯೦ ರಲ್ಲಿ ಹಳೆ ಹುಬ್ಬಳ್ಳಿ ಜಾಗಿರಿಯನ್ನು ಪರಶುರಾಮ ಭಾವು ಪಟವರ್ಧನನು ಗೆದ್ದು ಟಾರಿನ ಕುಟುಂಬದವರಲ್ಲಿ ಹಂಚಿದನು.

೧೮೧೭-೧೮ ರ ಕೊನೆಯ ಮರಾಠಾ ಯುದ್ಧದಲ್ಲಿ ಜನರಲ್ ಮುನ್ರೊ ಮತ್ತು ಜನರಲ್ ಪ್ರಿಟ್‌ಜ್ಲರರು ಹಳೇ ಹುಬ್ಬಳ್ಳಿಯನ್ನು ವಶಪಡಿಸಿಕೊಂಡರು. ೧೮೨೦ ರಲ್ಲಿ ಹೊಸ ಹುಬ್ಬಳ್ಳಿಯನ್ನೂ ಸಾಂಗ್ಲಿಯ ಚಿಂತಾಮಣಿ ಅಪ್ಪಾಸಾಹೇಬನು ಇಂಗ್ಲೀಷರಿಗೆ ಬಿಟ್ಟುಕೊಟ್ಟನು.

ಸುಮಾರು ೯ ಶತಮಾನಗಳಿಗೂ ಮಿಕ್ಕಿದ ಹುಬ್ಬಳ್ಳಿಯ ಇತಿಹಾಸದಲ್ಲಿ ಜನರಿಗೆ ನೆಮ್ಮದಿ ಇದ್ದಂತೆ ಕಾಣುವುದಿಲ್ಲ. ರಾಜ್ಯ ಗಳಿಸುವುದು ಸೂರೆ ಮಾಡುವುದು ಹಣ ಸಂಪಾದಿಸುವುದು ಇಷ್ಟೇ ಉದ್ದೇಶಗಳು ಹುಬ್ಬಳ್ಳಿಯ ಮೇಲೆ ಹಲವಾರು ಪ್ರಭುತ್ವದವರು ಕಣ್ಣಿಡಲು ಕಾರಣವಾದವು.

ಹುಬ್ಬಳ್ಳಿಯಲ್ಲಿರುವ ಅತ್ಯಂತ ಪ್ರಾಚೀನ ದೇವಾಲಯ ಭವಾನೀಶಂಕರ ದೇವಾಲಯ. ಇದಲ್ಲದೆ ಇತರ ಎಲ್ಲ ಜಾತಿ ಪಂಥಗಳಿಗೆ ಸೇರಿದ ಸುಮಾರು ೩೫ ದೇವಾಲಯಗಳು ಹುಬ್ಬಳ್ಳಿಯಲ್ಲಿವೆ. ಆದರೆ ಶಿಲ್ಪಕಲೆಗಾಗಲಿ ಇತರ ವಿಷಯಗಳಲ್ಲಾಗಲಿ ಅವು ಅಷ್ಟು ಪ್ರಸಿದ್ಧವಾಗಿಲ್ಲ.

ಹುಬ್ಬಳ್ಳಿಯ ಮೂರುಸಾವಿರ ಮಠ ಇತ್ತೀಚಿನದಾದರೂ ಅದು ವೀರಶೈವ ಬಂಧುಗಳನ್ನು ಆಕರ್ಷಿಸುವ ಪ್ರಮುಖ ಕ್ಷೇತ್ರವೆಂದು ಹೇಳಬಹುದು.

ಹುಬ್ಬಳ್ಳಿಯಲ್ಲಿ ಹೊಸತಾಗಿ ಸಿದ್ಧಾರೂಢಮಠ ಸ್ಥಾಪನೆಯಾಗಿದ್ದು ಈ ಕಾಲದಲ್ಲಿ ಸಿದ್ಧಾರೂಢ ಮಠದ ಜಾತ್ರೆ, ಜನ ಸೇರಲು ಒಂದು ಅವಕಾಶವಾಗಿದೆ.

ಇಂದು ಕರ್ನಾಟಕದ ಉದ್ದಿಮೆಯಲ್ಲಿ ಹುಬ್ಬಳ್ಳಿಯ ಸ್ಥಾನ ಏನು ? ಇದಕ್ಕೆ ಉತ್ತರ ದುಡಿಯುವ ಜನರೇ ಹೇಳಬೇಕು. ಏಕೆಂದರೆ ಹುಬ್ಬಳ್ಳಿಯು ಈ ಜಿಲ್ಲೆಯ ಉತ್ತಮ ಹತ್ತಿ ಮತ್ತು ಶೇಂಗಾ ಬೆಳೆಗಳ ಮುಖ್ಯ ವ್ಯಾಪಾರ ಕೇಂದ್ರ, ಹುಬ್ಬಳ್ಳಿಯ ಸುತ್ತಮುತ್ತ ನೇಕಾರಿಕೆಯ ಕಸಬು ಹೆಚ್ಚು ಅರಳೆ ಜಿನ್ನುಗಳು ಬಹಳ; ಕರ್ನಾಟಕಕ್ಕೇ ಪ್ರಮುಖವಾದ ರೇಲ್ವೆ ವರ್ಕ-ಶಾಪ್ ಹುಬ್ಬಳ್ಳಿಯಲ್ಲಿದೆ.

ಹುಬ್ಬಳ್ಳಿಯು ಇಂದು ಕರ್ನಾಟಕದ ಪ್ರಮುಖ

## ಹುಬ್ಬಳ್ಳಿಯ ಹಕ್ಕಿ ನೋಟ

**ಉತ್ತರ ಅಕ್ಷಾಂಶ: ೧೫°.೨೦' ಪೂರ್ವ ರೇಖಾಂಶ: ೭೫°. ೧೩' ಸಮುದ್ರ ಮಟ್ಟದಿಂದ ೨೫೦೦ ಅಡಿ ಎತ್ತರವಾಗಿದೆ ಹುಬ್ಬಳ್ಳಿ.**

**೧೮೮೧ ರಲ್ಲಿ ಇಲ್ಲಿನ ಜನಸಂಖ್ಯೆ ೩೬,೬೭೭ ಇತ್ತು. ಆಗ ಮುಂಬೈ ರಾಜ್ಯದಲ್ಲಿ ೧೦ ನೆ ಪಟ್ಟಣವಿದಾಗಿತ್ತು.**

**ಇಂದಿನ ಜನಸಂಖ್ಯೆ (೧೯೫೧ ರ ಜನಗಣನೆಯಂತೆ) ೧,೨೯,೬೦೯. ಭಾಷಾವಾರು ಶೇಕಡಾ : ಕನ್ನಡ ೪೩.೨; ಉರ್ದು ೨೪.೦; ಮರಾಠಿ ೧೦.೦; ಇತರ ೨೨.೦.**

**ಇಂದು ನಗರದಲ್ಲಿ ೩ ಕಾಲೇಜುಗಳಿವೆ. ೧೭ ಹಾಯಸ್ಕೂಲುಗಳೂ ೨ ಶಿಕ್ಷಕರ ಕಾಲೇಜುಗಳೂ ಇವೆ. ಟೆಕ್ನಿಕಲ್ ಹಾಯಸ್ಕೂಲ್ ೧, ಇಂಡಸ್ಟ್ರಿಯಲ್ ಹ್ಯಾಸ್ಕೂಲ್ ೧; ಮುಂಬಯಿ ಕರ್ನಾಟಕ ಪ್ರದೇಶದಲ್ಲಿ ಪ್ರಸಿದ್ಧವಾದ ಕುರುಡರ ಶಾಲೆಯಿದೆ; ೬೪ ಪ್ರೈಮರಿ ಶಾಲೆಗಳಿವೆ.**

ಔದ್ಯೋಗಿಕ ನಗರಗಳಲ್ಲಿ ಒಂದಾದರೂ ಕೆ. ಜಿ. ಎಫ್. ಮುಂತಾದ ಇತರ ನಗರಗಳ ಕಾರ್ಮಿಕರಷ್ಟು ಇಲ್ಲಿನ ಕಾರ್ಮಿಕರು ಸಂಘಟಿತರಾಗಿಲ್ಲ. ಬೇರೆ ಬೇರೆ ರಾಜಕೀಯ ಪಕ್ಷಗಳು ಅವರನ್ನು ತಂತಮ್ಮ ಹಿಡಿತಕ್ಕೆ ತರಲು ಯತ್ನಿಸುತ್ತವೆಯಾದರೂ ಕೂಲಿಕಾರರ ಬಲ ಇನ್ನೂ ಹೆಚ್ಚಿಲ್ಲ.

ಹುಬ್ಬಳ್ಳಿಯ ವೈಶಿಷ್ಟ್ಯವೇನು ? ಈ ಪ್ರಶ್ನೆಗೆ ಒಬ್ಬೊಬ್ಬರಿಂದ ಒಂದೊಂದು ತರದ ಉತ್ತರ ಬರಬಹುದು. ಜನರ ಸರಳತೆ ಎಂದು ಒಬ್ಬನು ಉತ್ತರ ಕೊಟ್ಟರೆ ಮೂಗು ಮುಚ್ಚಿಕೊಂಡು ನಡೆಯಬೇಕಾಗುವ ರಸ್ತೆಗಳು, ಬಡತನದ ಕೊಳಕು ಪಂಜೆಯ ಜನರು, ಅವರಲ್ಲಿರುವ ನಿಷ್ಠೆ ಎಂದು ಇನ್ನೊಬ್ಬನು ಹೇಳಬಹುದು.

ಹುಬ್ಬಳ್ಳಿ ಹೇಗಾಗಬೇಕು? ಎಂದಾದರೂ ಪ್ರಶ್ನಿಸಿದರೆ ಮೊದಲು ಕೊಡಬಹುದಾದ ಉತ್ತರವೆಂದರೆ ಅದೊಂದು ಯೋಜನಾಬದ್ಧವಾಗಿ ಕಟ್ಟಿದ ನಗರವಾಗಬೇಕು. ಎಲ್ಲ ಜನರಿಗೂ ಗಾಳಿ ಬೆಳಕು ದೊರೆವ ಒಳ್ಳೆಯ ಮನೆ ದೊರೆಯುವಂತಾಗಬೇಕು. ವಾಹನಗಳಿಗೆ ಹೋಗಲು ಟಾರುರಸ್ತೆ ವಿಸ್ತರಿಸುವಂತೆಯೇ ಪಕ್ಕದಲ್ಲಿ ನಡೆದು ಹೋಗುವವರಿಗೆ 'ಕಾಲುದಾರಿ'ಯು ಏರ್ಪಾಡಾಗಬೇಕು. ನಗರದಲ್ಲಿನ ಕೊಳಕು ಪ್ರದೇಶದ ನಿರ್ಮೂಲವಾಗದಿದ್ದರೆ ಹೋಗಲಿ ಶುಚಿ ಪ್ರದೇಶಗಳೂ ಕಣ್ಣಿಗೆ ಕಾಣುವಂತಾಗಬೇಕು.

ಹುಬ್ಬಳ್ಳಿಯ ನಗರಸಭೆ ಮೊನ್ನೆ ಮೊನ್ನೆ ತನ್ನ ಶತಸಾಂವತ್ಸರಿಕ ಉತ್ಸವವನ್ನಾಚರಿಸಿತು. ಅದರ ಉತ್ಪನ್ನವೂ ಲಕ್ಷಾಂತರ ರೂಪಾಯಿಯಷ್ಟಿದೆ. ಆದರೆ ನಗರ ಸುಧಾರಣೆಯ ಯತ್ನ ಪ್ರಾರಂಭವಾದದ್ದು ಕಳೆದ ೧೫--೧೬ ವರ್ಷಗಳಿಂದ ಮಾತ್ರ. ಮೊದಲನೇ ಮುಂಬಯಿ ಕಾಂಗ್ರೆಸ್ ಸರಕಾರವು ಅಂದಿನ ನಗರ ಸಭೆಯನ್ನು ರದ್ದುಗೊಳಿಸಿದ ಮೇಲೆಯೇ ಸುಧಾರಣೆ ಪ್ರಾರಂಭವಾಯಿತು. ಮೈಸೂರಿನ ನಗರಸುಧಾರಣೆಯ ಪರಂಪರೆಯಿಂದ ಈ ನಗರದ ಸುಧಾರಣೆ ಭರದಿಂದ ಆಗಲೆಂದು ಆಶಿಸಬಹುದು.



## ಒರೆಗಲ್ಲು

"ರಾಯರೇ, ಅಂ . . ಅ . . ನಾನು . . ನನಗೆ . ."

"ಅಡ್ಡಿ ಇಲ್ಲ. ಆಗಬಹುದು."

"ಅಂದರೆ . . ಏ . ಏನಾಗಬಹುದು ಅಂ೦೦ ?"

"ನನ್ನ ಮಗಳನ್ನು ನೀನು ಲಗ್ನವಾಗಬಹುದು. ಅದನ್ನೇ ಅಲ್ಲವೇ ನೀನು ಕೇಳಬೇಕೆಂದಿದ್ದು."

"ನನಗೆ ಒಂದೈವತ್ತು ರೂಪಾಯಿ ಸಾಲ ಕೊಡುತ್ತೀರಾ ಎಂದು . . ."

"ಸಾಧ್ಯವಿಲ್ಲ. ನಿನ್ನ ಪರಿಚಯು ಕೂಡ ನನಗೆ ಸರಿಯಾಗಿಲ್ಲ. ಐವತ್ತು ರೂಪಾಯಿ ಸಾಲ ಕೊಡುವದಾದರೂ ಹೇಗೆ ?"

## ರೂಪಾಂತರ

"ನಿಮ್ಮ ಎರಡನೆ ಕಾದಂಬರಿಯು ಕಥಾವಸ್ತುವನ್ನು ಎಲ್ಲಿಂದ ಹುಡುಕಿದಿರಿ ?"

"ನನ್ನ ಮೊದಲನೆ ಕಾದಂಬರಿಯು ಚಿತ್ರಪಟದ ರೂಪಾಂತರದಿಂದ."

# ಇದುವೆ ಜೀವ, ಇದು ಜೀವನ

ಅಂದು ನಾನು ಸೊರಬದಿಂದ ಬೇರೆ ಊರಿಗೆ ಹೊರಟಿದ್ದೆ. ಬಸ್ ಹತ್ತಿ ಸ್ವಲ್ಪ ಹೊತ್ತು ಕಾದು, ಸಿಳ್ಳು ಹಾಕುತ್ತ ಸ್ಟೇರಿಂಗ್ ಮುಂದೆ ಕುಳಿತಿದ್ದ ಡ್ರೈವರನಿಗೆ ಕೇಳಿದೆ: "ಬಸ್ ಹೊರಡಲು ಇನ್ನೂ ತಡವೇನಯ್ಯಾ?" ನನಗೆ ಚೆನ್ನಾಗಿ ಗುರುತಿದ್ದದ್ದರಿಂದ ಡ್ರೈವರ್ ಹೇಳಿದ: "ಇಲ್ಲಾ ಸಾರ್, ನಮ್ಮ ಮಾಲಕರ ಪೈಕಿ ಒಬ್ಬರು ಬರುವವರಿದ್ದಾರೆ. ಅವರು ಇನ್ನೂ ಬಂದಿಲ್ಲ. ಆದಕ್ಕಾಗಿ ತುಸು ಕಾಯುತ್ತಿದ್ದೇನೆ ಅಷ್ಟೇ. ಬರೇ ಹತ್ತು ನಿಮಿಷ.''

ಅಷ್ಟರಲ್ಲಿ ಒಬ್ಬ ಶೀನಿಯ ಅಧಿಕಾರಿಗಳು ಬಂದು ಬಸ್ ಹತ್ತಿದರು. ಒಂದು ನಿಮಿಷದ ನಂತರ "ಏನಯ್ಯಾ, ಬಸ್ ಯಾಕೆ ಇನ್ನೂ ಬಿಡೋದಿಲ್ಲ? ನನಗೆ ಅರ್ಜಂಟು ಕೆಲಸ ಇದೆ. ಸ್ಟಾರ್ಟ ಮಾಡು'' ಎಂದರು.

ಡ್ರೈವರನಿಗೆ ಉಭಯಸಂಕಟ. ಅವನು ಮತ್ತೂ ಬಸ್ ಹೊರಡಿಸದೆ ಇರಲು, ಅಧಿಕಾರಿಗಳು ಬಿಗಿಯಾಗಿ, "ಏನು ಬಸ್ ಬಿಡುತ್ತೀಯೋ ಇಲ್ಲವೋ, ನನಗೆ ತಡವಾಗುತ್ತದೆ ಅಂದರೆ ತಿಳಿಯೋದಿಲ್ಲವೇ?'' ಎಂದು ಗದಗಿಸಿದರು.

"ಬಿಡ್ತೀನಿ ಸಾರ್'' ಎಂದು ಡ್ರೈವರ ಬಸ್ ಸ್ಟಾರ್ಟ ಮಾಡುತ್ತ, ಅಲ್ಲೇ ನಿಂತಿದ್ದ ಕೂಲಿಯ ಹತ್ತಿರ ಏನೇನೊ ಪಿಸುಗುಟ್ಟಿದ. ಬಸ್ ಹೊರಟಿತು.

ಒಂದು ಫರ್ಲಾಂಗು ಹೋಗಿತ್ತೋ ಇಲ್ಲವೋ ಬಸ್‌ಗೆ ಏನೋ ಆಗಿ ನಿಂತುಬಿಟ್ಟಿತು. ಏನು ಮಾಡಿದರೂ ನಾನೊಲ್ಲೆ ಎಂದಿತು. ಆ ಮೇಲೆ ಡ್ರೈವರ ಬಾನೆಟ್ ತೆರೆದು ಸ್ಪಾನರ್ ಹಿಡಕೊಂಡು ಏನನ್ನೋ ತಿರುವಲು ಸುರು ಮಾಡಿದ. ಆಫೀಸರರು, "ಅರ್ಜೆಂಟ್ ಇದ್ದಾಗಲೇ ಇವರ ಹಣೆಬರೆಹ ಹೀಗೆ'' ಎಂದು ಗೊಣಗುಟ್ಟುತ್ತ ಕುಳಿತರು.

ಹತ್ತು ನಿಮಿಷಗಳ ನಂತರ ಒಬ್ಬ ಮಹಾಶಯರು ಓಡುತ್ತೋಡುತ್ತ ಬಂದರು. ಮಾಲಿಕರ ಪೈಕಿಯವರು ಅವರೇ.

...ರು. ಒಂದೆರಡು ನಿಮಿಷಗಳ ಮೇಲೆ ಬಸ್ ... ರಾಯಿತೆಂದು ಡ್ರೈವರ ಬಾನೆಟ್ ಮುಚ್ಚಿ, ಸ್ಟಾ... ರ್ಟ ಮಾಡಿ ಹೊರಟ.

ಮಾಲಿಕರ ಪೈಕಿಯವರು ಅಧಿಕಾರಿಗೆ ನಮಸ್ಕಾರ ಮಾಡಿ, "ನೋಡಿ ಸಾರ್, ಈಗಿನ ಡ್ರೈವರುಗಳೇ ಹೀಗೆ. ಬಸ್ ಹೊರಡೋ ಮುಂಚೆ ಸರಿಯಾಗಿ ನೋಡಿಕೊಳ್ಳೋದೇ ಇಲ್ಲ. ಸುಮ್ಮನೆ ಪ್ಯಾಸೆಂಜರರಿಗೆ ತೊಂದರೆ'' ಎಂದು ಕ್ಷಮಾಪಣೆ ಕೇಳುತ್ತಿದ್ದಾಗ, ಡ್ರೈವರ ನನ್ನ ಕಡೆ ಕಣ್ಣು ಮಿಟುಕಿಸಿ ಅಧಿಕಾರಿಗೆ ಕಾಣದ ಹಾಗೆ ನಗುತ್ತಿದ್ದ.

— ಆರ್ಯ, ಸಾಗರ.

ಅಕ್ಟೋಬರ ೨೪ ರಂದು ನಾನು ಪ್ರಸಿದ್ಧ ಲೇಖಕರೊಬ್ಬರ "...ಮಲ್ಲಿ'' ಎಂಬ ಪುಸ್ತಕವನ್ನು ಪುಸ್ತಕಾಲಯದಿಂದ ತೆಗೆದುಕೊಂಡಿದ್ದೆ. ದೀಪಾವಳಿಯ ಊಟದಿಂದಲೋ ಏನೋ ಕೆಲವು ಪುಟ ಓದುವುದರೊಳಗೆ ಬೇಸರಿಕೆಯ ಆಕಳಿಕೆ ಬರತೊಡಗಿತು. ಜೇಬಿನಲ್ಲಿದ್ದ ಐದು ರೂಪಾಯಿ ನೋಟು ತೆಗೆದು ಪುಸ್ತಕದಲ್ಲಿ ಪುಟದ ಗುರುತಿಗಾಗಿ ಇಟ್ಟು ಮೇಜಿನ ಮೇಲೆ ಮಡಗಿ ಮಲಗಿಬಿಟ್ಟೆ.

ನವಂಬರ ೯ ರಂದು ಅದನ್ನು ತಿರುಗಿ ಕೊಡುವ ದಿನ ಬಂತು. ಓದದೇ ಅದನ್ನು ಹಾಗೇ ತಿರುಗಿ ಕೊಟ್ಟುಬಿಟ್ಟೆ. ಮೂರನೇ ದಿನ

ನನಗೆ ಅದರಲ್ಲಿದ್ದ ನೋಟಿನ ನೆನಪು ಬಂತು. ಪುಸ್ತಕಾಲಯಕ್ಕೆ ಧಾವಿಸಿ ಕೇಳಿದೆ. ಆದರೆ ನಾನು ಮರಳಿಸಿದ ದಿನವೇ ಅದನ್ನು ಬೇರೊಬ್ಬ ಓದುಗ ಒಯ್ದುಬಿಟ್ಟಿದ್ದ.

ನಾನು ನೋಟಿನ ಆಶೆಯನ್ನು ಬಿಟ್ಟು ಕುಳಿತೆ. ಆದರೂ ನನ್ನಂತೆ ಅವನಿಗೂ ಬೇಸರ ಬಂದಿದ್ದರೆ ನನ್ನ ಹಣ ಸಿಕ್ಕೀತು ಎಂದೊಂದು ಆಸೆ ಉಳಿದಿತ್ತು.

ದಿನವೂ ಪುಸ್ತಕಾಲಯಕ್ಕೆ ಎಡತಾಕತೊಡಗಿದೆ. ೧೪ ನೇ ನವಂಬರದಂದು ಪುಸ್ತಕ ಮರಳಿ ಬಂದು ಕಪಾಟಿನಲ್ಲಿ ವಿರಾಜಮಾನವಾಗಿತ್ತು. ನಾನು ಅದನ್ನು ತೆಗೆಸಿ, ಆಶೆ-ನಿರಾಶೆಗಳ ನಡುವೆ ಹೊಯ್ದಾಡುತ್ತ ತೆರೆದೆ. ಅಲ್ಲಿ ನನ್ನ ನೋಟು ಇದ್ದಕ್ಕಿದ್ದಂತೆ ಪವಡಿಸಿದ್ದುದನ್ನು ನೋಡಿ ನನಗೆ ಆದ ಸಾನಂದಾಶ್ಚರ್ಯವನ್ನು ಹೇಳತೀರದು. "ಈ ಗಿರಾಕಿ ನನ್ನಷ್ಟು ದೂರ ಕೂಡ ಸಾಗಲಿಲ್ಲ ಅಂತ ಕಾಣುತ್ತೆ" ಎಂದುಕೊಂಡರೂ ಇಂಥ ನೀರಸ ಪುಸ್ತಕ ಬರೆದು ನನ್ನ ನೋಟು ಉಳಿಸಿದ ಲೇಖಕರನ್ನು ಮನಸಿನಲ್ಲೇ ವಂದಿಸಿದೆ.

—ಎಂ. ಆರ್. ಶಿವಶರಣ, ಕಲಬುರ್ಗಿ.

ಅಣ್ಣಾ, ನಾನು ಜಗಳದಲ್ಲಿ ತೊಡಗಿ ಅದೆಷ್ಟೋ ಹೊತ್ತಾಗಿದ್ದರೂ ನಮ್ಮ ಜಗಳ ಮುಗಿಯಲಿಲ್ಲ. ನಮ್ಮ ಕಲಹ ಅಪ್ಪ ಅಂದೇ ಪೇಟೆಯಿಂದ ತಂದು ನನ್ನ ಕೈಲಿತ್ತ ಕಂಪಾಸ್ ಬಾಕ್ಸಿಗಾಗಿ. ಅಣ್ಣನ ಹತ್ತಿರ ಮೊದಲು ಒಂದು ಬಾಕ್ಸ ಇತ್ತಾದರೂ ಈಗ ಆತನಿಗೆ ಹೊಸದೇ ಬೇಕಾಗಿತ್ತು. ಅವನು ತನ್ನ ಹಳೆಯದನ್ನು ನನಗೆ ಕೊಟ್ಟು, ಹೊಸದನ್ನೇಕೆ ತೆಗೆದುಕೊಳ್ಳಬೇಕೆಂದು ನನಗೆ ಹೊಟ್ಟೆಕಿಚ್ಚು.

ಜಗಳ ಬಿಸಿಯೇರಿತು, ಅಣ್ಣ ನನ್ನನ್ನು ಹರಿದು ತಿನ್ನುವಂತೆ ನೋಡತೊಡಗಿದ್ದ. ಗಂಟೆಗಳೆರಡು ಸರಿದರೂ ನಮ್ಮ ಕಾದಾಟ ನಿಲ್ಲಲೇ ಇಲ್ಲ. ಅಮ್ಮ ಎಷ್ಟೋ ಹೇಳಿದಳು. "ಶಾಲೆ ಕಲಿಯುವ ನಿಮಗೇನೂ ಬುದ್ಧಿ ಇಲ್ಲ. ಹುಂಬರಂತೆ ಬಡಿದಾಡುತ್ತೀರಿ. ಹಳೆಯದೇನು? ಹೊಸದೇನು? ಕಲಿಯಲಿಕ್ಕೆ ಯಾವದಾದರೊಂದು ಇದ್ದರಾಯಿತು." ನಾನೂ ಒಳ್ಳೇ ಸಿಟ್ಟಿನಿಂದಲೇ ಹೇಳಿದೆ: "ಅವನು ಬಿಟ್ಟದ್ದೆಲ್ಲ ನಾನು ತೆಗೆದುಕೊಳ್ಳಬೇಕೆ?" ಅಮ್ಮ ಗದರಿಸಿದಳು: "ಹೆಣ್ಣಾಗಿ ನೀನು ಕೂಡ ಎಷ್ಟು ಬಡಿದಾಡುತ್ತೀಯೇ!" ಅಮ್ಮ ನನ್ನನ್ನೆ ಬಯ್ದುಳೆಂದು ನನ್ನ ಕೋಪ ಮತ್ತೂ ಉಕ್ಕಿ, "ನೋಡು ಆತನದೆಷ್ಟು ಸೊಕ್ಕು" ಎಂದೆ.

ಅಣ್ಣನ ಪಿತ್ತ ನೆತ್ತಿಗೇರಿತು. "ಸೊಕ್ಕು ಗಿಕ್ಕು ಎಂದು ಬಹಳ ಮಾತಾಡುತ್ತೀಯೇ ನಿನ್ನನ್ನು ಕೊಂದುಹಾಕುತ್ತೇನೆ" ಎಂದು ಹಲ್ಲು ಕಡಿಯುತ್ತ ಕೈಲಿದ್ದ ಫೂಟುಪಟ್ಟಿಯನ್ನು ಬೀಸಿಕೊಂಡೇ ಬಂದ. ನಾನು ರಭಸದಿಂದ ಹೊರನುಗ್ಗಿದೆ. ಭರದಿಂದ ಬರುವ ಕಾರಿಗೆ ಎದುರಾದೆ.

ಇನ್ನೇನು ನನ್ನ ಇಹಲೋಕ ಯಾತ್ರೆ ಮುಗಿಯಿತೆಂದುಕೊಂಡೆ. ಆದರೆ "ಅಯ್ಯೋ ಲಕ್ಷ್ಮೀ ಕಾರಿನಡಿ ಸಿಕ್ಕಿಯೇ" ಎಂದವನೇ ನನ್ನಣ್ಣ ಕೈಹಿಡಿದು ನನ್ನನ್ನು ಕಸುವಿನಿಂದ ಪಕ್ಕಕ್ಕೆಳೆದುಕೊಂಡ. ಅಣ್ಣನ ಮೇಲಿನ ಕ್ರೋಧದಿಂದ ಕೆಂಪಾದ ಮುಖದಿಂದ ಅಮ್ಮ "ಯಾಕಪ್ಪಾ ಅವಳನ್ನು ಉಳಿಸಿದಿ? ನೀನು ಕೊಲ್ಲದೆ ತಾನೇ ಸಾಯುತ್ತಿದ್ದಳು" ಎಂದಾಗ ಅಣ್ಣ ಮುಖ ತಗ್ಗಿಸಿ ಕಂಪಾಸ್ ಬಾಕ್ಸನ್ನು ನನ್ನೆದುರಿಗಿಟ್ಟು ಅಮ್ಮನಿಗೆ ನಮಸ್ಕರಿಸಿದ.

ನಾನು ಅದನ್ನೊಯ್ದು ಅಣ್ಣನ ಚೀಲದಲ್ಲಿಟ್ಟು ಹಳೆಯದನ್ನು ನನ್ನ ಚೀಲಕ್ಕೆ ಸೇರಿಸಿದೆ.

—ಲಕ್ಷ್ಮೀ ನ. ಕಡಕೋಳ, ಧಾರವಾಡ.

# ಭಾರತೀಯರ ಸ್ವಭಾವದೋಷಗಳೇನು ?

ಭಾರತವನ್ನು ಗೆದ್ದ ಮೊಗಲ ಸಮ್ರಾಟ ಬಾಬರನು ಭಾರತದ ಬಗ್ಗೆ ಕೆಲ ಅಪ್ರಿಯ ಸಂಗತಿಗಳನ್ನು ತನ್ನ ದಿನಚರಿಯಲ್ಲಿ ಬರೆದಿಟ್ಟಿದ್ದಾನೆ. "ಹಿಂದುಸ್ತಾನದಲ್ಲಿ ಸುಖಾವಹವಾದ ಸಂಗತಿಗಳು ವಿರಳ. ಜನರು ಚೆಲುವರಲ್ಲ. ಅವರಲ್ಲಿ ಸ್ನೇಹಪೂರ್ಣ ಸಾಮಾಜಿಕ ಸಂಪರ್ಕವಾಗಲಿ ಮನಬಿಚ್ಚಿ ಮಾತಾಡುವುದಾಗಲಿ ಕಾಣಿಸದು. ಅವರಲ್ಲಿ ಪ್ರತಿಭೆಯಿಲ್ಲ, ಮಾನಸಿಕ ವೈಶಾಲ್ಯವಿಲ್ಲ, ಸೌಜನ್ಯದ ನಡತೆಯಿಲ್ಲ, ದಯಾಭಾವವಾಗಲಿ ಆತ್ಮೀಯತೆಯಾಗಲಿ ಇಲ್ಲ."

ಬಾಬರನ ೧೬ ನೇ ಶತಮಾನದ ಈ ದಿನಚರಿಯನ್ನು ೧೯೨೧ ರಲ್ಲಿ ಇಂಗ್ಲೀಷಿನಲ್ಲಿ ಪ್ರಕಟಿಸಿದ ಸಂಪಾದಕರು ಒಂದು ಟಿಪ್ಪಣಿ ಬರೆದು ಇಂದಿಗೂ ಭಾರತೀಯರ ಬಗ್ಗೆ ಮೇಲ್ವರ್ಗದ ಯುರೋಪಿಯನ್ನರ ಅಭಿಪ್ರಾಯ ಬಾಬರನ ಅಭಿಪ್ರಾಯದಂತೆಯೇ ಇದೆ ಎಂದು ಹೇಳಿದ್ದಾರೆ.

ಪ್ರಸಿದ್ಧ ಲೇಖಕ ಖುಶವಂತ ಸಿಂಗರು ಇದನ್ನೋದಿ ಬಾಬರನ ಈ ಅನುದಾರ ಅಭಿಪ್ರಾಯಗಳು ಇಂದಿನ ದಿನಕ್ಕೆ ಎಷ್ಟು ಅನ್ವಯಿಸುತ್ತವೆಂದು ಪರೀಕ್ಷಿಸುವ ಯತ್ನ ಕೈಕೊಂಡರು. ಅವರು ಭಾರತೀಯರ ಚಾರಿತ್ರ್ಯ ಪರೀಕ್ಷೆಯನ್ನು ಎರಡು ಪ್ರಶ್ನೆಗಳಾಗಿ ವಿಂಗಡಿಸಿದರು.

೧. ನಮ್ಮ ಬಗ್ಗೆ ನಮ್ಮ ಸ್ವಂತ ಅಭಿಪ್ರಾಯ ಹೇಗಿದೆ?

೨. ಇತರ ದೇಶೀಯರು ನಮ್ಮನ್ನು ಕುರಿತು ಏನೆಂದುಕೊಳ್ಳುತ್ತಿದ್ದಾರೆ?

ಅವರು ವಿವಿಧ ವರ್ಗಗಳ ತಮ್ಮ ಭಾರತೀಯ ಮಿತ್ರರಿಗೆ ಅನಿರೀಕ್ಷಿತವಾಗಿ ಈ ಸವಾಲು ಹಾಕಿದರು: "ಭಾರತೀಯ ಸ್ವಭಾವದ ಮುಖ್ಯ ಲಕ್ಷಣಗಳೇನು?" ಹತ್ತು ಎಣಿಸುವುದರೊಳಗೆ ಅವರು ಉತ್ತರ ಕೊಡಬೇಕೆಂದರು.

ಖುಶವಂತ ಸಿಂಗರು ಪ್ರಶ್ನಿಸಿದ ಜನರು ಹೆಚ್ಚಾಗಿ ಪಂಜಾಬಿಗಳು ಮತ್ತು ಉತ್ತರ ಭಾರತೀಯರು. ಭಾರತದಂಥ ವಿಸ್ತಾರ ದೇಶದಲ್ಲಿ ಕೆಲವು ಅಗಳುಗಳನ್ನು ಹಿಚುಕಿ ಇಡೀ ಚರಿಗೆಯ ಅನ್ನದ ಮೇಲೆ ಅಭಿಪ್ರಾಯವೀಯುವುದು ಅಷ್ಟು ಸಮಂಜಸವಾಗದೆಂದು ಅವರು ಒಪ್ಪುತ್ತಾರೆ. ಆದರೂ ಭಾರತೀಯರು ಭಾರತೀಯರ ಬಗ್ಗೆ ಪಟ್ಟ ಅಭಿಪ್ರಾಯ ಅರ್ಥವತ್ತಾಗಿತ್ತು: ನಾವು ಡಾಂಭಿಕರು, ಮೈಗಳ್ಳರು, ಕಾಮುಕರು, ಮುಖಸ್ತುತಿ ಮಾಡುವವರು—ಇವು ಮುಖ್ಯ ಅಭಿಪ್ರಾಯಗಳಾಗಿದ್ದವು.

ಇದರ ಅರ್ಥವೇನು? ಭಾರತೀಯರ ಸ್ವಭಾವದಲ್ಲಿ ತಮ್ಮನ್ನು ತಾವೇ ಹಳಿಯುವ ಪ್ರವೃತ್ತಿ ಹೆಚ್ಚು ಎಂದು. ಈ ಹೇಳಿಕೆಗಳಲ್ಲಿ ಸತ್ಯಾಂಶವಿದೆಯೆಂಬುದು ನಿಜ. ಆದರೆ ದೈನಂದಿನ ಜೀವನದಲ್ಲಿ ಭಾರತೀಯರು ತಮ್ಮ ದೇಶಬಾಂಧವರನ್ನೂ ಸಂಸ್ಥೆಗಳನ್ನೂ ನಿಂದಿಸುವುದರಲ್ಲಿ ಬಹಳ ಸಮಯ ಕಳೆಯುತ್ತಾರೆ. ನಮ್ಮ ಕೌಟುಂಬಿಕ, ಪ್ರಾದೇಶಿಕ ಅಭಿಮಾನಗಳೆಷ್ಟಿದ್ದರೂ ನಮ್ಮ ಸ್ವಭಾವದಲ್ಲಿ ಸಮಾಜವಿರೋಧಿ ಪ್ರವೃತ್ತಿಗಳು ಮಿತಿಮೀರಿ ಇವೆ. ಮನೆಗಳಲ್ಲಿರಲಿ ಕಚೇರಿಗಳಲ್ಲಿರಲಿ, ನಮಗೆ ಲಾಭವಿರಲಿ ಬಿಡಲಿ, ನಮ್ಮ ಸಹೋದ್ಯೋಗಿಗಳನ್ನು ಬೆನ್ನ ಹಿಂದಿನಿಂದ ತೆಗಳುವುದು, ಅವರ ವಿರುದ್ಧ ಕುತಂತ್ರಗಳನ್ನು ಹೆಣೆಯುವುದು-ಇಂಥ ವ್ಯಾಪಗಳಲ್ಲೇ ಹೊತ್ತು ಕಳೆಯುತ್ತೇವೆ. ಪರದೇಶಗಳಲ್ಲಿ ನಮ್ಮ ದೇಶದ ಮಾನವುಳಿಸಿಕೊಳ್ಳ

ಬೇಕೆಂದು ಕೂಡ ನಾವು ಪರಸ್ಪರ ಸಹಕರಿಸಲು ಸಿದ್ಧರಾಗುವುದಿಲ್ಲ. ಇಂಗ್ಲಂಡಿನಲ್ಲಿ ಭಾರತದ ತಂಡ ಕ್ರಿಕೆಟ್ ಆಡಹೋದಾಗ ತಮಗಾಗದ ಬೌಲರರನ್ನು ಫಜೀತಿ ಮಾಡಬೇಕೆಂಬ ದುರುದ್ದೇಶದಿಂದ ಫೀಲ್ಡರರು ಕೈಗೆ ಸಿಕ್ಕಿದ ಚಂಡುಗಳನ್ನು ಕೂಡ ಬೇಕೆಂದೇ ಕೈಬಿಟ್ಟ ಉದಾಹರಣೆಗಳುಂಟೆಂದು ಖುಶವಂತ ಸಿಂಗರು ಹೇಳುತ್ತಾರೆ.

ಜೀವನದ ಇತರ ರಂಗಗಳಲ್ಲಿಯೂ ಅಷ್ಟೇ. ನಮ್ಮ ಸ್ವಜನಮತ್ಸರ ಅತಿರೇಕವಾಗಿದೆ. ಅದರಿಂದಲೇ ಇಲ್ಲಿ ವಿದೇಶೀಯರು ಅಧ್ಯಕ್ಷರಾಗಿದ್ದ ಸಂಸ್ಥೆಗಳು ಬಾಳಿದಂತೆ ನಮ್ಮವರ ಆಡಳಿತದಲ್ಲಿರುವವು ಬಾಳಲಿಲ್ಲ. ನಮ್ಮ ಸೈನ್ಯದಲ್ಲಿ ಕೂಡ ಹೆಚ್ಚು ಜನ ಇಂಗ್ಲೀಷ ಅಧಿಕಾರಿಗಳಿದ್ದುದರಿಂದಲೇ ಉತ್ತಮ ಕಾರ್ಯಕ್ಷಮತೆಯನ್ನು ಅದು ಸಾಧಿಸಿತು. ಸ್ವಜನರ ಮಾತ್ಸರ್ಯಕ್ಕೆಡೆ ಹೆಚ್ಚಾಗಿದ್ದುದರಿಂದ ನಾಗರಿಕ ಅಧಿಕಾರಿಗಳ ಕಾರ್ಯದಕ್ಷತೆ ಭಾರತದಲ್ಲಿ ಸೈನ್ಯದಷ್ಟು ಚೆನ್ನಾಗಿ ಬೆಳೆಯಲಿಲ್ಲ.

ಖುಶವಂತ ಸಿಂಗರು ಪ್ರಶ್ನಿಸಿದ ವಿದೇಶೀಯರು ಅಷ್ಟು ಬಂಡತುಂಡ ಅಭಿಪ್ರಾಯ ಕೊಡಲಿಲ್ಲವಂತೆ. ಭಾರತೀಯ ಸ್ವಭಾವದ ಮುಖ್ಯ ಲಕ್ಷಣಗಳೆಂದರೆ ದಯೆ, ದಾಕ್ಷಿಣ್ಯ, ಅತಿಥಿಸತ್ಕಾರ—ಇತ್ಯಾದಿಯಾಗಿ ಅವರು ಹೇಳಿದರು. ಆದರೆ ಅತಿಥಿಸತ್ಕಾರ ಎಲ್ಲ ಭಾರತೀಯರ ಸಮಾನ ಗುಣವೆಂದು ಹೇಳಲಾಗುವುದಿಲ್ಲ. ಜಾತಿಪದ್ಧತಿ ಈ ಗುಣಕ್ಕೆ ಮಿತಿಮೇರೆಗಳನ್ನು ಹಾಕುತ್ತದೆಂದು ಖುಶವಂತರು ಹೇಳುತ್ತಾರೆ.

ಖುಶವಂತ ಸಿಂಗರು ಪ್ರಶ್ನಿಸಿದ ಜನರು ಬಹುತರವಾಗಿ ಇಂಗ್ಲೀಷರು. ಅವರ ಅಭಿಪ್ರಾಯಗಳಿಗೆ ವಿಶೇಷ ಕಾರಣಗಳಿವೆ. ನಿಜವಾಗಿ ಇಂಗ್ಲೀಷರು ಭಾರತೀಯ ಮೇಲ್ವರ್ಗದವರ ಆತಿಥ್ಯಸುಖವನ್ನು ಚೆನ್ನಾಗಿ ಅನುಭವಿಸಿದ್ದಾರೆ. ಆದರೆ ಇದರಲ್ಲಿ ಸ್ವಾಮಿ - ಸೇವಕ ಭಾವವೇ ಹೆಚ್ಚಾಗಿತ್ತು. ಇಂಗ್ಲೀಷರು ನಮ್ಮನ್ನಾಳುವವರ ಕುಲದವರಾದುದರಿಂದ ಅವರ ಪ್ರೀತಿ ಗಳಿಸುವುದೇ ಈ ಔದಾರ್ಯಕ್ಕೆ ಬಹುತರ ಹೇತುವಾಗಿತ್ತು. ಇಂಗ್ಲೀಷ ಜನರು ತಮ್ಮ ಆಳಿಕೆಯಲ್ಲಿ ಭಾರತೀಯರ ಖರ್ಚಿನಿಂದ ಕುಡಿದಷ್ಟು ವಿಸ್ಕಿಯನ್ನು ಸ್ವಂತ ಖರ್ಚಿನಲ್ಲಿ ಕುಡಿದಿಲ್ಲವಾದ್ದರಿಂದ ಅವರು ಸ್ವಾಭಾವಿಕವಾಗಿ ಭಾರತೀಯರ ಔದಾರ್ಯವನ್ನು ಕೊಂಡಾಡುತ್ತಾರೆ.

ಅಲ್ಲದೆ ಅವರ ಹೇಳಿಕೆಗಳಲ್ಲಿ ಮುಖಸ್ತುತಿಯ ಅಂಶ ಸಾಕಷ್ಟಿದೆ. ತಂತಮ್ಮೊಳಗೇ ಆಡಿಕೊಳ್ಳುವಾಗ ಅವರು ನಮ್ಮನ್ನು ಕುರಿತು ಅಪ್ರಿಯ ಭಾವನೆಗಳನ್ನೇ ಇಂದಿಗೂ ಪ್ರದರ್ಶಿಸುತ್ತಾರೆ.

ಖುಶವಂತಸಿಂಗರು ಮೇಲಿನ ಪ್ರಶ್ನೋತ್ತರಗಳಿಂದ ಇನ್ನೊಂದು ಅರ್ಥವನ್ನೂ ಹೊರಪಡಿಸಿದ್ದಾರೆ. ಭಾರತೀಯರಲ್ಲಿ ತಮ್ಮ ದೋಷಗಳನ್ನು ಅರಿತುಕೊಳ್ಳುವ ಶಕ್ತಿ ಹೆಚ್ಚಾಗಿದೆ. ವಿದೇಶಿಯರು ಹಾಗಲ್ಲ. ಅವರು ತಮ್ಮಲ್ಲಿ ಸದ್ಗುಣಗಳನ್ನೇ ಕಾಣುತ್ತಾರೆ. ಇಂಗ್ಲೀಷನನ್ನು ಕೇಳಿದರೆ ಅವನು ಇಂಗ್ಲೀಷರ ಮನೆಮಾರು ಪಶುಪಕ್ಷಿ ಪ್ರೀತಿಯನ್ನೂ ಬುದ್ಧಿ ಸ್ಥೈರ್ಯವನ್ನೂ ಅಭಿಮಾನದಿಂದ ಎತ್ತಿ ತೋರಿಸುತ್ತಾನೆ. ಅಮೇರಿಕನ್ನರು ತಮ್ಮ ಔದಾರ್ಯವನ್ನು ಹೇಳಿಕೊಳ್ಳುತ್ತಾರೆ. ತಮ್ಮಲ್ಲಿರುವ ದೋಷಗಳು ಅವರ ಕಣ್ಣಿಗೆ ಕಾಣಿಸುವುದು ಕಡಿಮೆ. ತಮ್ಮ ದೋಷಗಳನ್ನು ಕಂಡುಕೊಂಡು ಉದ್ಘಾಟಿಸುವ ಗುಣ ಭಾರತೀಯರಲ್ಲಿ ಮಾತ್ರವೇ ಕಾಣಿಸುತ್ತದೆ.

ಭಾರತೀಯ ಸ್ವಭಾವದಲ್ಲಿ ಅತಿ ದುಃಖದಾಯಕವಾದ ಅಂಶಗಳೆಂದರೆ, ಅವರ ದಾಸ್ಯವೃತ್ತಿ ಮತ್ತು ಉದಾಸೀನತೆ. ಮೊದಲಿನದು ಮೇಲ್ವರ್ಗಗಳಲ್ಲಿಯೂ ಎರಡನೆಯದು ದರಿದ್ರ ರೈತ ಕೂಲಿಕಾರ ಜನರಲ್ಲಿಯೂ ಎದ್ದು ಕಾಣುತ್ತದೆ ಎಂದು ಬಹುಕಾಲ ವಿದೇಶಗಳಲ್ಲಿ ಸಂಚರಿಸಿದ ಖುಶವಂತ ಸಿಂಗರ ಮತ.

ಅವರ ಅಭಿಪ್ರಾಯ ನ್ಯಾಯವೆಂದೇ ತೋರುತ್ತದೆ. ಬಲಿಷ್ಠರ ಭಯವು ಅಧಿಕಾರ ಸಂಪನ್ನರ ಪೂಜೆಯಾಗಿ ನಮ್ಮಲ್ಲಿ ಮೊದಲಿನಿಂದ ಬೆಳೆದು ಬಂದಿದೆ. "ಭಟ್ಟಂಗಿ" ಗಳು ಭಾರತೀಯ ರಾಜಸಭೆಗಳ ವೈಶಿಷ್ಟ್ಯವಾಗಿದ್ದರು. ಭಾರತದ ಕವಿಗಳು ಅರಸರನ್ನು ಹೊಗಳಿದಂತೆ ಬೇರಾವ ದೇಶದವರೂ ಹೊಗಳಿಲ್ಲ. ಬ್ರಿಟಿಶರಿಗೆ ಈ ಹೊಗಳುಭಟ್ಟತನದ ಕುಸುರಿ ಕೆಲಸ ಅರ್ಥವಾಗದ್ದರಿಂದ ಅವರ ಕಾಲದಲ್ಲಿ ಅದು ಇಲ್ಲದಂತಾ-

ಯಿತು. ಆದರೆ "ಬಡಾ ಸಾಹೇಬ"ರುಗಳಿಗೆ ನಜರು ಕಾಣಿಕೆ"ಗಳನ್ನು ಕಳಿಸಿಯೋ ಕೆಲಸ ವಿಲ್ಲದೆಯೂ ಅವರ "ದರ್ಶನ"ಕ್ಕೆ ಬಂದೋ ನಮ್ಮವರು ಬಲವಂತರ ಪೂಜೆಯನ್ನು ನಡೆಸುತ್ತಲೇ ಇದ್ದರು.

ಬ್ರಿಟಿಶರು ಹೋದೊಡನೆ "ಭೋ ಪರಾಕುತನ" ಮರಳಿದೆ. ಮಂತ್ರಿಗಳ, ನ್ಯಾಯಾಧೀಶರ, ಉಚ್ಚಾಧಿಕಾರಿಗಳ ಮನೆಗಳು ಹೊಗಳುಭಟ್ಟರ, ಕೈಕೆಳಗಿನವರ, ನೌಕರಿಬೇಟೆಗಾರರ ಬೀಡುಗಳಾಗಿವೆ. ಮುಖಸ್ತುತಿ ಪುನಃ ಲಲಿತಕಲೆಯಾಗುತ್ತಿದೆ. ಸ್ವತಂತ್ರವೃತ್ತಿಯವರೆಂದು ಹೇಳಿಕೊಳ್ಳುವ ನವತರುಣರಲ್ಲಿ ಕೂಡ "ಈ ಮರ್ಜಿ ಕಾಯುವ" ಪ್ರವೃತ್ತಿ ಧಾರಾಳವಾಗಿದೆ.

ಅನಿವಾರ್ಯವಾಗಿ ಕೆಲವೇ ವ್ಯಕ್ತಿಗಳ ಕೈಯಲ್ಲಿ ಅಪಾರ ಅಧಿಕಾರ ಸೇರಿಕೊಂಡಿದೆ ಈ ದೇಶದಲ್ಲಿ. ಇಲ್ಲಿ ಪ್ರಾಮಾಣಿಕ ಅಭಿಪ್ರಾಯದ ಬದಲು ಮುಖಸ್ತುತಿಯ ಪ್ರವೃತ್ತಿ ಬೆಳೆದರೆ ದೇಶಕ್ಕೆ ಗಂಡಾಂತರವಿದೆ.

ವೇದಾಂತದಲ್ಲಿ "ನಿವೃತ್ತಿ" ಎನಿಸುವದೊಂದು ನಮ್ಮ ಜನಸಾಮಾನ್ಯರ ದುಃಖದಾಯಕವಾದ ಮನೋವೃತ್ತಿ. ಇಲ್ಲಿ ಸೆಕೆಯಿಂದ ಮೈಗಳ್ಳತನವೂ, ಏನು ಮಾಡಿದರೂ ಅನ್ಯಾಯದ ಕೈಯೇ ಮೇಲಾಗುತ್ತದೆಂಬ ಅನುಭವದಿಂದ ಹುಟ್ಟಿದ ಉದಾಸೀನತೆ, ಮಾನುಷ ಪ್ರಯತ್ನದ ನಿರರ್ಥಕತೆಯನ್ನು ಮನಗಂಡದ್ದರಿಂದ ಬಂದದೈವವಾದ ಇವೇ ನಮ್ಮ "ನಿವೃತ್ತಿ" ಪರತೆಗೂ, ಪ್ರತಿಭಟನೆಯಿಲ್ಲದೆ ಕಷ್ಟ ಭೋಗಿಸುವ ಪೌರುಷಹೀನ ಸ್ವಭಾವಕ್ಕೂ ಮೂಲ ವಿರಬಹುದು. "ಬಂದದ್ದೆಲ್ಲ ಬರಲಿ" ಎಂದು ನಮ್ಮ ಬಡಜನ ಎಲ್ಲವನ್ನು ನುಂಗಿಕೊಳ್ಳುತ್ತದೆ.

ಈ ನಿರ್ವೀರ್ಯತನದಲ್ಲಿ ಒಂದು ಉದಾತ್ತ ಅಂಶವೂ ಇದೆ. ಮೃಗಪಕ್ಷಿಗಳಿಗಿಂತ ನಾವು ಶ್ರೇಷ್ಠ ಅಲ್ಲ ಎಂಬುದು ಹಿಂದುಸ್ಥಾನದಲ್ಲಿ ಮಾತ್ರ ಕಾಣಿಸುವ ಮತ. ಈ ತಿಳಿವಳಿಕೆ ನಮ್ಮಲ್ಲಿ ಪ್ರಾಣಿದಯೆಯನ್ನು ಹೆಚ್ಚಿಸಿದೆಯೆಂದಲ್ಲ. ಆದರೆ ಅವುಗಳ ಮೇಲೆ ನಮ್ಮ ಗೌರವವನ್ನು ಹೆಚ್ಚಿಸಿದೆ. ಬರಗಾಲ ಬಂದರೆ ಪರದೇಶಗಳಲ್ಲಿ ತಮ್ಮ ಪ್ರೀತಿಯ ಪಶುಗಳನ್ನೂ ಕೊಂದು ತಿಂದು ಬದುಕುತ್ತಾರೆ. ಆದರೆ ನಮ್ಮ ರೈತರು ಪ್ರಾಣಿಗಳ ಸಂಗಡ ತಾವೂ ಉಪವಾಸ ಸಾಯುವರೇ ಹೊರತು ಅವುಗಳನ್ನು ತಿಂದು ತಾವು ಬದುಕುವ ಯತ್ನ ಮಾಡರು. ಅದು ಅರ್ಥರಹಿತವೆನಿಸಬಹುದು; ಆದರೆ ಖಂಡಿತವಾಗಿ ಉದಾತ್ತ ಸ್ವಭಾವವೇ ಸೈ.

ಭಾರತೀಯ ಸ್ವಭಾವದ ಇನ್ನೊಂದು ವೈಶಿಷ್ಟ್ಯ ಅದರ ದಾಂಭಿಕತೆ. ಎಲ್ಲ ದೇಶಗಳಲ್ಲಿಯೂ ಧ್ಯೇಯಗಳಿಗೂ ವ್ಯವಹಾರಕ್ಕೂ ಅಂತರವಿದ್ದೇ ಇದೆ. ಆದರೆ ಭಾರತದಲ್ಲಿ ಅದು ಬಹಳ ಹೆಚ್ಚಾಗಿ ಕಾಣಿಸುತ್ತದೆ.

ಮಹಾತ್ಮಾ ಗಾಂಧಿಯವರು ನಮ್ಮ ಮುಂದೆ ಸರಳ ಜೀವನದ ಧ್ಯೇಯವಿಟ್ಟಿದ್ದಾರೆ. ಆದರೆ ಇದು ಇಂದು ಬಾಹ್ಯ ಚಿಹ್ನಗಳಲ್ಲಿ ಮಾತ್ರ ಉಳಿದಿದೆ. ಅಂತರಂಗದ ವರೆಗೆ ಹೋಗಿಲ್ಲ. ಖಾದಿ ಧಾರಣೆ ಬಾಹ್ಯ ಚಿಹ್ನ ಮಾತ್ರ ಆಗಿದೆ. ಭಾರತದ ಅತಿ ದೊಡ್ಡ ಗಿರಣಿಮಾಲಕರೊಬ್ಬರು ತಮ್ಮ ಗಿರಣಿಯಲ್ಲಿ ಕುಳಿತು ದಿನವೂ ಒಂದು ತಾಸು ಚರಕಾ ತಿರುಗಿಸುತ್ತಾರೆ! ಇನ್ನೊಬ್ಬ ದೊಡ್ಡ ಮನುಷ್ಯರು ತಾವು ಸಂಬಳವಿಲ್ಲದೆ, ಒಂದೇ ಕೋಣೆಯಲ್ಲಿ, ಶುದ್ಧ ಬ್ರಹ್ಮಚರ್ಯದಲ್ಲಿ, ಹೆಚ್ಚು ಕಡಿಮೆ ನಿರಾಹಾರದಿಂದಲೇ ಬದುಕುವುದಾಗಿ ಸುದ್ದಿ ಹಬ್ಬಿಸುತ್ತಾರೆ! ಇದರಲ್ಲಿ ಅರ್ಧ ಮಾತ್ರ ಸತ್ಯವಿದೆ. ದಿಲ್ಲಿಯಲ್ಲಿ ಅತಿ ಬೆಲೆಬಾಳುವ ಕಾರು, ಅತಿ ಅಲಂಕೃತ ಬಂಗಲೆ ಇರುವ ಮಹಾನುಭಾವರೊಬ್ಬರು ಸರಳ ಜೀವನದ ಉಪದೇಶಕೊಡುತ್ತ ತಿರುಗುತ್ತಾರೆ.

ಇದನ್ನು ದಂಭವೆಂದಲ್ಲದೆ ಮತ್ತಾವ ಹೆಸರಿಂದ ಕರೆಯೋಣ? ಆದರೆ ಅತ್ಯಂತ ಹಾಸ್ಯಾಸ್ಪದ ಮತ್ತು ದುಃಖಜನಕ ಸಂಗತಿಯೆಂದರೆ ಈ ಬಗೆಯ ವಿರೋಧಾಭಾಸವನ್ನು ಕಂಡು ಇತರರು ನಕ್ಕಾರೆಂಬ ಕಲ್ಪನೆ ಕೂಡ ನಮಗಿಲ್ಲ.



# ದೊಡ್ಡವರ ಸಣ್ಣ ಕತೆಗಳು

## ಜ್ಞಾನದ ಅರ್ಥ

ಒಂದು ಕಡೆ ಭಾಷಣ ಮಾಡುತ್ತ ಒಮ್ಮೆ ತತ್ವಜ್ಞಾನಿ ಪ್ರೊ. ಹಕ್ಸ್‌ಲೀಯವರು ಹೇಳಿದರು: "ಈ ಜಗತ್ತು ನಿಜವಾಗಿ ಏನು? ಇದರ ಉದ್ದೇಶವೇನು? ಇದು ಉಂಟಾದುದು ಹೇಗೆ? ಮೊದಲಾದವನ್ನು ಸರಿಯಾಗಿ ಹೇಳಲಾಗುವುದಿಲ್ಲ."

ತಟಕ್ಕನೆದ್ದು ಒಬ್ಬ ಹುಡುಗ ಕೇಳಿದ: "ನಿಮಗಿಷ್ಟು ಗೊತ್ತಿಲ್ಲದಿದ್ದರೆ ನಿಮ್ಮ ಜ್ಞಾನದ ಉಪಯೋಗವಾದರೂ ಏನು?"

ಹಕ್ಸ್‌ಲೀ ಉತ್ತರಕೊಟ್ಟದ್ದು: "ನನಗೂ ಗೊತ್ತಿಲ್ಲ. ನಿನಗೂ ಗೊತ್ತಿಲ್ಲ. ಆದರೆ ನನಗೆ ಗೊತ್ತಿಲ್ಲವೆಂದಾದರೂ ನನಗೆ ಗೊತ್ತು; ನಿನಗೆ ಗೊತ್ತಿಲ್ಲ. ಇದು ನಮ್ಮಲ್ಲಿರುವ ಭೇದ."

—ಜ್ಞಾನೋದಯ

## ಕಾಣಿಕೆಯ ಕಾಣಿಕೆ

ಗೌರೀಶಂಕರವನ್ನೇರಿದ ವೀರ ತೇನ್ಸಿಂಗ ನೆಹರೂರನ್ನು ಭೆಟ್ಟಿಯಾದಾಗ ಅವನ ಸರಳತೆಯು ಅವರನ್ನು ಬಹಳವಾಗಿ ಆಕರ್ಷಿಸಿತು. ರಾಣಿ ಎಲಿಝಾಬೆತ್‌ಳಿಂದ ಜಾರ್ಜ ಮೆಡಲ್ ಪಡೆಯಲು ತೇನ್ಸಿಂಗ ಭಾರತದಿಂದ ಹೊರಡುವಾಗ ನೆಹರೂ ಅವನಿಗೆ ಒಂದು ಕಾಣಿಕೆ ಕೊಡ ಬಯಸಿ ತಮ್ಮ ಉಗ್ರಾಣದಿಂದ ಒಂದು ಸುಂದರವಾದ ಪೆಟ್ಟಿಗೆಯನ್ನೂ ಒಂದು ಶೇರವಾನಿಯನ್ನೂ ತರಿಸಿಕೊಂಡು ಶೇರವಾನಿಯನ್ನು ತೇನ್ಸಿಂಗನ ಅಳತೆಗೆ ಸರಿಯಾಗಿ ಸಿಂಪಿಗನಿಂದ ಸರಿಪಡಿಸಿದರು. ಈ ಶೇರವಾನಿ ನೆಹರೂರವರ ತಂದೆಯಿಂದ ನೆಹರೂಗೆ ದೊರೆತುದಾಗಿತ್ತು. ಇವೆರಡನ್ನೂ ನೆಹರೂ ತೇನ್ಸಿಂಗನಿಗೆ ಬಹುಮಾನವಾಗಿ ಕೊಟ್ಟರು.

ನಮ್ಮ ಸಂಬಂಧಿಕನೊಬ್ಬ ಹಂಗೆರಿಯ ಹುಡುಗಿಯೊಬ್ಬಳನ್ನು ಮದುವೆಯಾಗಿದ್ದ. ತೇನ್ಸಿಂಗ ಲಂಡನ್ನಿನಲ್ಲಿ ಇಳಿದಾಗ ಆಕೆ ಅಲ್ಲಿದ್ದಳು. ಆತನಲ್ಲಿರುವ ಆ ಸಣ್ಣ ಪೆಟ್ಟಿಗೆಯನ್ನು ಗುರುತಿಸಿ "ಯಾರು ಕೊಟ್ಟರು?" ಎಂದಳು.

ತೇನ್ಸಿಂಗ ನಗುತ್ತ ಹೇಳಿದ: "ನನಗೆ ಪ್ರಧಾನ ಮಂತ್ರಿ ನೆಹರೂ ಕೊಟ್ಟ ಉಡುಗರೆ."

ಆಕೆಯೇ ಆ ಸಣ್ಣ ಪೆಟ್ಟಿಗೆಯನ್ನು ನೆಹರೂಗೆ ಹುಟ್ಟುಹಬ್ಬದ ಕಾಣಿಕೆಯಾಗಿ ಕೊಟ್ಟಿದ್ದಳು. ಅದೀಗ ತೇನಸಿಂಗನ ಕೈಸೇರಿತ್ತು.

— ಕೃಷ್ಣಾ ಹಥೀಸಿಂಗ

## ಕೃಷ್ಣಾರ್ಪಣ

ಆರುವೆಟ್ಟ ರಾಮಸ್ವಾಮಿ ಶೆಟ್ಟಿ ಎಂಬಾತ ಒಬ್ಬ ದೊಡ್ಡ ಜವಳಿಯ ವ್ಯಾಪಾರಿ. ಪ್ರಸಿದ್ಧ ಸಂಗೀತವಿದ್ವಾಂಸರಾಗಿದ್ದ ಮೈಸೂರು ಸದಾಶಿವ ರಾಯರಲ್ಲಿ ಅತ್ಯಂತ ಗೌರವ, ನಂಬಿಗೆ ಅವನಿಗೆ. ಒಂದು ಬಾರಿ ಆತ ಪರಸ್ಥಳಕ್ಕೆ ಹೋಗಬೇಕಾಗಿ ಬಂದಾಗ ಅಂಗಡಿಯ ವ್ಯವಹಾರಗಳನ್ನು ನೋಡಿಕೊಳ್ಳಬೇಕೆಂದು ರಾಯರನ್ನು ಪ್ರಾರ್ಥಿಸಿದ. ರಾಯರು ಸಮ್ಮತಿಸಿದರು.

ರಾಯರ ಹೃದಯವೈಶಾಲ್ಯದ ಪರಿಚಯವಿದ್ದ ಬಡ ಜನರು ಈಗ ಬಂದು ರಾಯರಲ್ಲಿ ಸಹಾಯ ಬೇಡಿದರು. ಅಂಗಡಿಯಲ್ಲಿ ಇದ್ದ ಬಿದ್ದ ಜವಳಿಯೆಲ್ಲವನ್ನೂ ರಾಯರು ಹಿಂದು ಮುಂದು ನೋಡದೆ ದಾನ ಮಾಡಿಬಿಟ್ಟರು.

ರಾಮಸ್ವಾಮಿ ಶೆಟ್ಟಿ ಹಿಂತಿರುಗಿದಾಗ ಅಂಗಡಿಯು ಬರಿದಾಗಿತ್ತು. ದಿಗಿಲು ಬಿದ್ದ ಅವನಿಗೆ ರಾಯರು ಹೇಳಿದರಂತೆ: "ಅಯ್ಯಾ ಶೆಟ್ಟಿ, ಹರಿಪ್ರೀತಿಯಾಗಲೆಂದು ನಿನ್ನ ಜವಳಿಯನ್ನೆಲ್ಲ ದಾನಮಾಡಿದೆ. ಪುಣ್ಯವೆಲ್ಲ ನಿನಗೇ ಸಲ್ಲತಕ್ಕದ್ದು. ಇದು ನಿನಗೆ ಒಪ್ಪಿಗೆಯಾದರೆ ಸರಿ ಇಲ್ಲವಾದರೆ ನಿರ್ಭಯವಾಗಿ ಹೇಳಿಬಿಡು. ಜವಳಿಯ ಬೆಲೆಯನ್ನು ನಾನು ಪಾವತಿ ಮಾಡುತ್ತೇನೆ. ಆದರ ಪುಣ್ಯ ನನಗೆ ಉಳಿಯಲಿ." ಶೆಟ್ಟಿ ಮಾತನಾಡಲಿಲ್ಲ. "ಕೃಷ್ಣಾರ್ಪಣ" ಎಂದ. ಕೆಲವೇ ದಿನಗಳಲ್ಲಿ ಶೆಟ್ಟಿಯ ವ್ಯಾಪಾರ ಒಂದಕ್ಕೆ ಹತ್ತರಷ್ಟು ಕುದುರಿತಂತೆ.

"ನಾ ಕಂಡ ಕಲಾವಿದರು" ಪುಸ್ತಕದಿಂದ

# ನಿಮ್ಮ ಶಬ್ದ ಭಾಂಡಾರ ಬೆಳೆಯಲಿ

## ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿ ಕೊಡಲಾಗುವದು ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥಗಳನ್ನು ವಿವರಿಸಿದೆ.

೧. ಕುಶಲ
(ಅ) ದರ್ಭೆ ತರುವವ (ಆ) ಸಮರ್ಥ (ಇ) ರಾಮನ ಅವಳಿಮಕ್ಕಳು (ಈ) ಸಂತೋಷಕರ.

೨. ಕ್ರೋಡೀಕರಣ
(ಅ) ಒಂದೆಡೆ ಸೇರಿಸುವುದು (ಆ) ಪುಡಿ ಮಾಡುವುದು (ಇ) ಸಿಟ್ಟಿಗೇಳುವುದು (ಈ) ಕೊರಡಿನಿಂದ ಮಾಡಿದ ಪದಾರ್ಥ.

೩. ನರೇಂದ್ರ
(ಅ) ಜೈನ ಪೂಜಾರಿ (ಆ) ಮಾನವ ದೇವತೆ (ಇ) ರಾಜ (ಈ) ಇಂದ್ರನಬಂಧು

೪. ಅಖಂಡ
(ಅ) ಒಂದು ತರದ ಭಕ್ಷ್ಯ (ಆ) ಒಂದು ಭೂಖಂಡ (ಇ) ಒಂದಾಗಿರುವುದು (ಈ) ದೇವೇಂದ್ರನ ಹೆಸರು.

೫. ಸದರಿ
(ಅ) ಮೇಲೆ ಹೇಳಿದ (ಆ) ಮೆಲ್ಲಗೆ (ಇ) ಈಗಿಂದೀಗ (ಈ) ಮನೆಯವಳು.

೬. ಮಜಕೂರು
(ಅ) ಮಜಾ ಮಾಡುವ (ಆ) ಒಂದು ಊರಿನ ಹೆಸರು (ಇ) ಸಂತೋಷ ಕೂಟ (ಈ) ವಿವರ.

೭. ಸೋಗೆ
(ಅ) ಅಡಕೆ ಮರದ ಗರಿ (ಆ) ನಿದ್ದೆ (ಇ) ಸುಖ (ಈ) ದುಃಖ.

೮. ಬುದ್ಬುದ
(ಅ) ತಪತಪನೆ ಬೀಳು (ಆ) ನೊರೆ (ಇ) ಒಂದು ಜಾತಿಯ ನರಿ (ಈ) ಒಂದು ಗ್ರಹ.

೯. ದುರಾರಾಧ್ಯ
(ಅ) ಒಂದು ಬ್ರಾಹ್ಮಣವರ್ಗ (ಆ) ಪೂಜಾರ್ಹನಲ್ಲದ (ಇ) ಸುಲಭವಾಗಿ ಮೆಚ್ಚಿಸಲಾರದ ಮನುಷ್ಯ (ಈ) ದೂರದ.

೧೦. ಬದ್ಧಕಂಕಣ
(ಅ) ಪಶ್ಚಿಮ ಕರಾವಳಿಯ ಒಂದು ಭಾಗ (ಆ) ಹಟತೊಟ್ಟವ (ಇ) ಬೃಹನ್ನಳೆ (ಈ) ಕಟ್ಟಿಹಾಕಿದ.

೧೧. ನಿರುತ್ತರ
(ಅ) ದಕ್ಷಿಣ (ಆ) ಶಬ್ದಗಳ ಮೂಲವನ್ನು ಕುರಿತ ಶಾಸ್ತ್ರ (ಇ) ಉತ್ತರವೀಯದ (ಈ) ಪ್ರಾರಂಭ.

೧೨. ಅಗ್ರಲೇಖ
(ಅ) ಕ್ಷೇಮಸಮಾಚಾರ (ಆ) ಹಳೆಯ ಕಾಲದ ಲಿಪಿ (ಇ) ಒಬ್ಬ ಗಂಧರ್ವ (ಈ) ಸಂಪಾದಕೀಯ ಬರಹ.

# 'ಶಬ್ದ ಭಾಂಡಾರ'ದ ಸರಿಯಾದ ಅರ್ಥಗಳು

೧. ಕುಶಲ (ಅ) ಸಮರ್ಥ, ಚತುರ (ಉದಾ: ಅವನು ಕಲಾಕುಶಲ); ಕ್ಷೇಮ, ಮಂಗಲ (ನಿಮಗೆಲ್ಲ ಕುಶಲವೇ?) (ಸಂಸ್ಕೃತ)

೨. ಕ್ರೋಡೀಕರಣ (ಅ) ಒಂದೆಡೆ ಸೇರಿಸುವುದು; ಎದೆಗಪ್ಪಿಕೊಳ್ಳುವುದು. ಸಾರ ಸಂಗ್ರಹ ಮಾಡುವುದು. (ಸಂಸ್ಕೃತ) ಕ್ರೋಡ = ಎದೆ, ಪೊಳ್ಳು ಎಂಬ ಶಬ್ದದಿಂದ.

೩. ನರೇಂದ್ರ (ಇ) ರಾಜ, ಅರಸ. (ಸಂ) ನರ = ಮನುಷ್ಯ, ಇಂದ್ರ = ಒಡೆಯ.

೪. ಅಖಂಡ (ಇ) ಒಂದಾಗಿರುವುದು; ಒಡೆಯದೆ ಇಡಿಯಾಗಿರುವುದು; ಪೂರ್ಣ; ಸಂಯುಕ್ತ. (ಸಂಸ್ಕೃತ) ಅ = ಇಲ್ಲ ಖಂಡ = ತುಂಡು, ಅಂದರೆ ತುಂಡಾಗದಿರುವುದು.

೫. ಸದರಿ (ಅ) ಮೇಲಿನ; ಮೇಲೆ ಹೇಳಿದ, (ಉದಾ: ಸದರೀ ಸಂಗತಿಗಳನ್ನು ಗಮನಿಸಿ) ಹೆಚ್ಚಾಗಿ ಕಾಯದೆ ಪರಿಭಾಷೆಯಲ್ಲಿ ಉಪಯೋಗಿಸುವ ಈ ಶಬ್ದವು ಉರ್ದುವಿನ ಮುಖ್ಯ ಎಂಬ ಅರ್ಥದ "ಸದರ" ಶಬ್ದದಿಂದ ಉಂಟಾಗಿದೆ.

೬. ಮಜಕೂರು (ಈ) ವಿವರ; ಲಿಖಿತವಿವರ; ಮೌಖಿಕ ವರದಿ; ಪ್ರಸ್ತುತ. (ಉದಾ: ಈ ಮಜಕೂರುಗಳಿರುವ ಪತ್ರ ಅಂದರೆ ಇಂಥ ವಿವರಗಳುಳ್ಳ ಪತ್ರ (ಉರ್ದು) ಮಜಕೂರ = ಮೇಲಿನ.

೭. ಸೋಗೆ (ಅ) ಅಡಕೆಮರದ ಗರಿ; ಕಬ್ಬು ಮೊದಲಾದವುಗಳ ಗರಿ; ನವಿಲು; ನವಿಲು ಗರಿ; ಹಡಗಿನ ಹಿಂತುದಿ. (ಕನ್ನಡ).

೮. ಬುದ್ಬುದ (ಅ) ನೊರೆ, ನೀರ್ಗುಳ್ಳೆ; ನೀರ್ಗುಳ್ಳೆಯಂತೆ ಕ್ಷಣದಲ್ಲಿ ನಾಶವಾಗುವ ಪದಾರ್ಥ; ಐದು ದಿನಗಳಾದ ಗರ್ಭಸ್ಥ ಭ್ರೂಣ. (ಸಂಸ್ಕೃತ).

೯. ದುರಾರಾಧ್ಯ (ಇ) ಸುಲಭವಾಗಿ ತೃಪ್ತಿಪಡಲಾರದ; ತುಂಬ ಕಷ್ಟದಿಂದ ಸಂತೋಷಗೊಳಿಸಬಹುದಾದ; ಅಲ್ಪತೃಪ್ತನಲ್ಲದ (ದುರಾರಾಧ್ಯರಾದ ವಿಮರ್ಶಕರು ಅಂದ ಅವರನ್ನು ಮೆಚ್ಚಿಸುವುದು ಕಷ್ಟ ಎಂದರ್ಥ (ಸಂಸ್ಕೃತ) ದುರ್ = ಕಷ್ಟದಿಂದ + ಆರಾಧ್ಯ = ತೃಪ್ತಿಪಡಿಸಲ್ಪಡುವಂಥ.

೧೦. ಬದ್ಧಕಂಕಣ (ಅ) ಹಟತೊಟ್ಟ; ಯಾ[...] ದಾದರೂ ಕೆಲಸಮಾಡಲು ದೀಕ್ಷೆ ತೊಟ್ಟ ಪ್ರತಿಜ್ಞೆ ಮಾಡಿದ. (ಉದಾ: ಅಮೇ[...] ಕವು ಕಮ್ಯುನಿಜಮನ್ನು ಮುರಿಯಲ[...] ಬದ್ಧಕಂಕಣವಾಗಿದೆ.) (ಸಂ.) ಬದ್ಧ = ಕಟ್ಟಿದ; ಕಂಕಣ = ಮುಂಗೈಗೆ ಕಟ್ಟು[...] ದಾರ. (ಯಜ್ಞ ವಿವಾಹಾದಿಗಳನ್ನು ಮಾಡಲು ಸಂಕಲ್ಪಿಸಿದವರು ಮುಂಗೈ[...] ಕಂಕಣ ಕಟ್ಟಿಕೊಂಡನಂತರ ಅವನ್ನು ಪೂರೈಸದೆ ಬಿಡುವಂತಿಲ್ಲ.)

೧೧. ನಿರುತ್ತರ (ಇ) ಯಾವುದಾದರೂ ಪ್ರಶ್ನೆ[...] ಉತ್ತರ ಕೊಡದ, ಕೊಡಲಾರದ (ಉದಾ: ಈ ಮಾತಿಗೆ ಅವನು ನಿರುತ್ತರನಾದನು[...] (ಸಂ.) ನಿರ್ = ಇಲ್ಲ, ಉತ್ತರ.

೧೨. ಅಗ್ರಲೇಖ (ಈ) ಪತ್ರಿಕೆಗಳಲ್ಲಿ ಸಂಪಾದಕರು ತಮ್ಮ ಅಭಿಪ್ರಾಯ ವ್ಯಕ್ತಪಡಿ[...] ಬರೆಯುವ ಲೇಖ. (ಸಂ.) ಅಗ್ರ = ಮೊದಲಿನ, ಲೇಖ = ಬರಹ.

---

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಅರಿಸಿದ[...] ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ[...] ಶಬ್ದಶಕ್ತಿಯ ತರಗತಿಗಳನ್ನು ಅರಿಯಿರಿ.

೬—೮ ಸರಿಯಿದ್ದರೆ ....ಸಾಧಾರಣ

೯—೧೦ ,, ....ಉತ್ತಮ

೧೧—೧೨ ,, ....ಅತ್ಯುತ್ತಮ

ಹಕ್ಕು ಇದೆ ; ಆದರೆ ಅದನ್ನು ಸಾಧಿಸುವ ಹೊಣೆ ನಮ್ಮದೇ

# ಮರದ ತುದಿಗೇರುವ ಹಕ್ಕು

'ಗಲಿವರ'

'ಕರಡಿ' ಭಟ್ಟ ನಮ್ಮ ಶಾಲೆಯಲ್ಲಿ ಆಗಾಗ ಗದ್ದಲಕ್ಕೆ ಕಾರಣನಾಗುತಿದ್ದರೂ ಅವನು ಒಳ್ಳೆಯ ಹುಡುಗ. 'ಕರಡಿ'ಎಂಬ ಹೆಸರಿನಿಂದ ನಾವು ಅವನನ್ನು ಕರೆಯಲು ಕಾರಣವಿತ್ತು. ನಮ್ಮಶಾಲೆಯಲ್ಲಿಅವನಷ್ಟು ಒರಟು ಹುಡುಗ ಬೇರೊಬ್ಬನಿರಲಿಲ್ಲ. ಅವನ ತಲೆಗೂದಲು ಯಾವಾಗಲೂ ವಿಪರೀತ ಬೆಳೆದಿದ್ದು ಅಸ್ತವ್ಯಸ್ತವಾಗಿರುತ್ತಿತ್ತು. ಅಲ್ಲದೆ ಯಾವಾಗಲೂ ಅವನು ಮಾಡುತ್ತಿದ್ದ ಡೊಂಬರಾಟದಂಥ ಚೇಷ್ಟೆಗಳು ಮತ್ತು ಶಾಲೆಯಿಂದ ಅವನು ಮನೆಗೆ ಹೋಗುವಾಗ ಗುಡ್ಡಗಾಡುಗಳು ದನಿಗುಡುವಂತೆ ಕಿರಿಚುತ್ತಿದ್ದುದು ಅವನಿಗೆ ಆ ಅಡ್ಡ ಹೆಸರು ತಂದಿದ್ದವು.

ಒಮ್ಮೆ ನಮ್ಮ ಮಾಸ್ತರರು "ಮಾನವೀಯ ಹಕ್ಕು"ಗಳ ಮೇಲೆ ಒಂದು ಒಂದು ಸಣ್ಣ ಪ್ರದರ್ಶನವನ್ನು ಏರ್ಪಡಿಸಲು ನಿರ್ಧರಿಸಿದರು. ಸುಂದರವಾದ ಮೂವತ್ತು ಹಲಗೆಗಳ ಮೇಲೆ ಮೂವತ್ತು ಅಂಶಗಳ ಮಾನವೀ ಹಕ್ಕುಗಳನ್ನು ದೊಡ್ಡ ಅಕ್ಷರಗಳಲ್ಲಿ ಬರೆದು ಪ್ರದರ್ಶಿಸಲಾಗಿತ್ತು. ಈ "ಸಾರ್ವತ್ರಿಕ ಘೋಷಣೆ"ಯ ಕಲಮುಗಳನ್ನು ಸ್ಪಷ್ಟಪಡಿಸಲು ಹಲವಾರ ಚಿತ್ರಗಳೂ ಇದ್ದವು.

ಈ ಪವಿತ್ರ ಮಾನವೀ ಹಕ್ಕುಗಳ ಮೇಲೂ

'ಸೆಕೆಂಡರಿ ಎಜ್ಯುಕೇಶನ್' ದಿಂದ

ಕರಡೀಭಟ್ಟ ತನ್ನ ಕುಚೋದ್ಯ ತೋರಿಸದೆ ಬಿಡಲಿಲ್ಲ. ಅವನು ಎಲ್ಲಿಂದಲೋ ಒಂದು ದೊಡ್ಡ ಕಾಗದದ ಹಾಳೆಯನ್ನು ಸಂಪಾದಿಸಿ ಅದರ ಮೇಲೆ ದುಂಡನ್ನ ಅಕ್ಷರಗಳಿಂದ ಒಂದು ಅಧಿಕ ಪ್ರಸಂಗವನ್ನು ಬರೆದ. "ಹಕ್ಕು ನಂ. ೩೧ — ಪ್ರತಿಯೊಬ್ಬನಿಗೂ ಗಿಡದ ತುದಿಗೇರುವ ಹಕ್ಕು ಇದೆ." ಇದೇ ಅವನ ಶಾಸನ. ಮರುದಿನ ಅವನು ಅದನ್ನು ಶಾಲೆಯ ಆವಾರದಲ್ಲಿ ಬೆಳೆದಿದ್ದ ಅತಿ ಎತ್ತರದ ಬೂರುಗದ ಮರದ ಬೊಡ್ಡೆಗೆ ಅಂಟಿಸಿದನು. ಆ ಮರದಲ್ಲಿ ನೆಲಕ್ಕೆ ಅತಿ ಹತ್ತಿರದ ಟೊಂಗೆಯೇ ೩೦ ಅಡಿ ಎತ್ತರದಲ್ಲಿತ್ತು. ಅದರ ತುದಿಗೇರುವ ಬಂಟತನ ಸುಲಭವಾಗಿರಲಿಲ್ಲ.

ಈ ೩೧ ನೇ ಹಕ್ಕಿನ ಘೋಷಣೆಯನ್ನು ನೋಡಿ ನಾವೆಲ್ಲರೂ ಮನಸಾರೆ ನಕ್ಕೆವು. ಆದರೆ ಇಂಥ ಗಂಭೀರ ವಿಷಯಗಳನ್ನು ಗೇಲಿಮಾಡಿ ನಗುವುದು ತಪ್ಪೆಂದು ನಮಗೆ ಒಳಗೊಳಗೇ ಅನಿಸದಿರಲಿಲ್ಲ. "ಇವನು ಮಾನವೀಯ ಹಕ್ಕುಗಳನ್ನೇ ತಮಾಷೆ ಮಾಡುತ್ತಿದ್ದಾನೆ" ಎಂದು ನಮ್ಮಲ್ಲಿ ಒಬ್ಬ ಗೊಣಗುಟ್ಟಿದ್ದೂ ಆಯಿತು.

ಇಷ್ಟಾದರೂ ಮಾಸ್ತರರು ಅವನ ಮೇಲೆ ಸಿಟ್ಟಾಗಲಿಲ್ಲವೆಂದು ನಮಗೆ ಆಶ್ಚರ್ಯ. "ನೋಟೀಸು ಹಚ್ಚಿದವರಾರೆಂದು ಕೈಬರಹದಿಂದ ನನಗೆ ಗೊತ್ತಾಗಿದೆ" ಎಂದಿಷ್ಟೇ ಅವರು ಹೇಳಿದರು. ಆಗ ಕರಡೀಭಟ್ಟ ತಾನೇ ಆ ನೋಟೀಸನ್ನು ಬರೆದವನೆಂದು ಒಪ್ಪಿಕೊಂಡ

ಮಾಸ್ತರರು ಅವನನ್ನು ಕೇಳಿದರು: "ಈ ನೋಟೀಸನ್ನು ಬರೆದು ಅಲ್ಲಿ ಅಂಟಿಸಲು ಯಾರು ಹೇಳಿದರು. ನಿನಗೆ?"

ಕರಡಿಭಟ್ಟ ತಬ್ಬಿಗಾಗಿ ತಲೆ ತಗ್ಗಿಸಿದ. ಆದರೆ ಅವನು ಉತ್ತರಕೊಡಲಿಲ್ಲ.

"ನೀನೇನು ನೆನೆಸಿದ್ದೆ— ಪ್ರದರ್ಶನವನ್ನು ಕುಚೇಷ್ಟೆ ಮಾಡಬೇಕೆಂದೋ?"

ಕರಡಿ ಭಟ್ಟನ ಮೌನ ಮುರಿಯಿತು. ಅವನು ಹೇಳಿದ: "ಇಲ್ಲ, ಹಾಗೇನೂ ಇಲ್ಲ. ಯಾಕೋ ನನಗೆ ಹಾಗೆ ಹೊಳೆಯಿತು." ಇಷ್ಟು ಹೇಳಬೇಕಾದರೆ ಅವನಿಗೆ ಐದು ನಿಮಿಷ ಹಿಡಿಯಿತು.

ಅವನಿಗೆ ಹೇಳಲು ಬಾರದಿದ್ದರೂ ಅಭಿಪ್ರಾಯ ಸ್ಪಷ್ಟವಾಗಿತ್ತು, ಸರಳವಾಗಿತ್ತು. "ಅಂದರೆ, ಹಕ್ಕುಗಳನ್ನು ಪಡೆದಾಕ್ಷಣ ಅವುಗಳನ್ನು ಉಪಯೋಗಿಸುವ ಶಕ್ತಿ ದೊರೆತಂತಾಗಲಿಲ್ಲ ಎಂದಲ್ಲವೇ ನೀನು ಹೇಳುವುದು? ಹಾಗಿದ್ದರೆ ನೀನನ್ನುವುದು ನನಗೆ ಒಪ್ಪಿಗೆ" ಎಂದರು ಮಾಸ್ತರರು.

ಕರಡೀಭಟ್ಟನಿಗೆ ಮಾನವೀಯ ಹಕ್ಕುಗಳ ಘೋಷಣೆಯ ಕಲಮುಗಳೆಲ್ಲ ಕಂಠಪಾಠವಾಗಿದ್ದವು. ಉದಾಹರಣೆಗಾಗಿ "ಪ್ರತಿಯೊಬ್ಬನಿಗೂ ಆಸ್ತಿಯ ಹಕ್ಕಿದೆ" ಎಂದು ಆ ಘೋಷಣೆಯಲ್ಲಿ ಒಂದು ಕಲಮಿದೆ. ಆದರೆ ಕೆಲ ಬಟ್ಟೆಬರೆ ಮತ್ತು ಮರದ ಸಾಮಾನುಗಳ ಹೊರತು ತನ್ನ ತಾಯಿತಂದೆಗಳಿಗೆ ಬೇರಾವ ಆಸ್ತಿಯೂ ಇರಲಿಲ್ಲವೆಂದು ಅವನಿಗೆ ಚೆನ್ನಾಗಿ ಗೊತ್ತಿತ್ತು. ಅದರಂತೆಯೇ "ಪ್ರತಿಯೊಬ್ಬನಿಗೂ ವಿಶ್ರಾಂತಿ ಹಾಗೂ ಬಿಡುವಿನ ಹಕ್ಕಿದೆ" ಎಂದು ಮಾನವೀ ಘೋಷಣೆಯಲ್ಲಿ ಇನ್ನೊಂದು ಕಲಮಿದೆ. ಆದರೆ ಪ್ರತಿದಿನ ಬಿಡುವಿಲ್ಲದೆ, ವಿಶ್ರಾಂತಿಯಿಲ್ಲದೆ ದುಡಿಯುವ ತನ್ನ ತಾಯಿಗೆ ಸಂಜೆ ನಾಲ್ಕು ತುತ್ತು ಉಣ್ಣಲು ಕುಳಿತಾಗ ಮಾತನಾಡುವಷ್ಟು, ಹೋಗಲಿ, ಉಣ್ಣುವಷ್ಟು ಕೂಡ ಶಕ್ತಿಯಿರುವು ದಿಲ್ಲೆಂದು ಅವನು ಕಣ್ಣಾರೆ ಕಂಡಿದ್ದನು. ಅವಳಿಗೂ ಬಿಡುವಿನ ಹಕ್ಕಿತ್ತಾದರೂ ಅದು ಕಾಗದದಲ್ಲೇ ಉಳಿದಿತ್ತು.

"ಪ್ರತಿಯೊಬ್ಬನಿಗೂ ಶಿಕ್ಷಣದ ಹಕ್ಕಿದೆ" ಎಂದೂ ಅವನು ಓದಿದ್ದನು. ಆದರೆ ಎಷ್ಟೋ ದೇಶಗಳಲ್ಲಿ ಶಾಲೆಗಳ ಕೊರತೆಯಿದೆ; ಜಗತ್ತಿನ ಎಷ್ಟೋ ಭಾಗಗಳಲ್ಲಿ ಶಾಲೆಗಳೇ ಇಲ್ಲ ಎಂದು ಅವನು ಓದಿ ತಿಳಿದುಕೊಂಡಿದ್ದನು. ಇಂಥ ಸ್ಥಳಗಳಲ್ಲಿ ಮಕ್ಕಳಿಗೆ "ಹಕ್ಕಿ"ರಬಹುದು, ಆದರೆ ಆ ಹಕ್ಕಿನಿಂದ ಅವರಿಗೇನೂ ಉಪಯೋಗವಿರಲಿಲ್ಲ.

"ಒಳ್ಳೇದು" ನಮ್ಮ ಮಾಸ್ತರರು ಹೇಳಿದರು. "ನಿನಗೀಗ ಅರ್ಥವಾಗತೊಡಗಿದೆ. ಈ ಘೋಷಣೆಯಲ್ಲಿರುವ ಹಕ್ಕುಗಳೆಂದರೆ ಜಾದೂ ಮಂತ್ರ

ಗಳಲ್ಲ. ಇವು ಬರಿ ನಿಯಮಗಳು. ಇವು ಜನರಿಗಿರುವ ಹಕ್ಕುಗಳನ್ನು ಹೇಳುತ್ತವೆ, ಅಲ್ಲದೆ ಅವು ಜಾರಿಗೆ ಬರಬೇಕೆನ್ನುತ್ತವೆ. ಯಾವ ದೇಶದ ನಾಗರಿಕನಾಗಿರಲಿ, ಎಲ್ಲಿಯೇ ಇರಲಿ, ಆ ಹಕ್ಕುಗಳ ಉಪಯೋಗ ಅವನಿಗೆ ದೊರೆಯುವಂತಿರಬೇಕು. ಒಬ್ಬನಿಗೆ ಹಕ್ಕು ಅನುಭವಿಸಲು ದೊರೆಯದಿದ್ದಲ್ಲಿ ಅವನಿಗೆ ಅದನ್ನು ಅನುಭವಿಸುವ ಅನುಕೂಲತೆ ಮಾಡಿ ಕೊಡಬೇಕು. ಯಾರು ? [illegible] ಪ್ರಶ್ನೆ; ಸರಕಾರ, ರಾಜ್ಯ; ಜನತೆ; ಅಷ್ಟೆ ಏಕೆ, ಪ್ರತಿಯೊಬ್ಬನೂ ಪ್ರತಿಯೊಬ್ಬನಿಗೂ ವಿದ್ಯಾಭ್ಯಾಸದ ಹಕ್ಕು ಇದೆ ಎಂಬ ಘೋಷಣೆಯಿದೆ. ಇದರ ತಾತ್ಪರ್ಯ ಸಮಾಜವು ಸಾಕಷ್ಟು ಶಾಲೆಗಳನ್ನು ರಚಿಸಬೇಕು, ಆದರಿಂದ ವಿದ್ಯಾಭ್ಯಾಸ ಪಡೆಯಲು ಎಲ್ಲ ಮಕ್ಕಳಿಗೂ ಸಾಧ್ಯವಾಗುವುದು-ಎಂಬದಾಗಿದೆ."

ಕರಡೀಭಟ್ಟ ತನ್ನೊಳಗೇ ಎಣಿಕೆ ಹಾಕಿದ, "ಎಲ್ಲರಿಗೂ ಬೂರುಗದ ಮರದ ತುತ್ತತುದಿಗೇರುವ ಹಕ್ಕು ಬಂದೀತು. ಆದರೆ ಯಾರಾದರೂ ಒಂದು ನಿಚ್ಚಣಿಕೆ ತಂದುಕೊಡಬೇಕು ಮಾತ್ರ." ಆದರೆ ಅವನು ಬಿಟ್ಟಿನ್ನಲಿಲ್ಲ. ಮಾಸ್ತರರ ಮಾತಿನ ತತ್ವ ಅವನಿಗೀಗ ಮನವರಿಕೆಯಾಗಿತ್ತು. ಅನಂತರ ಕೆಲ ಕಾಲ ಅವನು ಮಾನವೀ ಹಕ್ಕುಗಳ ಪ್ರಸ್ತಾಪ ಎತ್ತಲಿಲ್ಲ. ಆ ಮೇಲೆ ಒಂದು ದಿನ ಸಹನಾ ಅವನು ಇನ್ನೊಂದು ಉಪದ್ವ್ಯಾಪ ಮಾಡಿದನು.

ಯಾರ ಸಾಧನೆ ತ್ಯಾಗಗಳಿಂದ ಇಂದು ನಾವು ಹಲವು ಸ್ವಾತಂತ್ರ್ಯಗಳನ್ನು, ಹಕ್ಕುಗಳನ್ನು ಪಡೆದಿದ್ದೇವೋ ಅಂಥ ಐತಿಹಾಸಿಕ ಮಹಾಪುರುಷರ ವಿಷಯ ಒಮ್ಮೆ ನಮ್ಮ ಮಾಸ್ತರರು ವಿವರಿಸಿದರು. ಪಾಠ ಮುಗಿದೊಡನೆಯೇ ಅವರು "ಈ ಮಹಾಪುರುಷರು ಯಶಸ್ವಿಗಳಾಗಿದ್ದಾರೇನು, ನಿಮಗೆ ಹೇಗನಿಸುತ್ತದೆ?" ಎಂದು ನಮ್ಮನ್ನು ಪ್ರಶ್ನಿಸಿದರು. "ಹೌದು" ಕರಡೀಭಟ್ಟನನ್ನುಳಿದು ನಾವೆಲ್ಲರೂ ಉತ್ಸಾಹದಿಂದ ಗೋಣು ಹಾಕಿ ನುಡಿದೆವು.

ಆದರೆ ಕರಡೀಭಟ್ಟನ ಸರದಿ ಬಂದಾಗ ಅವನು ತನ್ನ ತಲೆಯನ್ನು ನಕಾರಾತ್ಮಕವಾಗಿ ಅಲ್ಲಾಡಿಸಿದನು. "ಇದೊಂದು ಸುಳ್ಳಿನ ಕಂತೆ" ಎಂದು ಅವನು ಧೃಢವಾಗಿ ಹೇಳಿದನು. ನಮ್ಮ ಮುಖಗಳಲ್ಲಾದ ಬದಲಾವಣೆಗಳನ್ನು ಲಕ್ಷಿಸದೆ ಅವನು ಮುಂದುವರಿಸಿದ: "ಎಲ್ಲ ಜನರೂ ಸೋದರರಾಗಿಬಿಟ್ಟಿದ್ದಾರೆ; ಎಲ್ಲರೂ ಎಲ್ಲ ಕಡೆ ಸಮಾನತೆ ಮತ್ತು ನ್ಯಾಯವನ್ನು ಪಡೆದಿದ್ದಾರೆ ಎಂದು ನೀವು ಹೇಳುತ್ತಿದ್ದರೆ ಅದೊಂದು ಶತ ಸುಳ್ಳು."

ಈ ಬಾರಿಯೂ ಮಾಸ್ತರರು ಕರಡೀಭಟ್ಟನೆಂದದ್ದೇ ಸರಿಯೆಂದರು. "ನಿಜವಾದ ಸ್ವಾತಂತ್ರ್ಯದ ಹೋರಾಟ ಇನ್ನೂ ವಿಜಯಿಯಾಗಿಲ್ಲ. ಅದಿನ್ನೂ ಬಹುದೂರ ಇದೆ. ಮಾನವೀಯ ಹಕ್ಕುಗಳ ಘೋಷಣೆ ಒಂದು ವಿಜಯವಾರ್ತೆಯ ಪ್ರಕಟನೆಯಲ್ಲ. ಅದು ಕೇವಲ ಸೈನಿಕರ ಧ್ಯೇಯ ಘೋಷಣೆ" ಎಂದರವರು.

ಅನಂತರ ಅವರು ಕರಡೀಭಟ್ಟನ ಕಡೆಗೆ ತಿರುಗಿದರು :

"ಈ ಘೋಷಣೆ ನಿನ್ನನ್ನು ಕೆರಳಿಸಿದಹಾಗಿದೆ. ಅದು ಮಾಡಬೇಕಾದುದಾದರೂ ಅಷ್ಟೇ. ಮಾನವೀಯ ಹಕ್ಕುಗಳು ಇಂದು ಹೇಗಿವೆಯೆಂದು ಅದು ಹೇಳುತ್ತಿರದೆ ಅವು ನ್ಯಾಯವಾಗಿ ಹೇಗಿರಬೇಕೆಂದು ಹೇಳುತ್ತದೆ. ಘೋಷಣೆಯನ್ನೋದಿದಾಗ ಅವಿನ್ನೂ ಕಾರ್ಯರೂಪಕ್ಕೆ ಬಂದಿಲ್ಲವೆಂದು ತಿಳಿದು ನೀನು ಸಿಟ್ಟಾಗಬಹುದು. ಆದರೆ ಆ ಘೋಷಣೆಯನ್ನು ವಾಸ್ತವವಾಗಿ ಮಾಡುವ ಮಾರ್ಗಗಳನ್ನು ಹುಡುಕಲಿಕ್ಕೂ ನೀನು ಯತ್ನಿಸಬೇಕು."

ಕರಡೀಭಟ್ಟನೀಗ ಬೂರುಗದ ಮರವನ್ನಾಗಲಿ ಆಟದ ಬಯಲನ್ನಾಗಲಿ ಆಲೋಚಿಸುತ್ತಿರಲಿಲ್ಲ. ಮಾಸ್ತರರು ತನ್ನನ್ನುದ್ದೇಶಿಸಿಯೇ ಇಷ್ಟೆಲ್ಲ ಹೇಳುತ್ತಿರುವರೆಂದು ತಿಳಿದು ಅವನು ಸಂಕೋಚಪಡುತ್ತಿದ್ದನು.

ಆಗ ಮಾಸ್ತರರು ನೇರವಾಗಿ ಕೇಳಿದರು : "ಜಗತ್ತಿನ ಜನರು ಉದಾಹರಣೆಗೆ ನಮ್ಮ ದೇಶದವರು ಸುಸಂಸ್ಕೃತರಾಗಿರುವರೆಂದು ನಿನಗನಿಸುತ್ತದೇನು ?"

ಒಡನೆಯೇ ಆತ ಉತ್ತರವಿತ್ತ : "ಇಲ್ಲ; ಪೂರ್ತಿಯಾಗಿ ಇಲ್ಲ. ಹಾಗಿರುತ್ತಿದ್ದರೆ ಮಾನವೀಯ ಹಕ್ಕು ಬಾಧ್ಯತೆಗಳ ವಿಷಯ ನಮಗೆ ಕಲಿಸುವ ಪ್ರಸಂಗವೇ ಬರುತ್ತಿರಲಿಲ್ಲ."

"ಒಳ್ಳೇದು" ಮಾಸ್ತರರು ನಮ್ಮ ಕಡೆಗೆ ತಿರುಗಿ ಹೇಳಿದರು : "ಹಾಗಾದರೆ ನಾವು ಜಗತ್ತನ್ನು ಸುಧಾರಿಸಿ ಸುಸಂಸ್ಕೃತಗೊಳಿಸಲು ಪ್ರಾರಂಭಿಸೋಣ. ಆ ಕೆಲಸ ನಮ್ಮದೇ. ನಾವು ಮಾಡದಿದ್ದರೆ ನಮಗಾಗಿ ಅದನ್ನು ಬೇರಾರೂ ಮಾಡಲಾರರು."

## ಹೆಣ್ಣು ಕುಟ್ಟಿದ ಗುಳಿಗೆ

ಒಬ್ಬ ಸುಂದರ ಸ್ತ್ರೀ ಬೀದಿಯಿಂದ ಹೋಗುತ್ತಿದ್ದಳು. ಅದೇ ದಾರಿಯಿಂದ ಅವಳಿಗೆ ಎದುರಾದ ಒಬ್ಬ ಮರುಳಹರೆಯದ ಹುಡುಗ ಅವಳನ್ನು ನೋಡಿಯೇ ನೋಡಿದ. ತರುಣಿ ಇವನನ್ನು ದಾಟ ಮುಂದೆ ಹೋದಳು. ಆದರೂ ಇವನಿಗೆ ಇನ್ನೂ ಕಣ್ಣ ಹಸಿವು ತಣಿಯುಲಿಲ್ಲ. ಕೂಡಲೇ "ಘೂಮ್ ಜಾವ್" ಮಾಡಿ ಮತ್ತೆ ಅವಳ ಬೆನ್ನು ಹತ್ತಿದ. ಹೀಗೇ ಎಷ್ಟೋ ದೂರ ಬೆನ್ನುಹತ್ತಿಯೇ ಹತ್ತಿದ. ಈ ಪೀಡೆಯನ್ನು ಕಂಡು ತರುಣಿ ಅವನನ್ನು ಮಾತನಾಡಿಸಿದಳು.

"ಏಕೆ ತರುಣಾ, ನನ್ನ ಹಿಂದೆ ಬರುತ್ತಿರುವಿ ?"

ತರುಣ ಧನ್ಯತೆಯ ಮುಗುಳು ನಗೆಯೊಡನೆ ಉತ್ತರವಿತ್ತ :

"ತರುಣಿ, ನಿನ್ನನ್ನು ಪ್ರೀತಿಸುವೆ. ಅಂತಲೆ ನೀನೊಂದು ದಿಕ್ಕಿಗೆ ನಾನೊಂದು ದಿಕ್ಕಿಗೆ ಹೋಗುವದನ್ನು ನಾನು ಸಹಿಸಲಾರೆ."

ತರುಣಿ ಮುಗುಳುನಗೆ ಚೆಲ್ಲುತ್ತ ಕೇಳಿದಳು : "ಏಕೆ ತರುಣಾ ನೀನು ನನ್ನನ್ನು ಪ್ರೀತಿಸುತ್ತೀ? ಕಾರಣ ಹೇಳುವೆಯಾ ?"

ತರುಣ ತುತ್ತು ಕೈಗೆ ಬಂತೆಂದು ತಿಳಿದು ಹಿಗ್ಗಿನಿಂದ ಎದೆಯುಬ್ಬಿಸಿ ಹೇಳಿದ : "ಬಾಲೆ ನೀನೊಳ್ಳೆ ಚೆಲುವಿ, ಬೆಡಗುಗಾತಿ ಎಂದು ನಿನ್ನ ಪ್ರೀತಿಸುವೆ."

ತರುಣಿ ಹೇಳಿದಳು. "ಓಹೋ ನೀನು ಚೆಲುವೆಯನ್ನೇ ಪ್ರೀತಿಸುತ್ತಿದ್ದರೆ ಹೀಗೆ ಹೋಗು. ಅಲ್ಲಿ ನಮ್ಮ ಮನೆ. ನಮ್ಮ ಅಕ್ಕ ನನಗಿಂತ ಹತ್ತುಪಟ್ಟು ಚೆಲುವೆ. ನಿನ್ನನ್ನು ಅವಳೂ ಮೆಚ್ಚುವಳು."

ತರುಣ ಒಂದು ಕ್ಷಣ ನಿಲ್ಲಲಿಲ್ಲ. ಅವಳ ಬೆರಳ ತುದಿ ಹಿಡಿದೇ ಓಡಿದ. ದಾರಿಯಲ್ಲಿ ಎಡವಿ ಬಿದ್ದ. ಜನ ನಕ್ಕರು. ಆದರೂ ಮುಂದೆ ಸಾಗಿದ. ಒಂದು ಮನೆ. ಅದೇ ಅವಳು ತೋರಿದ ಮನೆ. ಬಾಗಿಲಿಗೆ ಬೀಗ ಬಡಿದಿತ್ತು. ನಿರಾಶೆಯಿಂದ, ಕೋಪದಿಂದ ತರುಣ ಹಿಂತಿರುಗಿದ.

ಸ್ವಲ್ಪ ಜೋರಿನಿಂದಲೇ ಕೇಳಿದ :

"ಎಂಥ ಗುಳಿಗೆ ಕುಟ್ಟಿದೆ ತರುಣಿ ಮೋಸಗಾರ್ತಿ !"

"ತರುಣ, ನೀನು ನನ್ನ ಪ್ರೀತಿಸುವೆನೆಂದು ಹೇಳಿದ್ದೂ ಅದೇ ಅಲ್ಲವೆ?" ಎಂದಳು ತರುಣಿ.

ಒಬ್ಬ ಕಾಲೇಜ ಹುಡುಗ ಪ್ರಸಿದ್ಧ ವಕೀಲರಿಗೆ ಕಾಯುದೆ ನೆನಪು ಮಾಡಿಕೊಟ್ಟ!

# ವಕೀಲರಿಗೆ ಕಾಯದೆ ಗೊತ್ತಿಲ್ಲದಿದ್ದರೆ—

ರಂ. ರಾ. ತಲಚೇರಕರ

ಮಂಗಳೂರಿನ ಒಂದು ವಿದೇಶೀ ಕಂಪನಿಯಲ್ಲಿ ಉಚ್ಚ ಅಧಿಕಾರದಲ್ಲಿದ್ದ ಕ್ರೈಸ್ತ ಗೃಹಸ್ಥರೊಬ್ಬರು ಅಲ್ಲಿಂದ ಆರು ಮೈಲಿ ದೂರ ಕೋಟೆಕಾರ ಗ್ರಾಮದಲ್ಲಿರುವ ತಮ್ಮ ಒಂದು ಹುಲ್ಲುಗಾವಲಿನ ರಖವಾಲಿದಾರನಾಗಿ ಮುಂಡಪ್ಪ ಶೆಟ್ಟಿ ಎಂಬ ಬಂಟನನ್ನು ನೇಮಿಸಿದರು. ಹುಲ್ಲುಗಾವಲಿನಲ್ಲಿ ಬೇರೆ ಯಾರಿಗೂ ಏನೂ ಹಕ್ಕಿಲ್ಲವೆಂದೂ ಯಾರೇ ಆಗಲಿ ಒಳಗೆ ನುಗ್ಗಲು ಪ್ರಯತ್ನ ಮಾಡಿದರೆ ಅವರನ್ನು ಸರ್ವಥಾ ಬಿಡಬಾರದೆಂದೂ ಅವನಿಗೆ ಕಟ್ಟಪ್ಪಣೆ ಮಾಡಿದ್ದರು.

ಒಡೆಯನ ಆದೇಶವನ್ನು ಚ್ಯುತಿ ಇಲ್ಲದೆ ಪಾಲಿಸುವ ಧೃಡನಿಶ್ಚಯದಿಂದ ಬಂಟ ಮುಂಡಪ್ಪ ಶೆಟ್ಟಿಯು ಅತಿಯಾದ ಎಚ್ಚರದಿಂದ ಹುಲ್ಲುಗಾವ

ಲಿನ ರಕ್ಷಣೆಯನ್ನು ಮಾಡಿದನು. ಅವನು ರಖವಾಲೆ ವಹಿಸಿದ ಹದಿನೈದನೇ ದಿನ ಅದೇ ಗ್ರಾಮದ ಹೈಡ್ರೋಸ್ ಬ್ಯಾರಿ ಎಂಬ ಮಾಪಿಳ್ಳೆಯೊಬ್ಬನು ಇತರ ಕೆಲವು ಸಹಧರ್ಮೀಯರೊಂದಿಗೆ ಆ ಹುಲ್ಲುಗಾವಲನ್ನು ಪ್ರವೇಶಿಸಿ ಹುಲ್ಲು ಕೊಯ್ಯಲು ಪ್ರಾರಂಭಿಸಿದನು. ಮುಂಡಪ್ಪ ಶೆಟ್ಟಿಯು ಅವರನ್ನು ಅಡ್ಡಗಟ್ಟಿದನು. ಉಭಯತರಿಗೂ ಕೈಕೈ ಹತ್ತಿತು. ಮುಂಡಪ್ಪ ಶೆಟ್ಟಿಯು ತನ್ನ ಕೈಲಿದ್ದ ಕತ್ತಿಯಿಂದ ಒಬ್ಬ ಮಾಪಿಳ್ಳೆಯನ್ನು ಕಡಿದನು. ಆ ಮಾಪಿಳ್ಳೆಗೆ ಭಾರೀ ಗಾಯವಾಯಿತು.

ಕ್ರಮಾಗತ ಪದ್ಧತಿಯಂತೆ ಪೋಲೀಸರು ಹರಿತವಾದ ಶಸ್ತ್ರದಿಂದ ಭಾರೀ ಗಾಯ ಮಾಡಿದ ಆರೋಪದ ಮೇಲೆ ಖಟ್ಲೆ ಹಾಕಿದರು. ಅವನ ಪರವಾಗಿ ವಾದಿಸಲು ಅವನ ವಕಾಲತು ನನ್ನ ಕಡೆಗೆ ಬಂತು. ಅದನ್ನು ನಾನು ಹುರುಪಿನಿಂದ ವಹಿಸಿದೆ. ಯಾಕೆಂದರೆ, ಅವನು ಕೊಟ್ಟ ಮಾಹಿತಿಯ ಮೇರೆಗೆ ಹುಲ್ಲುಗಾವಲಿನೊಳಗೆ ಪ್ರವೇಶಿಸಲು ಅಥವಾ ಹುಲ್ಲು ಕೊಯ್ಯಲು ಹೈದ್ರೋಸ್ ಬ್ಯಾರಿಗಾಗಲಿ ಇತರ ಮಾಪಿಳ್ಳೆಯವರಿಗಾಗಲಿ ಏನೊಂದು ಹಕ್ಕಿದ್ದಿಲ್ಲ. ಹಾಗಾಗಿ ಅವರ ಕೃತ್ಯವು ಅತಿಕ್ರಮ ಪ್ರವೇಶ ಹಾಗೂ ಕಳವಿನ ಅಪರಾಧವಾಗಿತ್ತು. ಆ ಅಪರಾಧಗಳನ್ನು ಮಾಡುವ ಮನುಷ್ಯನಿಗೆ ಆಸ್ತಿಯ ರಕ್ಷಣೆಯ ಸಲುವಾಗಿ ಮರಣವನ್ನುಳಿದು ಬೇರೆ ಯಾವುದೇ ಗಾಯ ಮಾಡುವ ಹಕ್ಕು ಪ್ರತಿಯೊಬ್ಬ ನಾಗರಿಕನಿಗೆ ಇದೆ. ಈ ಪರಿಸ್ಥಿತಿಯಲ್ಲಿ ಮುಂಡಪ್ಪಶೆಟ್ಟಿಯ ಕೃತ್ಯವು ಅಪರಾಧದ ಕಕ್ಷೆಯಿಂದ ಸಂಪೂರ್ಣವಾಗಿ ಹೊರಪಡುವಂತಿತ್ತು.

ಆದರೆ, ಖಟ್ಲೆಯ ವಿಚಾರಣೆ ಸುರುವಾದಾಗ ಮಾತ್ರ ನನಗೆ ವಜ್ರಾಘಾತವಾದಂತಾಯಿತು. ವಿಚಾರಣೆಯಲ್ಲಿ ಹೊರಪಟ್ಟ, ಸುಳ್ಳೆಂದು ಪ್ರತಿಪಾದಿಸಲು ಸಾಧ್ಯವೇ ಇಲ್ಲದ, ಫಿರ್ಯಾದಿ ಪಕ್ಷದ ಲೇಖೀ ಹಾಗೂ ಬಾಯಿ ಪುರಾವೆಯ ಪ್ರಕಾರ, ಆ ಹುಲ್ಲುಗಾವಲಿನ ಮಾಲಕ ಕ್ರೈಸ್ತಗೃಹಸ್ಥರು ಅದನ್ನು ಹೈದ್ರೋಸ್ ಬ್ಯಾರಿಗೆ ಗೇಣಿಗೆ ಕೊಟ್ಟಿದ್ದರು. ದಾವೆ ಮಾಡಿ ಅವನನ್ನು ಹೊರಪಡಿಸಲು

ಹತ್ತುವ ವಿಳಂಬ ಹಾಗೂ ವೆಚ್ಚವನ್ನು ತಪ್ಪಿಸಲ
ಅವರು ಅವನನ್ನು ಬಲಾತ್ಕಾರದಿಂದ ಅಲ್ಲಿಂ
ಹೊರಗಟ್ಟುವ ಈ ಹಂಚಿಕೆಯನ್ನು ಹೂಡಿದ್ದರು

ಹುಲ್ಲುಗಾವಲು ಹೈದ್ರೋಸ್ ಬ್ಯಾರಿಯ ಸ್ವಾ
ಧೀನದಲ್ಲಿ ಕಾಯದೇಶೀರವಾಗಿ ಇದ್ದುದಾದರೆ
ಮುಂಡಪ್ಪಶೆಟ್ಟಿಯ ಕೃತ್ಯವು ಆಸ್ತಿಯ ರಕ್ಷಣೆಯ
ವ್ಯಾಪ್ತಿಯೊಳಗೆ ಬರುವದು ಶಕ್ಯವೇ ಇದ್ದಿಲ್ಲ
ಆ ಕಾರಣದಿಂದ ಅದನ್ನು ಸಮರ್ಥಿಸುವದಂತು
ದೂರವೇ ಉಳಿಯಿತು. ವಾದಕ್ಕೆ ಎಡೆಯ
ಇಲ್ಲದೆ ನನ್ನ ಬಾಯಿ ಕಟ್ಟಿತು. ನಿರಪರಾಧಿಯಾ
ಬಂಟ ಮುಂಡಪ್ಪಶೆಟ್ಟಿಗೆ ದೀರ್ಘಕಾಲದ ಕಠಿ
ಸಜೆಯಾಯಿತು.

ರೂಢಿಯಂತೆ ಅಪೀಲು ದಾಖಲು ಮಾಡಿದೆ
ಆದರೆ ನಿರಾಶೆಯ ಮೋಡಗಳು ಕವಿದ ನನ
ಮನಸ್ಸಿನ ಅಂತರಿಕ್ಷದಲ್ಲಿ ಆಶಾಕಿರಣಗಳೇನು
ತೋರುತ್ತಿದ್ದಿಲ್ಲ.

ಅಪೀಲಿನ ವಿಚಾರಣೆಯ ತಾರೀಖಿನ ಮುನ್ನಾ
ದಿವಸ ಜಡಮನಸ್ಸಿನಿಂದ ವಿಚಾರಮಗ್ನನಾ
ಕುಳಿತಿದ್ದೆನು. ರಜೆಯ ದಿನಗಳೆಂದು ಮಂಗಳೂ
ರಿಗೆ ಬಂದಿದ್ದ ನಮ್ಮ ಆಪ್ತರ ಪೈಕಿಯ ಕಾಲೇಜಿ
ವಿದ್ಯಾರ್ಥಿಯೊಬ್ಬನು ಟೇಬಲ ಮೇಲಿದ್ದ ಒಂದ
ಹಳೆಯ ಲಾ ರಿಪೋರ್ಟಿನ ಪಾನುಗಳನ್ನು
ಮುಗುಚಿಹಾಕುತ್ತಿದ್ದನು. ಒಮ್ಮಿಗೆಲೆ ಅವನ
"ಭಾವೋಜ, ನಿಮ್ಮ ಕಾಯದೆ ಅಂದರೆ ಬಹ
ಚಮತ್ಕಾರಿಕ ಕಾಣಿಸುತ್ತದೆ. ಭೂತವೆಂದ
ಭಾವಿಸಿ ಒಬ್ಬ ಮನುಷ್ಯನನ್ನು ಕೊಂದರೂ ಅಪ
ರಾಧವಾಗುವದಿಲ್ಲವಂತೆ" ಅಂದನು.

"ಒಳ್ಳೆಯ ಕಾಯದೆ ಪಂಡಿತ ನೀನು. ನಿನ
ಕಾಯದೆಯಂತೆ ನಡೆದರೆ ನಾವೆಲ್ಲರೂ ಗಲ್ಲಿಗೇ
ಬೇಕಾದೀತು" ಅಲ್ಲೇ ಕುಳಿತಿದ್ದ ನಮ್ಮಾ
ಉತ್ತರಿಸಿದಳು.

"ಏನು ನಾನು ಸುಳ್ಳು ಹೇಳುತ್ತೇನೇನು
ನೋಡು ಭಾವೋಜ!" ಎಂದು ಅವನು ಆ ಲ
ರಿಪೋರ್ಟನ್ನು ನನ್ನ ಕೈಗೆ ಕೊಟ್ಟನು. ೧೯೩
ನೇ ಇಸವಿಯಲ್ಲಿ ಲಾಹೋರ ಹೈಕೋರ್ಟಿನವರ
"ವಾರಯಾಮ ಸಿಂಗ ವಿರುದ್ಧ ಸರಕಾರ''
ಅಪೀಲಿನಲ್ಲಿ ಕೊಟ್ಟ ತೀರ್ಪು ಅದರಲ್ಲಿತ್ತು. ವಾ

ರಯಾಮ ಸಿಂಗನು ನಡುರಾತ್ರಿಯಲ್ಲಿ ಸ್ಮಶಾನದಲ್ಲಿ ಒಂದು ಆಕೃತಿಯನ್ನು ಕಂಡು ಮಾತಾಡಿಸಿದಾಗ ಅದು ಉತ್ತರ ಕೊಡದೆ ಇದ್ದುದರಿಂದ ಅದು ಭೂತವೇ ಇರಬೇಕೆಂದು ಭಾವಿಸಿ ಅದಕ್ಕೆ ಡೊಣ್ಣೆಯಿಂದ ಚೆನ್ನಾಗಿ ಬಡಿದನು. ಆದರೆ, ಆ ಆಕೃತಿಯು ಭೂತವಾಗಿರದೆ ಘಗ್ಗಾಸಿಂಗನೆಂಬ ಮನುಷ್ಯನೇ ಆಗಿದ್ದನು. ವಾರಯಾಮ ಸಿಂಗನು ಊರಿಗೆ ಬಂದು ತಾನು ಒಂದು ಭೂತವನ್ನು ಹೊಡೆದು ಅದನ್ನು ಕೆಡವಿದೆನೆಂದು ಮಂದಿಗೆ ಹೇಳಿದನು. ಅವರು ಅಲ್ಲಿ ಹೋಗಿ ನೋಡಿದಾಗ ಮಾತ್ರವೇ ಘಗ್ಗಾ ಸಿಂಗನೆಂಬುದು ಗೊತ್ತಾಯಿತು. ಅಷ್ಟರಲ್ಲಿ ಘಗ್ಗಾ ಸಿಂಗನು ಮೃತನಾಗಿದ್ದನು.

ವಾರಯಾಮಸಿಂಗನಿಗೂ ಘಗ್ಗಾಸಿಂಗನಿಗೂ ಏನೂ ದ್ವೇಷವಿರಲಿಲ್ಲ. ಹಾಗೂ ತಾನು ಹೊಡೆದ ಆಕೃತಿಯು ಭೂತವೆಂದು ಭಾವಿಸಲು ಅವನಿಗೆ ಸಾಕಷ್ಟು ಕಾರಣಗಳಿದ್ದವು. ಈ ಎಲ್ಲಾ ಸಂಗತಿಗಳಿಂದ ವಾರಯಾಮಸಿಂಗನ ಕೃತ್ಯವು ಪೀನಲ ಕೋಡಿನ ೭೯ ನೇ ಕಲಮಿನ ಪ್ರಕಾರ ಅಪರಾಧ ಶಿಕ್ಷೆಯಿಂದ ಹೊರಪಡುವದೆಂದು ಅಭಿಪ್ರಾಯ ಪಟ್ಟು ಹೈಕೋರ್ಟಿನವರು ಅವನನ್ನು ಬಿಡುಗಡೆ ಪಡಿಸಿದ್ದರು.

ಕೂಡಲೇ ಪೀನಲ ಕೋಡನ್ನು ತೆರೆದು ೭೯ ನೇ ಕಲಮನ್ನು ಓದಿದೆ.

"ಕಾಯದೆಯ ಪ್ರಕಾರ ಕೃತ್ಯವು ಸಮರ್ಥನೀಯವಿದ್ದ ಅಥವಾ ವಸ್ತುಸ್ಥಿತಿಯ ತಪ್ಪು ಗ್ರಹಿಕೆಯಿಂದ ಸಮರ್ಥನೀಯವೆಂದು **ಸದ್ಭಾವನೆಯಿಂದ ನಂಬಿರುವ** ಪರಿಸ್ಥಿತಿಯಲ್ಲಿ ಒಬ್ಬ ಮನುಷ್ಯನು ಮಾಡಿದ ಕೃತ್ಯವು ಅಪರಾಧವಲ್ಲ."

ತಟ್ಟನೆ ತಲೆಯಲ್ಲಿ ಪ್ರಕಾಶ ಹೊಳೆಯಿತು. ಈ ಕಲಮಿನನ್ವಯ ಮುಂಡಪ್ಪ ಶೆಟ್ಟಿಯು ದೋಷಮುಕ್ತನಾಗಲೇ ಬೇಕು. ಅವನ ಕೃತ್ಯವು ಕಾಯದೆಯ ಪ್ರಕಾರ ಸಮರ್ಥನೀಯವಲ್ಲದಿದ್ದರೂ ಅವನು ವಸ್ತುಸ್ಥಿತಿಯ ತಪ್ಪುಗ್ರಹಿಕೆಯಿಂದ ಅದು ಸಮರ್ಥನೀಯವೆಂದು ಸದ್ಭಾವನೆಯಿಂದ ನಂಬಿದ್ದನೆಂಬುದನ್ನು ತೋರಿಸುವದು ಕಠಿಣವಿರಲಿಲ್ಲ. ಯಾಕೆಂದರೆ ಅವನನ್ನು ರಖವಾಲಿಗೆ ನೇಮಿಸಿದ ಕ್ರೈಸ್ತ ಗೃಹಸ್ಥರು ಯಾರನ್ನೂ ಒಳಗೆ ಬಿಡಬಾರದೆಂದು ಆಜ್ಞಾಪಿಸಿದ ಸಂಗತಿಯು ಶಾಬೀತಾಗಿತ್ತು. ಹಾಗೂ ಆ ಹುಲ್ಲುಗಾವಲು ಅವರ ಸ್ವಾಧೀನದಲ್ಲಿಲ್ಲವೆಂದು ಮುಂಡಪ್ಪ ಶೆಟ್ಟಿಗೆ ಸಂಶಯ ಬರಲು ಸಹ ಕಾರಣವಿರಲಿಲ್ಲ.

ಪೀನಲಕೋಡಿನಲ್ಲಿ ಹೆಚ್ಚಿನ ಮಾರ್ಕು ಪಡೆದು ಎಲ್ ಎಲ್. ಬಿ. ಪಾಸಾಗಿದ್ದರೂ ಈ ಮಹತ್ವದ ಕಲಮನ್ನು ಮರೆತುದಕ್ಕೆ ನನ್ನನ್ನು ನಾನೇ ಜರೆದುಕೊಂಡೆನು.

ಮೆಕೊಲೇಸಾಹೇಬರು ಈ ಕಲಮಿನ ಯೋಜನೆಯನ್ನು ಮಾಡದಿದ್ದರೆ ಅಪರಾಧ ಮಾಡುವ ಉದ್ದೇಶವಿಲ್ಲದ, ಹಾಗೂ ತಾವು ಮಾಡುವ ಕೃತ್ಯವು ಅಪರಾಧವಾಗುವದೆಂಬ ತಿಳಿವಳಿಕೆ ಕೂಡಾ ಇಲ್ಲದ ಎಷ್ಟೋ ಮಂದಿ ಶಿಕ್ಷೆಗೆ ಗುರಿಯಾಗುತ್ತಿದ್ದರು.

ಮುಂಡಪ್ಪ ಶೆಟ್ಟಿಯು ಅಪೀಲಿನಲ್ಲಿ ಬಿಡುಗಡೆ ಹೊಂದಿದನು. ಆದರೆ, ನನ್ನ ಅಜ್ಞಾನದಿಂದ ಅವನು ಎರಡು ದಿನ ಜೇಲಿನಲ್ಲಿ ಕೂಡ್ರಬೇಕಾಯಿತು. ಇದೇ ರೀತಿ ವಕೀಲರ ಪ್ರಮಾದದಿಂದ ಎಷ್ಟೋ ಸಾರೆ ಪಕ್ಷಕಾರರ ಹಾನಿಯಾಗುವದುಂಟು. ಕಾಯದೆಗಳ ವೈವಿಧ್ಯ ಹಾಗೂ ವ್ಯಾಪಕತೆಯ ಈ ದಿನಗಳಲ್ಲಿ ತಮ್ಮ ಅಜ್ಞಾನ ಅಥವಾ ಅಯೋಗ್ಯ ಸಲಹೆಯಿಂದ ಯಾರಿಗೂ ಹಾನಿಯಾಗಿಲ್ಲವೆಂದು ಯಾವ ಪ್ರಾಮಾಣಿಕ ವಕೀಲನು ಎದೆ ತಟ್ಟಿ ಹೇಳಬಲ್ಲನು ?

ಆ ಕಾಲೇಜ ಹುಡುಗನು ಅಂದು ರಾತ್ರಿ ಆ ಲಾ ರಿಪೋರ್ಟಿನ ಪಾನುಗಳನ್ನು ತೆರೆಯದಿದ್ದರೆ ಮುಂಡಪ್ಪ ಶೆಟ್ಟಿಯು ಜೇಲಿಗೆ ಹೋಗಬೇಕಾಗುತ್ತಿತ್ತು.

*

ಈ ಕಲಮಿನ ಆಧಾರದ ಮೇಲೆ ಹಂಚಿನ ಕಾರಖಾನೆಯ ನಾಲ್ಕು ನಿರಪರಾಧಿ ಕೂಲಿಕಾರರನ್ನು ಶಿಕ್ಷೆಯಿಂದ ತಪ್ಪಿಸುವ ಸಂಧಿಯು ನನ್ನ ಅನುಭವದಲ್ಲಿ ಇನ್ನೊಮ್ಮೆ ಬಂದಿತ್ತು. ಮಂಗಳೂರಿನ ಔದ್ಯೋಗಿಕ ಕೇಂದ್ರವಾದ ಬೋಳಾರದಲ್ಲಿ ಒಂದು ರಾತ್ರಿ ಕಳವಿನ ಅಪರಾಧಕ್ಕಾಗಿ ಒಬ್ಬನನ್ನು ದಸ್ತಗಿರಿಮಾಡಿ ಒಯ್ಯುತ್ತಿರುವಾಗ ಅವನ

ಬೊಬ್ಬೆ ಕೇಳಿ ನೆರೆಯಲ್ಲಿ ವಾಸಿಸುತ್ತಿದ್ದ ಕೆಲವು ಕೂಲಿಕಾರರು ಓಡಿ ಬಂದು ಸಬ್-ಇನ್ಸ್‌ಪೆಕ್ಟರ ರನ್ನೂ ಪೋಲೀಸರನ್ನೂ ಚೆನ್ನಾಗಿ ಥಳಿಸಿ ಅವ ನನ್ನು ಬಿಡಿಸುವ ಪ್ರಯತ್ನ ಮಾಡಿದರು. ಆ ಸಂಬಂಧದಲ್ಲಿ ನಾಲ್ಕು ಕೂಲಿಕಾರರ ಮೇಲೆ ಖಟ್ಲೆ ಹಾಕಲ್ಪಟ್ಟಿತ್ತು.

ನಿಜವಾಗಿಯೂ ಅವರಿಗೆ ಆ ಮನುಷ್ಯನನ್ನು ಒಯ್ಯುತ್ತಿದ್ದವರು ಪೋಲೀಸರೆಂದು ಗೊತ್ತಿರ ಲಿಲ್ಲ. ಅವನು ಅಲ್ಲಿನ ಒಬ್ಬ ಮುಸಲ್ಮಾನ ಸಾವ ಕಾರನಿಂದ ಸಾಲ ತಗೊಂಡಿದ್ದನು. ಆ ಸಂಬಂಧ ದಲ್ಲಿ ಅವರೊಳಗೆ ಏನೊ ತಂಟೆ ಹುಟ್ಟಿ ಆ ಮುಸ ಲ್ಮಾನನು ಅವನಿಗೆ ಬಲಾತ್ಕಾರದ ಬೆದರಿಕೆ ಹಾಕಿ ದ್ದನು. ಹಾಗಾಗಿ ಅವನನ್ನು ಆ ಮುಸಲ್ಮಾನನ ಜನರೇ ಬಲಾತ್ಕಾರದಿಂದ ಎಳೆದುಕೊಂಡು ಹೋಗುತ್ತಿರಬೇಕೆಂಬ ಭಾವನೆಯಿಂದ ಅವರು ಪೋಲೀಸರ ಮೈಮೇಲೆ ಬಿದ್ದಿದ್ದರು.

ಅವರು ಪೋಲೀಸರನ್ನು ಹೊಡೆದ ಬಗ್ಗೆ ಬಲ ವತ್ತರವಾದ ಪುರಾವೆ ಇತ್ತು. ವಸ್ತುಸ್ಥಿತಿಯ ತಪ್ಪು ಗ್ರಹಿಕೆಯಿಂದ ತಾವು ಪೋಲೀಸರನ್ನು ಬಡಿದೆವೆಂಬುದನ್ನು ಸಮರ್ಥಿಸುವ ಸಂಗತಿಗಳ್ಯಾ ವವೂ ಪುರಾವೆಯಲ್ಲಿ ಹೊರಬೀಳದಿದ್ದರೆ, ಅವ ರಿಗೆ ಬಿಡುಗಡೆಯ ದಾರಿಯೇ ಇರಲಿಲ್ಲ.

ಖಟ್ಲೆಯಲ್ಲಿ ದೋಷಮುಕ್ತರಾಗುವ ಲಕ್ಷಣ ಏನೂ ತೋರುವದಿಲ್ಲವೆಂದು ಅವರ ವಕೀಲರು ಹೇಳಿದ್ದರಿಂದ ಅವರು ಕೊನೆಯ ಘಟ್ಟದಲ್ಲಿ ನನ್ನ ಕಡೆಗೆ ಬಂದರು. ನಾನೂ ತುಸು ಅಧೀರತೆ ಯಿಂದಲೇ ಸಾಕ್ಷಿಗಾರರ ಜಬಾನಿಯನ್ನು ಪರಿಶೀ ಲಿಸಿದೆ. ಆದರೆ, ಎಲ್ಲಾ ಕಾಗದಪತ್ರ ಓದಿ ನೋಡಿದ ಬಳಿಕ ನಾನು ಅವರಿಗೆ ಆಶ್ವಾಸನ ಕೊಟ್ಟೆ.

ಸಾಕ್ಷಿಗಾರರ ಜಬಾನಿಯಲ್ಲಿ ಒಂದು ಸಂಗತಿ ಹೊರಪಟ್ಟಿತ್ತು. ಅದೆಂದರೆ ದಸ್ತಗಿರಿ ಮಾಡಿದ ಮನುಷ್ಯನನ್ನು ಒಯ್ಯುವಾಗ ಅವನು "ನನ್ನನ್ನು ಎಳೆದುಕೊಂಡು ಹೋಗುತ್ತಾರೆ. ಬಿಡಿಸಿರೊ ಎಂದು ಬೊಬ್ಬಿಡುತ್ತಿದ್ದನೆಂಬುದು. ರಾತ್ರಿಯಲ್ಲಿ ಈ ಬೊಬ್ಬೆಯನ್ನು ಕೇಳಿದ ನೆರೆಯವರು ಮುಸ ಲ್ಮಾನ ಸಾವಕಾರನ ಜನರೇ ಅವನನ್ನು ಎಳೆದು ಕೊಂಡು ಹೋಗುತ್ತಿರಬೇಕೆಂದು ಭಾವಿಸುವದು ಸಂಭವನೀಯವಾಗಿಯೇ ಇತ್ತು.

ಒಯ್ಯುತ್ತಿದ್ದವರು ಪೋಲೀಸರೆಂದು ಗೊತ್ತಿ ಲ್ಲದೆ ಕೇವಲ ತಪ್ಪು ಗ್ರಹಿಕೆಯಿಂದಲೇ ವರ್ತಿ ದ್ದರೆಂಬುದನ್ನು ನಾನು ಇನ್ನೊಂದು ಸಂಗ ಯಿಂದ ತೋರಿಸಿಕೊಟ್ಟೆ. ಫಿರ್ಯಾದಿ ಪಕ್ಷ ಮುಖ್ಯ ಸಾಕ್ಷಿಗಾರರಾದ ನಿವೃತ್ತ ಸಬ್-ರಿ ಸ್ಟ್ರಾರರೊಬ್ಬರು ಗಲಭೆಯ ಸದ್ದು ಕೇಳಿ ನಾನ ಸಮೀಪ ಹೋಗಿ ನಡೆಯುತ್ತಿದ್ದ ವಿದ್ಯಮಾನ ಳನ್ನು ನೋಡಿ "ಏನು ಸಬ್‌ಇನ್ಸ್‌ಪೆಕ್ಟರರಿ ಹೊಡೆಯುತ್ತಿರಾ, ಸೂ......ಮಕ್ಕಳೇ" ಎಂದ ಹೇಳಿದೊಡನೆ ಆರೋಪಿತರು ಹೊಡೆದಾ ಜಗ್ಗಾಟ ನಿಲ್ಲಿಸಿ ಓಡಿಹೋದರು ಎಂದ ಹೇಳಿದ್ದರು. ತಾವು ಹೊಡೆಯುತ್ತಿದ್ದು ಪೋಲೀಸರನ್ನು ಎಂದು ತಿಳಿದಕೂಡಲೇ ಆರೋ ಪಿತರು ಓಡಿಹೋದದ್ದರಿಂದ, ಅವರಿಗೆ ಅವ ಪೋಲೀಸರೆಂದು ಮೊದಲು ಗೊತ್ತಿರಲಿಲ್ಲವೆ ಬುದು ಸ್ಪಷ್ಟವಾಗುತ್ತದೆ ಎಂದು ನಾನು ಪ್ರತಿ ಪಾದಿಸಿದೆ. ಮ್ಯಾಜಿಸ್ಟ್ರೇಟರು ಆರೋಪಿತರನ ಖುಲಾಸೆಪಡಿಸಿದರು.

ಆ ಸಬ್-ಇನ್ಸ್‌ಪೆಕ್ಟರರು ಮಾತ್ರ "ಇದ ತಲೆಗೆಟ್ಟ ತೀರ್ಪು" ಅನ್ನುತ್ತಿದ್ದರು.

ಇಂಗ್ಲೀಷಿನಲ್ಲಿ "ಕಾಯದೆಯು ಕತ್ತೆ" (Law is an ass) ಎಂಬ ನಾಣ್ಣುಡಿ ಇದೆ. ಕಾಯ ದೆಯ ಗಾರ್ದಭತನವನ್ನು ೭೯ ನೇ ಕಲಮಿನ ತಹ ನಿಬಂಧನೆಗಳು ಕೆಲಮಟ್ಟಿಗಾದರೂ ನೀಗಿ ಸುತ್ತವೆ.

---

**ಕಾಯಿದೆಯು ಬಡವನನ್ನು ಹಿಂಡುವುದು ; ಧನಿಕ ಕಾಯಿದೆಯುನ್ನು ಆಳುತ್ತಾನೆ.**

— ಗೋಲ್ಡ್‌ಸ್ಮಿಥ್

**ತಿಬೇಟಿನ ಧರ್ಮಾಧ್ಯಕ್ಷ ಲಾಮಾರನ್ನು ಆರಿಸುವ ರೀತಿ ಆಶ್ಚರ್ಯಕರವಾಗಿದೆ.**

# ದಲಾಯಿ ಲಾಮಾ ಎಂದರಾರು ?

ಪುಣೆಯ ಭಾಂಡಾರಕರ ಅಧ್ಯಯನ ಮಂಡಳದಲ್ಲಿ ಈಚೆಗೊಂದು ಸಮಾರಂಭ ನಡೆಯಿತು. ಟಿಬೇಟಿನಿಂದ ಮಾನ್ಯ ಅತಿಥಿಗಳಿಬ್ಬರು ಆ ಮಂಡಳದ ಕಾರ್ಯಕಲಾಪವನ್ನು ವೀಕ್ಷಿಸಲು ಬಂದಿದ್ದರು. ಅವರಿಗೆ ಭಾರತೀಯ ಸಂಪ್ರದಾಯಕ್ಕೆ ಒಪ್ಪಿದ ಸ್ವಾಗತವನ್ನು ಕೊಡಲಾಯಿತು. ಕೊನೆಯಲ್ಲಿ ಮಾನ್ಯ ಅತಿಥಿಗಳ ಕೈಗೆ ಕೆಲವು ಪುಷ್ಪಗಳೊಂದಿಗೆ ಒಂದೊಂದು ತೆಂಗಿನ ಕಾಯಿಯನ್ನೂ ಗೌರವದಿಂದ ನೀಡಲಾಯಿತು.

ಅತಿಥಿಗಳಿರ್ವರೂ ಈ ದುಂಡಗಾದ ಕಾಯಿಯನ್ನು ಕಂಡು ಕುತೂಹಲಗೊಂಡರು; ಅದನ್ನು ತಿರುಗಿಸಿ ತಿರುಗಿಸಿ ನೋಡಿದರು; ಆದರೆ ಏನೆಂದು ಅವರಿಗೆ ತಿಳಿಯಲಿಲ್ಲ. ತಮ್ಮ ಸಂಗಾತಿಗಳೊಡನೆ ಮೂಕ ಸಂಭಾಷಣೆ ನಡೆಸಿ ಸಂಕೇತದಿಂದಲೇ ಇದೇನೆಂದು ವಿಚಾರಿಸಿದರು. ಅವರಿಗೂ ಈ ಕಾಯಿಯ ಗುರುತು ಹತ್ತಲಿಲ್ಲ. ಆಗ ಅನುವಾದಕರೇ ಸಹಾಯಕ್ಕೆ ಬಂದು ಭಾರತೀಯರ ಕಲ್ಪವೃಕ್ಷದ ಪ್ರಸಾದವೆಂದು ವಿವರಿಸಿ ಹೇಳಬೇಕಾಯಿತು.

ಆಶ್ಚರ್ಯಚಕಿತರಾದ ಅತಿಥಿದ್ವಯರು ಬೇರೆ ಯಾರೂ ಅಲ್ಲ—ಈಗ ಕೆಲವು ವಾರಗಳಿಂದ ಭಾರತದ ನಾನಾ ಮುಖ್ಯ ಪಟ್ಟಣಗಳಲ್ಲಿ ಸೌಹಾರ್ದ ಸಂಚಾರವನ್ನು ಕೈಕೊಂಡಿರುವ ದಲಾಯಿ ಲಾಮಾ ಮತ್ತು ಪಂಚೆನ್ ಲಾಮಾರೇ ಇವರು !

ಜಗತ್ತಿನ ಮಾಳಿಗೆ ಎಂದು ಕರೆಯಲ್ಪಡುವ ಟಿಬೇಟಿನಿಂದ ಈ ಮಹಾನುಭಾವರು ಭಾರತಕ್ಕೆ ಇಳಿದು ಬಂದರು— ಬುದ್ಧ ಭಗವಾನನ ೨೫೦೦ ನೇ ಪರಿನಿರ್ವಾಣ ಸಮಾರಂಭದಲ್ಲಿ ಭಾಗವಹಿಸುವ ಉತ್ಕಟೇಚ್ಛೆಯಿಂದಲೂ ಭಾರತದ ಪರಿಚಯ ಮಾಡಿಕೊಳ್ಳುವ ಹಂಬಲದಿಂದಲೂ ಕೈಗೊಂಡ ಪ್ರಯಾಸಕರವಾದ ಪ್ರವಾಸ ಅವರದು.

ಲ್ಹಾಸಾದಿಂದ ಹೊಸದಿಲ್ಲಿಗೆ ಬರುವ ಮಾರ್ಗವೇ ಅಷ್ಟು ತ್ರಾಸದಾಯಕವಾದದ್ದು; ಕಾಲ್ನಡೆಯಿಂದ ತೊಡಗಿ, ಹೇಸರುಕತ್ತೆಗಳನ್ನೇರಿ, ಪಲ್ಲಕ್ಕಿಯಲ್ಲಿ ಕುಳಿತು, ವಿಮಾನದಲ್ಲಿ ಹಾರಿ, ಹೀಗೆ ನಾನಾ ಪ್ರಕಾರದ ಪ್ರವಾಸಾನುಭವಗಳಿಂದ ಸಮೃದ್ಧರಾಗಿ ಅವರು ಭಾರತ ಭೂಮಿಗೆ ಆಗಮಿಸಿದರು. ಟಿಬೇಟಿನ ಜನರ ಕಣ್ಮಣಿಗಳಂತಿರುವ ಈ ಲಾಮಾರ ಗುರುಪರಂಪರೆಯಲ್ಲಿ ಯಾರೂ ಭಾರತಕ್ಕೆ ಬಂದ ದಾಖಲೆ ಇಲ್ಲ.

ದಲಾಯಿ ಲಾಮಾ ಎಂದರೆ ಟಿಬೇಟಿನ ಶಿರಸ್ಸು; ಆತನೇ ಶ್ರೇಷ್ಠನಾದ ಧರ್ಮಗುರು; ಮತ್ತು ರಾಜ. ಪಂಚೆನ್ ಲಾಮಾನೆಂದರೆ ಧಾರ್ಮಿಕ ಕ್ಷೇತ್ರದಲ್ಲಿ ದಲಾಯಿ ಲಾಮಾರ ಬಳಿಕದ ಸ್ಥಾನದಲ್ಲಿ ನಿಲ್ಲುವ ಧರ್ಮಗುರು ; ಆತನಿಗೆ ರಾಜಕೀಯ ಕ್ಷೇತ್ರದಲ್ಲಿ ಅಧಿಕಾರವಿಲ್ಲ.

ಟಿಬೇಟಿನಲ್ಲಿ ಲಾಮಾರ ಆಡಳಿತಕ್ಕೆ ಪ್ರಾರಂಭವಾದದ್ದು ೧೩ನೇ ಶತಮಾನದಲ್ಲಿ; ಮಂಗೋಲಿಯದ ಅರಸನಾದ ಕುಬ್ಲಾಯಿಖಾನನು ಲಾಮಾರನ್ನು ತನ್ನ ಆಸ್ಥಾನಕ್ಕೆ ಬರಮಾಡಿಕೊಂಡು ಬೌದ್ಧ ಧರ್ಮವನ್ನು ಸ್ವೀಕರಿಸಿದನು; ಮತ್ತು ಇದಕ್ಕೆ ಪ್ರತಿಕಾಣಿಕೆಯಾಗಿ ಟಿಬೇಟಿನ ಮೇಲೆ

ಉಡುಪಿಯ ' ನವಯುಗ ' ದಿಂದ

ಸಾರ್ವಭೌಮಾಧಿಕಾರವನ್ನು ಲಾಮಾರಿಗಿತ್ತನು.

ಟಿಬೇಟನ್ನು ಆಳಿದ ದಲಾಯಿ ಲಾಮಾರಲ್ಲಿ ಈಗಿನವರು ಹದಿನಾಲ್ಕನೆಯವರಾಗಿದ್ದಾರೆ. ದಲಾಯಿ ಲಾಮಾರ ಆಯ್ಕೆಯು ಪುನರವತಾರದ ತತ್ವದಲ್ಲಿ ವಿಶ್ವಾಸವಿಟ್ಟು ನಡೆಯುತ್ತದೆ. ಈಗಿನ ದಲಾಯಿಲಾಮಾರನ್ನು ಪಟ್ಟಕ್ಕೇರಿಸಿದ ಕತೆಯು ತುಂಬ ವಿಸ್ಮಯಕರವಾಗಿದೆ; ಮತ್ತು ಸಾಮಾನ್ಯವಾಗಿ ಪ್ರತಿಯೊಬ್ಬ ದಲಾಯಿ ಲಾಮಾನ ಆಯ್ಕೆಯ ಹಿಂದೆ ಇಷ್ಟೇ ಸೋಜಿಗದ ಘಟನೆಗಳಿರುವವು.

ಹದಿಮೂರನೇ ತಲೆಯ ಮಹಾಗುರು ದಲಾಯಿ ಲಾಮಾರು ತಮ್ಮ ೫೭ನೇ ವಯಸ್ಸಿನಲ್ಲಿ ೧೯೩೩ ರಲ್ಲಿ ನಿರ್ವಾಣವನ್ನು ಹೊಂದಿದರು. ಅವರೇ ಪುನರವತಾರ ಹೊಂದುವರೆಂದೂ ಆತನೇ ಮುಂದಿನ ದಲಾಯಿ ಲಾಮಾನಾಗುವನೆಂದೂ ಜನರಲ್ಲಿ ನಡೆದುಬಂದಿರುವ ವಿಶ್ವಾಸ; ಆದರೆ ಎಲ್ಲಿ ಪುನರವತಾರವಾಗುತ್ತದೆ, ಯಾವ ಮಗುವೇ ಈ ಪುನರವತಾರ ಎಂದು ತಿಳಿದವರಿರಲಿಲ್ಲ.

ಆದಾಗ್ಯೂ ಟಿಬೇಟಿನ ಜನರಿಗೆ ಇಂಥಲ್ಲೇ ಪುನರವತಾರ ನಡೆದಿದೆ ಎಂಬ ಬಗ್ಗೆ ಸಂಕೇತಗಳು ಸಿಕ್ಕುತ್ತವಂತೆ: ಉದಾಹರಣೆಗೆ ೧೩ ನೇ ದಲಾಯಿ ಲಾಮಾರ ಮೃತಶರೀರದ ಅಂತ್ಯಸಂಸ್ಕಾರ ಮಾಡುವಾಗ ಶವದ ತಲೆಯನ್ನು ದಕ್ಷಿಣಾಭಿಮುಖವಾಗಿಟ್ಟಿದ್ದರು; ಆದರೆ ಶವ ಪೆಟ್ಟಿಗೆಯನ್ನು ತೆರೆದಾಗ ತಲೆಯು ಈಶಾನ್ಯ ದಿಕ್ಕಿಗೆ ತಿರುಗಿದ್ದಿತು! ಅದಲ್ಲದೆ ಮಳೆ ಕೊಡುವ ಮೋಡಗಳು ಹಿಂಡುಹಿಂಡಾಗಿ ಈಶಾನ್ಯ ದಿಕ್ಕಿಗೆನೇ ಚಲಿಸುತ್ತಿದ್ದವು— ಇವೆಲ್ಲವುಗಳಿಂದ ಈಶಾನ್ಯ ಟಿಬೇಟಿನಲ್ಲಿ ಈ ಪುನರವತಾರ ನಡೆದಿದೆ ಎಂಬ ನಂಬಿಕೆ ಜನರಿಗೆ ಉಂಟಾಯಿತು.

ಮುಂದೆ ಹುಡುಕಾಟಕ್ಕೆ ಪ್ರಾರಂಭವಾಯಿತು. ಮುಖ್ಯ ಪಾತ್ರಿಯೊಬ್ಬನಿಗೆ ಮುಂದಿನ ದಲಾಯಿ ಲಾಮಾ ಎಲ್ಲಿರುವನೆಂದು ಭವಿಷ್ಯ ಹೇಳಲು ವಿನಂತಿಸಲಾಯಿತು. ಆತನು ಹೇಳಿದ ಮಾತುಗಳ ಆಧಾರದ ಮೇಲೆಯೇ ಸಂಶೋಧನೆ ನಡೆಯುವುದು ಕ್ರಮ. ದಲಾಯಿ ಲಾಮಾನಾಗುವ ಮಗುವಿನಲ್ಲಿ ಪುನರವತಾರಿಯ ಅನೇಕ ಗುರುತುಗಳಿರಬೇಕೆಂದೂ ನಿಯಮವುಂಟು: ಉದಾಹರಣೆಗೆ ಕಾಲಿನಲ್ಲಿ ಹುಲಿ ಚರ್ಮದ ಸಂಕೇತ, ದೀರ್ಘ ವಾಗಿಯೂ ಕೊನೆಗಳಲ್ಲಿ ಮೇಲೆ ಬಗ್ಗಿದವೂ ಆ ಕಣ್ಣುಗಳು, ಅಂಗೈಯಲ್ಲಿ ಶಂಖದ ಚಿನ್ಹ ಇತ ದಿಗಳಿರುವುದು ಲಾಮಾ ಪಟ್ಟಕ್ಕೆ ಅರ್ಹತೆಯನ್ನು ಸೂಚಿಸುವ ಗುರುತು.

ಮಗುವು ನಿಜವಾಗಿ ಮಾಜಿ ದಲಾಯಿ ಲಾಮಾನ ಪುನರವತಾರವಾಗಿದ್ದಲ್ಲಿ ಆತನು ಉ ಯೋಗಿಸುತ್ತಿದ್ದ ವಸ್ತುಗಳನ್ನು ಕೂಡಲೇ ಗುರು ತಿಸುವುದೆಂದೂ ಒಂದು ನಂಬಿಕೆ. ಆದುದರಿಂ ಪುನರವತಾರಿ ಮಗುವಾಗಿರಬೇಕೆಂಬ ಸಂಶಯ ಬಂದ ಮಗುವಿನ ಮುಂದೆ ಇತರ ಸಾಮಾನು ಳೊಂದಿಗೆ ಮಾಜಿ ಲಾಮಾನ ಸಾಮಾನುಗಳನ್ನೂ ಇಡುತ್ತಾರೆ. ಮಗುವು ಮಾಜಿ ಲಾಮಾನ ಸಾಮಾನುಗಳ ಮೇಲೆಯೇ ಮೊದಲು ಕೈ ಹಾಕಿ ಅದನ್ನು ಉಪಯೋಗಿಸಲು ನೋಡಿದರೆ ಸಂಶೋಧನೆಯು ಸಾರ್ಥಕವಾಯಿತೆಂದು ಭಾವಿಸಲ್ಪಡುತ್ತದೆ.

ಇಂಥ ಪರೀಕ್ಷೆಗಳಲ್ಲಿ ಗೆದ್ದು ಬಂದ ಮಗುವೆ ಈಗಿನ ದಲಾಯಿ ಲಾಮ. ಇವರು ಕೊಕೊನೋ ಪ್ರಾಂತದ ಹಳ್ಳಿಯೊಂದರಲ್ಲಿ ೧೯೩೭ನೇ ಇ ವಿಯ ಅಕ್ಟೋಬರದಲ್ಲಿ ಸಂಶೋಧಕರಿಗೆ ದೊ ತರು. ಆಗ್ಗೆ ಎರಡು ವರ್ಷದ ಮಗುವಾದ ಇವರು ಸಂಶೋಧಕರನ್ನು ಕಂಡೊಡನೆಯೇ "ಲಾಮಾ ಲಾಮಾ" ಎಂದು ಕರೆದರಂತೆ! ಇವರನ್ನು ಪಟ್ಟಕ್ಕೇರಿಸಲು ಟಿಬೇಟಿನ ಜನರು ಉತ್ಸುಕರಾಗಿದ್ದರು. ಆದರೆ ಚೀನದ ಕೊಮಿಂಟಾಂಗ ಗವರ್ನ ರನು ಏನೇನೊ ಶರ್ತು ಹಾಕಿದನು. ಟಿಬೇಟಿ ನ್ನರು ಎಲ್ಲ ಶರ್ತವನ್ನೂ ಪೂರೈಸಿ ೧೯೪೦ ರಲ್ಲಿ ದಲಾಯಿ ಲಾಮಾನೆಂದು ಈ ಮಗುವನ್ನು ಸಾರಿದರು.

ದಲಾಯಿ ಲಾಮಾ ಸ್ಥಾನಕ್ಕೇರಿದ ಮಗುವು ಲ್ಹಾಸಾದಲ್ಲಿ ಅನೇಕ ಬಗೆಯ ಧಾರ್ಮಿಕ ತರ ಬೇತಿಗಳನ್ನು ಹೊಂದಬೇಕಾಗುತ್ತದೆ. ಸಂಪೂರ್ಣ ಬ್ರಹ್ಮಚರ್ಯ ಜೀವನವನ್ನು ಪಾಲಿಸಬೇಕಾಗುತ್ತದೆ. ತಂದೆತಾಯಿಗಳನ್ನೂ ಸಹೋದರ ಸಹೋದರಿಯರನ್ನೂ ಲ್ಹಾಸಾಕ್ಕೆನೇ ತರಿಸಿಕೊಂಡು ದಲಾಯಿ ಲಾಮಾನ ಬಂಧುಗಳೆಂಬ ಗೌರವದಿಂ ಅತ್ಯಚ್ಚ ಯೋಗ್ಯತೆಯ ಜೀವನವನ್ನು ನಿರ್ವಹಿ

ಸಲು ಈ ಪರಿವಾರಕ್ಕೆ ಅವಕಾಶ ಕೊಡಲಾಗುತ್ತದೆ. ದಲಾಯಿ ಲಾಮಾನ ತಂದೆಗೆ ಟಿಬೇಟಿನ ಜನಸಾಧಾರಣರಿಗೆ ಕೊಡಬಹುದಾದ ಅತ್ಯುನ್ನತ ಸ್ಥಾನಮಾನವು ಅವನ ತಂದೆ ಎಂಬ ಒಂದೇ ಕಾರಣದಿಂದ ಸಿಗುತ್ತದೆ.

ಇನ್ನೂ ಬಾಲ್ಯದಲ್ಲಿರುವ ದಲಾಯಿ ಲಾಮಾನು ತನ್ನ ಸಹೋದರರೊಡನೆ ಬೆರೆಯಬಲ್ಲನು ; ಆದರೆ ಹೆಂಗಸರ ಸಂಸರ್ಗದಿಂದ ಮಾತ್ರ ದೂರವಿದ್ದೇ ತೀರಬೇಕು; ತನ್ನ ಸಹೋದರಿಯರನ್ನೂ ಮಠಕ್ಕೆ ಬರಮಾಡಿಕೊಳ್ಳಲಾರನು. ಮದ್ಯಪಾನಾದಿಗಳು ಆತನಿಗೆ ವರ್ಜ್ಯ. ಏಕಾಂತವಾಸವೇ ಆತನ ವ್ರತ. ಧ್ಯಾನ, ತಪಸ್ಸು, ಇತ್ಯಾದಿಗಳಲ್ಲೇ ಆತನ ಬಾಲ್ಯ ಸಂದುಹೋಗುತ್ತದೆ. ಆತನು ಪ್ರಾಯಪ್ರಬುದ್ಧನಾಗುವವರೆಗೆ ರೀಜಂಟನೊಬ್ಬನ ಆಡಳಿತವು ನಡೆಯುತ್ತದೆ.

ದಲಾಯಿ ಲಾಮಾರಂತೆ ಪಂಚೆನ್ ಲಾಮಾರನ್ನು ಸಹ ಪುನರವತಾರದ ಸೂತ್ರದಿಂದಲೇ ಆರಿಸಲಾಗುತ್ತದೆ. ಇವರು ಲ್ಹಾಸಾದಿಂದ ೨೦೦ ಮೈಲು ದೂರದಲ್ಲಿರುವ ಟಾಶಿ ಲುಂಪೋದಲ್ಲಿ ಕಟ್ಟಿದ ಮಠದಲ್ಲಿ ವಾಸಿಸುತ್ತಾರೆ. ಟಿಬೇಟು ಬೌದ್ಧ ಭಿಕ್ಷುಗಳಾದ ಲಾಮಾಗಳ ಬೀಡು ; ಮತ್ತು ಬೌದ್ಧ ಮತದ ಮೇಲಿನ ಶ್ರದ್ಧಾಳುಗಳ ಬೀಡು. ಆದುದರಿಂದ ಬುದ್ಧ ಭಗವಾನನ ಮುಖ್ಯ ಕಾರ್ಯ-ಕ್ಷೇತ್ರವಾಗಿದ್ದ ಭಾರತಕ್ಕೆ, ಬುದ್ಧನ ೨೫೦೦ನೇ ಪರಿನಿರ್ವಾಣ ಸಮಾರಂಭದಲ್ಲಿ ಭಾಗವಹಿಸಿ ಧನ್ಯರಾಗಲೆಂದು ಯಾತ್ರಾರ್ಥಿಗಳಾಗಿ ಲಾಮಾ ಬಂದುದು ವಿಶೇಷವಲ್ಲ. ಹಿಂದಿನ ಲಾಮಾರಿಗೆ ದೊರೆಯದ ಭಾಗ್ಯ ಇವರದಾಗಿದೆ.

**ಅರಸರ ದಬ್ಬಾಳಿಕೆಗೆ ಬೇಸತ್ತು ಪ್ರಜಾರಾಜ್ಯದ ವಿಚಾರ ತಲೆಯೆತ್ತಿತು; ಆದರೆ ಅದು ಎಲ್ಲ ಕಡೆ ಯಶಸ್ವಿಯಾಗಲಿಲ್ಲ.**

# ಪ್ರಜಾರಾಜ್ಯಗಳ ಇತಿವೃತ್ತ

**ಗಂಗಾಧರ ಹೆಗ**

೧೯೫೧ ಜನೇವರಿ ೨೬ ನೇ ದಿನ ಭಾರತವು ಪ್ರಜಾರಾಜ್ಯವಾಯಿತು. ಜಗತ್ತಿನ ಅತಿ ದೊಡ್ಡ, ಪ್ರಜಾಸತ್ತಾತ್ಮಕ ಪ್ರಜಾ-ರಾಜ್ಯ ನಮ್ಮದು. ಚೀನ ನಮಗಿಂತ ದೊಡ್ಡ ಪ್ರಜಾರಾಜ್ಯ. ಅದು ನಮಗಿಂತ ೪೦ ವರ್ಷ ಮೊದಲೇ ಅರಸೊತ್ತಿಗೆಯನ್ನು ಕಿತ್ತೊಗೆದು ಪ್ರಜಾರಾಜ್ಯವಾಯಿತು. ಆದರೆ ಅದು ಪ್ರಜಾಸತ್ತಾತ್ಮಕವೆನ್ನಲು ಬಾರದು. ಅಲ್ಲಿ ಇನ್ನೂ ಅನಿರ್ಬಂಧ ಚುನಾವಣೆಗಳಿಲ್ಲ.

ಭಾರತದ ಅನಂತರ ಅತಿ ದೊಡ್ಡ ಪ್ರಜಾರಾಜ್ಯವೆಂದರೆ ರಶಿಯವೇ. ಅದು ಇಂದಿಗೆ ೪೦ ವರ್ಷ ಹಿಂದೆ ವಿಶ್ವವಿದ್ರಾವಣ ಕ್ರಾಂತಿಯೊಂದರ ಮೂಲಕ, ಶತಮಾನಗಳ ಪೀಡಕ ರಾಜಸತ್ತೆಯನ್ನು ಕಿತ್ತೊಗೆದು ಪ್ರಜಾರಾಜ್ಯವಾಯಿತು. ಆದರೆ ಅದೂ ಸರ್ವಾಧಿಕಾರ ಸತ್ತೆಯೇ.

ಪ್ರಜಾರಾಜ್ಯಗಳ ಮಾಲಿಕೆಯಲ್ಲಿ ಅತಿ ಪ್ರಬಲ ಮತ್ತು ರಶಿಯದ ನಂತರ ಅತಿದೊಡ್ಡದೆಂದರೆ ಅಮೇರಿಕದ ಸಂಯುಕ್ತಸಂಸ್ಥಾನಗಳು. ೧೮೦ ವರ್ಷಗಳ ಹಿಂದೆ ಬ್ರಿಟಿಶ ಪ್ರಭುತ್ವದ ವಿರುದ್ಧ ಸಶಸ್ತ್ರ ಯುದ್ಧಮಾಡಿ ಅದು ಪ್ರಜಾರಾಜ್ಯವಾಯಿತು.

ಪ್ರಜಾರಾಜ್ಯಗಳಲ್ಲಿ ಅತಿ ನೂತನವಾದುದೆಂದರೆ ಪಾಕಿಸ್ತಾನ. ೧೯೫೬ ಮಾರ್ಚಿನಲ್ಲಿ ಪಾಕಿಸ್ತಾನ ಪ್ರಜಾರಾಜ್ಯವಾಗುವ ನಾಲ್ಕೇ ತಿಂಗಳ ಮೊದಲ ಸುದಾನ ಸ್ವತಂತ್ರ ಪ್ರಜಾರಾಜ್ಯವಾಯಿತು.

ಮೊದಲನೇ ಮಹಾಯುದ್ಧದ ನಂತರ ಜಗತ್ತಿನಲ್ಲಿ ಅರಸೊತ್ತಿಗೆಗಳು ಭರದಿಂದ ನಿರ್ನಾಮವಾಗತೊಡಗಿ ಪ್ರಜಾರಾಜ್ಯಗಳು ಉದಿಸಿದವು ಆದರೆ ಅರಸನಿಲ್ಲದ ಪ್ರಭುತ್ವ ಸ್ಥಾಪಿಸಿ ಪ್ರಜೆಗಳೇ ತಮಗೊಪ್ಪಿದವರನ್ನು ಆಗಾಗ್ಗೆ ಆರಿಸಿಕೊಂಡು ತಾವೇ ತಮ್ಮನ್ನು ಆಳಿಕೊಳ್ಳಬೇಕೆಂಬ ಕಲ್ಪನೆಯಾಗಲಿ ಆ ಕಲ್ಪನೆಯನ್ನು ಕೃತಿಗಿಳಿಸು ದಾಗಲಿ ಹೊಸತಲ್ಲ. ಕನಿಷ್ಠ ೩,೦೦೦ ವರುಷಗಳಷ್ಟು ಹಳೆಯ ಮಾತಿದು.

ಭಾರತದ ಪರಂಪರೆಯಲ್ಲಿ ರಾಜಸತ್ತೆಯ ಕಲ್ಪನೆಯೇ ಎಲ್ಲೆಲ್ಲಿಯೂ ಎದ್ದು ಕಾಣುತ್ತಿದ್ದರು ಇಲ್ಲಿ ಕೂಡ ಪ್ರಜಾರಾಜ್ಯಗಳು ಗಣ, ಗಣರಾಜ ಗಳೆಂಬ ಹೆಸರಲ್ಲಿ ೨,೫೦೦ ವರ್ಷಗಳಷ್ಟು ಹಿಂ ಇದ್ದವು. ಅಷ್ಟೇಕೆ, ಪ್ರಸಿದ್ಧ ವೈದಿಕ ಮಂತ್ರವಾದ "ಸಾಮ್ರಾಜ್ಯಂ, ಭೋಜ್ಯಂ, ವೈರಾಜ್ಯಂ ಎಂಬುದರಲ್ಲಿ ಹೇಳಿದ ವೈರಾಜ್ಯವು ಅರಸನಿಲ್ಲದ ಪ್ರಜೆಗಳೇ ನಡೆಸುತ್ತಿದ್ದ ರಾಜ್ಯವಾಗಿತ್ತೆಂದ ಬಲ್ಲವರು ಹೇಳಿದ್ದಾರೆ. ಬುದ್ಧನ ಕಾಲದ ಈಗಿನ ಬಿಹಾರದಲ್ಲಿ ಅನೇಕ ಗಣರಾಜ್ಯಗಳಿದ್ದವು ಲಿಚ್ಛವಿ, ವಂಧ್ಯ, ಮಾಳವ, ಶೂದ್ರಕ ಮೊ ಲಾದವು ಸಿಕಂದರನು ಭಾರತದ ಮೇಲೆ ಏ ಬಂದಾಗ ಗಣರಾಜ್ಯಗಳಾಗಿದ್ದವು.

ಇತಿಹಾಸದಲ್ಲಿ ಕೇಳಬರುವ ಅತಿಪುರಾತ

ಪ್ರಜಾರಾಜ್ಯವೆಂದರೆ ಬಹುಶಃ ಮೋಸೆಸ್ ಮತ್ತು ಜೋಶುವಾ ಇವರು ಕಟ್ಟಿದ ಇಸ್ರೇಲದ ಪ್ರಜಾರಾಜ್ಯ. ಅಂದಿನ ಪ್ರಜಾರಾಜ್ಯದ ವೈಭವವನ್ನು ಪುನರುಜ್ಜೀವನಗೊಳಿಸುವ ಹಂಬಲವೇ ಇಂದಿನ ಇಸ್ರೇಲ ಪ್ರಜಾರಾಜ್ಯದ ಸ್ಥಾಪನೆಗೆ ಯಹೂದ್ಯರನ್ನು ಪ್ರಚೋದಿಸಿತು.

ತನ್ನಲ್ಲಿಯ ನಾಗರಿಕರಲ್ಲಿ ಬಹುಸಂಖ್ಯಾಕರಿಗೆ ಮತಾಧಿಕಾರವನ್ನು ಕೊಟ್ಟಾಗಲೇ ಒಂದು ರಾಷ್ಟ್ರವು ನಿಜ ಪ್ರಜಾಪ್ರಭುತ್ವದ ಗುರಿಗೆ ಸಮೀಪವಾಗುವದು. ಈ ಬಗೆಯ ಪ್ರಜಾಪ್ರಭುತ್ವ ಸರಕಾರ ರಚನೆಗೆ ಪ್ರಾಚೀನ ಗ್ರೀಸಿನಲ್ಲಿ ಹೆಚ್ಚಿನ ಬೆಂಬಲ ದೊರೆಯಿತು. ಗ್ರೀಸಿನ ಚಿಕ್ಕ ಚಿಕ್ಕ ಪಟ್ಟಣ ರಾಜ್ಯಗಳು ತಮ್ಮ ಚಿಕ್ಕ ಪುಟ್ಟ ಅರಸರು ಮತ್ತು ಸರದಾರರ ಸರ್ವಾಧಿಕಾರ ಮತ್ತು ಅತ್ಯಾಚಾರಗಳಿಗೆ ಬೇಸತ್ತು ಕ್ರಿ.ಶ.ಪೂ. ೮ ಮತ್ತು ೭ ನೇ ಶತಮಾನಗಳಲ್ಲಿ ಪ್ರಜಾರಾಜ್ಯಗಳನ್ನು ಸ್ಥಾಪಿಸಿಕೊಂಡವು. ಕ್ರಿ. ಶ. ಪೂ. ೭ ನೇ ಶತಮಾನದಲ್ಲಿ ಗ್ರೀಕ್ ಪ್ರಜಾರಾಜ್ಯ ಸ್ಥಾಪಿತವಾಗಿ ೫೫೦ ವರ್ಷಗಳ ಕಾಲ ನಡೆದುಕೊಂಡು ಬಂದಿತು. ಆದರೆ ಈ ದೀರ್ಘ ಅವಧಿಯಲ್ಲೂ ಅದು ತನ್ನ ಒಳ ಪ್ರದೇಶಗಳಲ್ಲಿ ರಾಷ್ಟ್ರೀಯ ಐಕ್ಯವನ್ನುಂಟುಮಾಡಲು ಅಸಮರ್ಥವಾಯಿತು.

ಆಂತರಿಕ ಜಗಳ ಹಾಗೂ ಆಡಳಿತಗಾರರ ವಿಲಾಸವೈಭವಗಳ ಮೂಲಕ ಗ್ರೀಕರ ಪ್ರಜಾರಾಜ್ಯವು ಕ್ರಿ.ಶ.ಪೂ. ೧೪೬ ರಲ್ಲಿ ನಷ್ಟವಾಯಿತು. ರೋಮನ್ನರು, ಬ್ಯಾಝಂಟ್ಯಾನರು ಮತ್ತು ತುರ್ಕರು ಗ್ರೀಕ ಪ್ರಜಾರಾಜ್ಯವನ್ನು ಒಬ್ಬರಾದ ಮೇಲೊಬ್ಬರು ಗೆದ್ದು ಮುಂದೆ ಹಲ ಶತಮಾನಗಳ ವರೆಗೆ ಅದರ ಮೇಲೆ ಪ್ರಭುತ್ವ ನಡೆಸಿದರು.

ಒಮ್ಮೆ ಜಗತ್ತಿನಲ್ಲೇ ಪ್ರಬಲವಾಗಿದ್ದ ಈ ರಾಷ್ಟ್ರಕ್ಕೆ ಪುನಃ ಸ್ವತಂತ್ರ ರಾಷ್ಟ್ರವಾಗಲು ೧೯೭೬ ವರ್ಷಗಳು ಹಿಡಿದವು. ಕ್ರಿ. ಶ. ೧೮೩೦ರಲ್ಲಿ ಬವೇರಿಯದ ರಾಜಕುಮಾರ ಮೊದಲನೆಯ ಓಟೊ ಗ್ರೀಸದ ಘಟನಾತ್ಮಕ ಅರಸನಾದನು. ಹೀಗೆ ಪ್ರಜಾರಾಜ್ಯದ ಅಧ್ವರ್ಯುದೇಶವೇ ಅರಸೊತ್ತಿಗೆಯದಾಯಿತು.

ಗ್ರೀಕ್ ಪ್ರಜಾಪ್ರಭುತ್ವ ಸ್ಥಾಪನೆಯಾದ ೨೦೦ ವರ್ಷಗಳ ನಂತರ ಕಾರ್ಥೇಜ ಪ್ರಜಾರಾಜ್ಯದ ಉದಯವಾಯಿತು. (ಸುಮಾರು ಕ್ರಿ. ಶ. ಪೂ. ೫೦೦). ಅಲ್ಲಿ ಜನರಿಂದ ಆಯ್ಕೆ ಹೊಂದಿದ ನಾಯಕರು ಆಳುತ್ತಿದ್ದರು. ಕಾರ್ಥೇಜನ್ನು ಗ್ರೀಕರು ಕ್ರಿ.ಶ.ಪೂ. ೧೪೬ ರಲ್ಲಿ ಸ್ವಾಧೀನಪಡಿಸಿಕೊಂಡರು. ಗ್ರೀಕರ ಬಲದೆದುರು ಕಾರ್ಥೇಜಿಯನ್ನರ ಆಟ ನಡೆಯದೆ ಅವರು ಸೋತರು.

ಜಗತ್ತಿನ ಪ್ರಜಾರಾಜ್ಯಗಳಲ್ಲಿ ರೋಮ ಪ್ರಜಾರಾಜ್ಯವು ತುಂಬ ಪ್ರಾಚೀನವಾಗಿದ್ದರೂ ಅದೊಂದು ಮಾದರಿ ಪ್ರಜಾರಾಜ್ಯವಾಗಿ ರೂಪುಗೊಂಡಿತು. ರೋಮ ಪ್ರಜಾರಾಜ್ಯವು ಕ್ರಿ. ಶ. ಪೂ. ೫೦೯ ರಲ್ಲಿ ಅಸ್ತಿತ್ವಕ್ಕೆ ಬಂದಿತು.

ಪ್ರಾರಂಭದಲ್ಲಿ ರೋಮದಲ್ಲಿ ಪ್ರಜಾರಾಜ್ಯವಿದ್ದರೂ ನಿಜವಾದ ಪ್ರಜಾಪ್ರಭುತ್ವವಿರಲಿಲ್ಲ. ಶ್ರೀಮಂತ ವರ್ಗದವರಿಗೆ ಮಾತ್ರ ಮತಾಧಿಕಾರವಿದ್ದು ಅವರ ಪ್ರತಿನಿಧಿಗಳ ಮೂಲಕವೆ ಆಡಳಿತ ಸಾಗುತ್ತಿತ್ತು. ಸಾಮಾನ್ಯರು ಆಡಳಿತದಲ್ಲಿ ಪಾಲು ಬೇಕೆಂದೆನ್ನುತ್ತಿದ್ದರು. ಈ ಆಡಳಿತ ಪದ್ಧತಿಯಲ್ಲಿ ವರ್ಗಕಲಹದ ಬೀಜವಿದೆ.

ಕ್ರಿ. ಶ. ೮೧ ರ ಸುಮಾರಿಗೆ ಪ್ರಜಾರಾಜ್ಯದ ಮುಖ್ಯ ಸ್ಥಳಗಳಿಗೆ ನಡೆದ ಚುನಾವಣೆಗಳಲ್ಲಿ ವ್ಯಕ್ತಿವ್ಯಕ್ತಿಗಳ ಸಂಘರ್ಷಣೆಯು ಪ್ರಜಾರಾಜ್ಯದ ಅಸ್ತಿತ್ವವನ್ನೆ ಹಾಳುಮಾಡಿತು. ಸರ್ವಾಧಿಕಾರಿಗಳು ಬಂದರು. ಪಾಂಪೆ, ಸಿಸಿರೊ ಮತ್ತು ಸೀಜರರು ರೋಮದಲ್ಲಿ ಅಧಿಕಾರವನ್ನು ಹಸ್ತಗತಮಾಡಿಕೊಂಡು ೫೦ ವರ್ಷಗಳ ಕಾರಭಾರ ನಡೆಸಿದರು. ಸೀಜರನ ನಂತರ ಒಕ್ಟೇವಿಯಸ್ ಅಗಸ್ಟಸನು ತಾನು ರೋಮದ ಚಕ್ರವರ್ತಿಯೆಂದು ಸಾರಿಕೊಂಡನು. ಇವನು ಸರ್ವಾಧಿಕಾರಿ ಚಕ್ರವರ್ತಿಯಾಗಿದ್ದನು.

ಪ್ರಾಚೀನ ಪ್ರಜಾರಾಜ್ಯಗಳಲ್ಲಿ, ಭಾರತದಲ್ಲಿರಲಿ ಯುರೋಪಿನಲ್ಲಿರಲಿ, ಕಾಣುವ ಮುಖ್ಯ ದೌರ್ಬಲ್ಯವೆಂದರೆ ಪ್ರಜಾರಾಜ್ಯದ ಅಧ್ವರ್ಯುಗಳಲ್ಲಿನ ಮತಭೇದಗಳಿಂದ ಅವುಗಳ ಅಳಿವಾದದ್ದು. ಪ್ರಬಲ ಏಕಸತ್ತಾಧಿಕಾರಿಗಳ ನೇತೃತ್ವದಲ್ಲಿ

ಬಂದ ವಿದೇಶಿ ದಾಳಿಗಳನ್ನಾಗಲಿ ಆಂತರಿಕ ವಿಪ್ಲವಗಳನ್ನಾಗಲಿ ಎದುರಿಸುವ ಸಾಮರ್ಥ್ಯವಿಲ್ಲದೆ ಅವು ಸೋಲುತ್ತಿದ್ದವು; ಅಥವಾ ರಾಜಸತ್ತೆಯಲ್ಲಿ ಮುಕ್ತಾಯಗೊಳ್ಳುತ್ತಿದ್ದವು. ಬಿಹಾರದ ಲಿಚ್ಛವಿಗಳು ಸ್ವೇಚ್ಛೆಯಿಂದ ಗುಪ್ತಸಾಮ್ರಾಜ್ಯದಲ್ಲಿ ಲೀನಹೊಂದಿದ್ದನ್ನು ನೋಡುತ್ತೇವೆ.

ಆಧುನಿಕ ಪ್ರಜಾಸತ್ತೆಗಳಲ್ಲಿ ಐಸ್‌ಲಂಡೇ ಅತಿ ಪ್ರಾಚೀನವೆನ್ನಬೇಕು. ಕ್ರಿ. ಶ. ೯೨೮ ಕ್ಕೂ ಮುಂಚಿತವಾಗಿ ನಾರ್ವೆ, ಡೆನ್ಮಾರ್ಕ ಮತ್ತು ಸ್ಕಾಟಲಂಡಗಳ ಅರಸರ ದೌರ್ಜನ್ಯಕ್ಕೆ ಬೇಸತ್ತು ಓಡಿ ಬಂದ ಜನರು ಆಶ್ರಯ ಪಡೆದಿದ್ದ ಐಸ್‌ಲಂಡದಲ್ಲಿ ಪ್ರಜಾರಾಜ್ಯ ಉದಯಿಸಿತು. ಜನರಿಂದ ಆಯ್ಕೆಯಾದ ವರಿಷ್ಠ ಮ್ಯಾಜಿಸ್ಟ್ರೇಟನು ಈ ನಡುಗಡ್ಡೆಯನ್ನು ಆಳುತ್ತಿದ್ದನು. ಇವನಿಗೆ ಜನರಿಂದ ಆಯ್ಕೆಹೊಂದಿದ ಪ್ರತಿನಿಧಿ ಮಂಡಳವೊಂದು ಸಹಾಯ ಮಾಡುತ್ತಿತ್ತು. ಈ ಪ್ರಜಾರಾಜ್ಯ ೪೦೦ ವರ್ಷಗಳ ಕಾಲ ಬಾಳಿತು.

ಕ್ರಿ. ಶ. ೧೨೬೩ ರಲ್ಲಿ ಆಂತರಿಕ ಜಗಳಗಳ ಮೂಲಕ ಐಸಲಂಡದ ಜನರು ನಾರ್ವೆಯ ಅರಸು ಹಾಕೋನನನ್ನು ಐಸಲಂಡವನ್ನಾಳಲು ಆಮಂತ್ರಿಸಿದರು. ಮುಂದೆ ೧೩೮೦ ರಲ್ಲಿ ಐಸಲಂಡವು ಡೆನ್ಮಾರ್ಕದ ಅಧೀನವಾಯಿತು. ೧೯ ನೆಯ ಶತಮಾನದಲ್ಲಿ ನೆಪೋಲಿಯನ್ನನ ಯುದ್ಧ ಪ್ರಸಂಗಗಳ ಸಮಯದಲ್ಲಿ ಬ್ರಿಟಿಶರು ಐಸಲಂಡವನ್ನಾಕ್ರಮಿಸಿಕೊಂಡರು. ಈಯುದ್ಧಗಳ ನಂತರ ಐಸಲಂಡವು ಪುನಃ ಡೆನ್ಮಾರ್ಕದ ಆಡಳಿತಕ್ಕೊಳಪಟ್ಟಿತು.

ಮಧ್ಯಯುಗದಲ್ಲಿ ಮಧ್ಯ ಮತ್ತು ಪಶ್ಚಿಮ ಯುರೋಪಗಳಲ್ಲಿ ನಾನಾ ಬಗೆಯ ಪ್ರಜಾರಾಜ್ಯಗಳಿದ್ದವು. ಲೊಂಬಾರ್ಡಿ, ವೆನಿಸ್, ಜನೇವಾ, ಫ್ಲೊರೆನ್ಸ, ಮಿಲಾನ ಮೊದಲಾದವು ಹೆಚ್ಚುಕಾಲ ಬಾಳಿದ ಪ್ರಜಾರಾಜ್ಯಗಳಾಗಿವೆ. ಇಟಲಿ, ಆಸ್ಟ್ರಿಯಾ ಮೊದಲಾದ ನೆರೆ ರಾಷ್ಟ್ರಗಳು ಒಂದೊಂದಾಗಿ ಅವನ್ನು ತಮ್ಮ ಸ್ವಾಧೀನಪಡಿಸಿಕೊಂಡವು. ಆದರೆ ವೆನಿಸವು ೮೦೦ ವರ್ಷಗಳ ವರೆಗೂ ಜನೇವಾವು ೧೧೯೬ ವರ್ಷಗಳ ವರೆಗೂ ಪ್ರಜಾರಾಜ್ಯಗಳಾಗಿಯೇ ಇದ್ದವು.

೧೭೯೨ ರಲ್ಲಿ ಫ್ರಾನ್ಸವು ಅರಸನನ್ನು ಕೊಲೆಮಾಡಿ ಕ್ರಾಂತಿಯಿಂದ ಪ್ರಜಾರಾಜ್ಯವಾಯಿತು. ಆದರೆ ಅದು ಹಿತಕಾರಿಯಾಗಲಿಲ್ಲ. ಪ್ರಜಾರಾಜ್ಯದ ೧೨ ವರ್ಷಗಳು ಅನಾಯಕತ್ವವೆನ್ನಿಸುವ ಮಟ್ಟಿಗೆ ಅನಾಚಾರಗಳಿಂದ ಕೂಡಿದ್ದವು. ಕ್ರಾಂತಿಹೂಡಿದ ನಾಯಕರೇ ಒಬ್ಬರನ್ನೊಬ್ಬರು ನಾಶಮಾಡಿದರು. ಈ ಸಂಧಿಸಾಧಿಸಿ ೧೮೦೪ ರಲ್ಲಿ ನೆಪೋಲಿಯನ್ನನು ತಾನು ಫ್ರಾನ್ಸದ ಚಕ್ರವರ್ತಿಯೆಂದು ಸಾರಿಕೊಂಡನು. ೧೮೪೮ರಲ್ಲಿ ಅರಸೊತ್ತಿಗೆಯನ್ನು ತೊಡೆದುಹಾಕಿ ಜನರು ಎರಡನೆಯ ಸಲ ಪ್ರಜಾರಾಜ್ಯವನ್ನು ಸ್ಥಾಪಿಸಿದರು. ಅವರು ಅಧ್ಯಕ್ಷನೆಂದು ಆರಿಸಿದ ಲುಯಿ ಬೋನಾಪಾರ್ಟನು ಮುಂದೆ ಜನಮತ ಬಲದಿಂದ ಚಕ್ರವರ್ತಿ ಮೂರನೆ ನೆಪೋಲಿಯನ್ ಎಂದು ಕಿರೀಟಧಾರಣೆ ಮಾಡಿದನು. ೧೮೭೦ರಲ್ಲಿ ಮೂರನೆಯ ಸಲ ಫ್ರಾನ್ಸದಲ್ಲಿ ಪ್ರಜಾರಾಜ್ಯ ಘೋಷಿಸಲ್ಪಟ್ಟಿತು.

೧೯೩೯ ರ ವರೆಗೂ ಪ್ರಜಾರಾಜ್ಯವಾಗಿದ್ದ ಫ್ರಾನ್ಸವನ್ನು ಎರಡನೇ ಮಹಾಯುದ್ಧದಲ್ಲಿ ನವಂಬರ ತಿಂಗಳಲ್ಲಿ ಜರ್ಮನ್ ಸೈನಿಕರು ಆಕ್ರಮಿಸಿದರು. ಆದರೆ ಜನರಲ್ ಡಿಗಾಲೆ ಮತ್ತು ಗಿರಾಡರು ದೇಶಭ್ರಷ್ಟರಾದರೂ ಫ್ರಾನ್ಸ ಪ್ರಜಾರಾಜ್ಯದ ಪತಾಕೆಯನ್ನೆತ್ತಿ ಹಿಡಿದರು. ಯುದ್ಧಮುಕ್ತಾಯದ ನಂತರ ೧೯೪೫ ರ ಎಪ್ರಿಲ್ ತಿಂಗಳಲ್ಲಿ ನಾಲ್ಕನೆಯ ಸಲ ಫ್ರಾನ್ಸ ಪ್ರಜಾರಾಜ್ಯವನ್ನು ಘೋಷಿಸಿತು. ಡಿಗಾಲೆ ಅದರ ಪ್ರಥಮ ಅಧ್ಯಕ್ಷರಾದರು. ಒಂದು ವರ್ಷದ ನಂತರದಲ್ಲಿ ಅವರ ಪತನವಾದ ಬಳಿಕ ಅಲ್ಲಿ ಅಧಿಕಾರಕ್ಕಾಗಿ ಗುಂಪುಗಳಲ್ಲಿ, ವ್ಯಕ್ತಿಗಳಲ್ಲಿ ಹೋರಾಟ ನಡೆದೇ ಇದೆ.

ಜಗತ್ತಿನಲ್ಲಿಯ ಪ್ರಾಚೀನ ಮತ್ತು ಗಟ್ಟಿಮುಟ್ಟಾದ ಪ್ರಜಾರಾಜ್ಯಗಳಲ್ಲೊಂದಾದ ಸ್ವಿಝರ್‌ಲ್ಲಂಡ ಪ್ರಜಾರಾಜ್ಯವು ೧೨೯೧ ರಷ್ಟು ಹೊತ್ತಿಗೇ ಅಸ್ತಿತ್ವದಲ್ಲಿದ್ದಿತು. ನಿಜವಾದ ಪ್ರಜಾಪ್ರಭುತ್ವ ತತ್ತ್ವಕ್ಕನುಗುಣವಾಗಿ ಕಾರ್ಯ ಮಾಡಿದ ಕೆಲವೇ ಪ್ರಜಾರಾಜ್ಯಗಳಲ್ಲಿ ಸ್ವಿಝರ್‌ಲಂಡವೂ ಒಂದು ಎಂದು ಗಣಿಸಲಾಗುತ್ತಿದೆ. ಇತರ ದೇಶಗಳ ಸಂವಿಧಾನ

ಗಳನ್ನು ತುಸುವೂ ಅನುಕರಿಸದೆ ಸ್ವಿಸ್ ಜನರು ತಮ್ಮದೇ ಸಂವಿಧಾನವನ್ನು ರಚಿಸಿಕೊಂಡಿದ್ದಾರೆ. ಇಲ್ಲಿ ಇನ್ನೂ ಸ್ತ್ರೀಯರಿಗೆ ಮತಾಧಿಕಾರವಿಲ್ಲ.

ಆಂಡೋರಾ ಪ್ರಜಾರಾಜ್ಯವು ಜಗತ್ತಿನಲ್ಲಿಯೆ ಪ್ರಸಿದ್ಧವಾಗಿದೆ ಇದರ ವಿಸ್ತಾರ ಕೇವಲ ೧೯೧ ಚೌರಸ ಮೈಲುಗಳು. ಜನಸಂಖ್ಯೆ ೫,೨೦೦. ೯ ನೆಯ ಶತಮಾನದಲ್ಲಿ ಚಾರ್ಲಸ್ ಮ್ಯಾಗ್ನೆ ಅಂಡೋರಾಕ್ಕೆ ಸ್ವಾತಂತ್ರ್ಯವಿತ್ತನು. ಫ್ರಾನ್ಸ ಮತ್ತು ಸ್ಪೇನಗಳು ಒಮ್ಮೆ ಇದರ ಮೇಲೆ ತಮ್ಮ ಪ್ರಭುತ್ವವಿದೆಯೆಂದು ವಾದಿಸಿದ್ದವು. ಆದರೆ ಜರ್ಮನಿಯು ೧೯೪೨ ರಲ್ಲಿ ಫ್ರಾನ್ಸನ್ನು ಆಕ್ರಮಿಸಿದರೂ ಇದರ ಗೊಡವೆಗೆ ಹೋಗಲಿಲ್ಲ.

ಇಟಲಿಯ ಸಾನ ಮಾರಿನೊ ೩೮ ಚೌರಸ ಮೈಲು ವಿಸ್ತಾರದ ಪ್ರದೇಶ. ಜನಸಂಖ್ಯೆ ೧೪,೦೦೦. ಇದು ಜಗತ್ತಿನಲ್ಲಿಯ ಅತಿ ಚಿಕ್ಕ ಮತ್ತು ಪ್ರಾಚೀನ ಪ್ರಜಾರಾಜ್ಯವೆಂದು ಹೇಳಲ್ಪಡುತ್ತಿದ್ದು ದ್ವಿತೀಯ ಜಾಗತಿಕ ಯುದ್ಧದಲ್ಲಿ ಮಿತ್ರರಾಷ್ಟ್ರಗಳ ವಿರುದ್ಧ ಹೋರಾಡಿತು.

ಅಮೇರಿಕೆಯ ಪ್ರಜಾರಾಜ್ಯ ೧೭೭೬ ರಲ್ಲಿ ಉದಯಿಸಿತು. ಅಮೇರಿಕೆಯ ಸಂಸ್ಥಾನಗಳು ಬಹಳ ಮಟ್ಟಿಗೆ ಸ್ವಾಯತ್ತತೆಯನ್ನು ಪಡೆದಿದ್ದು ಕೇಂದ್ರ ಸರಕಾರಕ್ಕೆ ಪರಿಮಿತ ಅಧಿಕಾರಗಳಿವೆ: ದಕ್ಷಿಣ ಅಮೇರಿಕೆಯಲ್ಲಿ ಸ್ಪೇನದ ಅಧೀನದಲ್ಲಿದ್ದ ಭಾಗಗಳು ಸ್ವತಂತ್ರವಾಗಿ ೧೯-೨೦ ನೇ ಶತಕಗಳಲ್ಲಿ ಅನೇಕ ಚಿಕ್ಕ ಚಿಕ್ಕ ಪ್ರಜಾರಾಜ್ಯಗಳಾದವು. ಈ ಎಲ್ಲ ಪ್ರಜಾರಾಜ್ಯಗಳಲ್ಲಿ ಮೇಲಿಂದಮೇಲೆ ಸಶಸ್ತ್ರ ಬಂಡಾಯ, ಕ್ರಾಂತಿಗಳಾಗುತ್ತಿರುವದು ಒಂದು ವೈಶಿಷ್ಟ್ಯವಾಗಿದೆ. ಅವು ಪ್ರಜಾರಾಜ್ಯಗಳಾಗಿದ್ದರೂ ಹೆಚ್ಚಾಗಿ ಸರ್ವಾಧಿಕಾರಿಗಳ ಕೈಲಿವೆ.

ಆಫ್ರಿಕೆಯ ಪಶ್ಚಿಮ ತೀರದಲ್ಲಿರುವ ಪ್ರಜಾರಾಜ್ಯ ಲೈಬೇರಿಯಾವು ಬಿಳಿಯರಿಗೆ ನಾಗರಿಕ ಹಕ್ಕನ್ನಾಗಲಿ ಆಸ್ತಿಯ ಹಕ್ಕನ್ನಾಗಲಿ ನಿರಾಕರಿಸುವ ಒಂದೇ ಒಂದು ಪ್ರಜಾರಾಜ್ಯವಾಗಿದೆ. ಇದು ೧೮೪೭ ರಲ್ಲಿ ಸ್ವತಂತ್ರವಾಯಿತು. ಅಮೇರಿಕೆಯ ಗುಲಾಮರಾಗಿದ್ದ ನಿಗ್ರೊ ಜನರ ಸಂತತಿಯವರಿಗೆ ಇದೇ ತಾಯ್ನಾಡಿನೋಪಾದಿಯಲ್ಲಿದೆ. ಇದರ ಸಂವಿಧಾನವು ಅಮೇರಿಕೆಯ ಸಂವಿಧಾನದ ಮಾದರಿಯಲ್ಲಿದೆ.

ಇತ್ತೀಚಿನ ತಲೆಮಾರುಗಳಲ್ಲಿ ಪ್ರಜಾರಾಜ್ಯಗಳಾದವುಗಳೆಂದರೆ ಝಕೊಸ್ಲೊವಾಕಿಯ, ಪೋಲಂಡ, ರಶಿಯ, ಚೀನ, ಹಂಗರಿ, ಆಸ್ಟ್ರಿಯ, ಪೂರ್ವಜರ್ಮನಿ, ಸಿರಿಯಾ, ತುರ್ಕಸ್ಥಾನ ಮತ್ತು ಯುಗೋಸ್ಲಾವಿಯ.

ಪ್ರಜಾರಾಜ್ಯ ಪರಂಪರೆ ಮುಸ್ಲಿಮರಿಗಿರುವದು ಕಡಿಮೆ. ಆದರೆ ಮೊದಲನೇ ಮಹಾಯುದ್ಧದ ನಂತರ ತುರ್ಕಸ್ತಾನವು ಶತಮಾನಗಳ ಸುಲ್ತಾನ ಸತ್ತೆಯನ್ನು ನಷ್ಟಗೊಳಿಸಿ ಕಮಾಲ ಪಾಶರ ನೇತೃತ್ವದಲ್ಲಿ ಪ್ರಜಾರಾಜ್ಯವಾಯಿತು. ಅರಬ ರಾಷ್ಟ್ರಗಳಲ್ಲಿ ಸಿರಿಯಾ, ಲೆಬನಾನ್‌ಗಳು ಮಾತ್ರ ಪ್ರಜಾರಾಜ್ಯಗಳಾಗಿದ್ದವು. ಆದರೆ ಅರಸ ಫರೂಕರನ್ನು ಕಿತ್ತೊಗೆದು ಇಜಿಪ್ತ ಈಗ ಪ್ರಜಾರಾಜ್ಯವಾಗಿದೆ. ಬ್ರಹ್ಮದೇಶ, ಇಂಡೊನೇಶಿಯ ಇವು ಈಚೆಗಿನ ಏಶಿಯನ್ ಪ್ರಜಾರಾಜ್ಯಗಳು.

---

ನವಾಬ ಸಾಹೇಬರ ಕೋಳಿ ಹುಚ್ಚಿನಿಂದ
ರೇಲ್ವೆಯವರು ಪೇಚಾಡಿದರು.

# ನವಾಬ ಸಾಹೇಬರ ಕೋಳಿಗಳು

ಚಿರಂಜಿಲಾಲ ಪರಾಶ

ನವಾಬ ನಯಾಜ ಅಲಿ ಸಾಹೇಬರು ಉಳಿದ ನವಾಬರಂತಿರಲಿಲ್ಲ. ಆವರು ಕೋಳಿ 'ಶೋಕಿ'ಗಳು. ನವಾಬರಾದ ಪರ ಸ್ವಭಾವಧರ್ಮದಂತೆ ಜಗತ್ತಿನಲ್ಲಿಯ ಪ್ರತಿಯೊಂದು ಮಾನ್ಯ 'ಶೋಕಿ'ಯು ಅವರಿಗಿತ್ತಾದರೂ ಕೋಳಿ 'ಶೋಕಿ'ಯ ಮುಂದೆ ಅವೆಲ್ಲ ಸಪ್ಪೆ ಬೀಳುತ್ತಿದ್ದವು ಕೋಳಿಗಳು ಎಂದೊಡನೆ ನವಾಬ ಸಾಹೇಬರ ರೋಮರೋಮಗಳಲ್ಲಿ ಅದಾವುದೋ ಬಗೆಯ ಉನ್ಮಾದ ಪುಟಿದೇಳುತ್ತಿತ್ತು.




ಕಲಕತ್ತೆಯ 'ಸುಪ್ರಭಾತ'ದಿಂದ

'ಕೋಳಿ ಅಂಕ' (ಹುಂಜಗಳ ಕಾದಾಟ) ದಲ್ಲಿ ನವಾಬ ನಯಾಜ ಅಲಿಯವರು ತೋರಿಸುತ್ತಿದ್ದ ಆಸ್ಥೆ-ಉತ್ಸಾಹ ಸುತ್ತಲಿನ ಜನರ ನಿತ್ಯ ಮಾತಾಗಿತ್ತು ; ಗೌರವಕ್ಕೆ, ಹೊಗಳಿಕೆಗೆ ಪಾತ್ರವಾಗಿತ್ತು.

ಎರಡು ಹುಂಜಗಳು ಜೀವವನ್ನು ಪಣವಾಗಿಸಿ ಕಾದಾಡುತ್ತಿವೆ— ಒಂದು ಇನ್ನೊಂದನ್ನು ತನ್ನ ಚುಂಚಿನಿಂದ ಹೊಡೆಯುತ್ತಿದೆ ಇಲ್ಲವೆ ಹೊಡೆಯಲೆತ್ನಿಸುತ್ತಿದೆ; ನವಾಬ ಸಾಹೇಬರು ಈ ಯೋಧರನ್ನು ಪ್ರೋತ್ಸಾಹಿಸುತ್ತಿದ್ದಾರೆ: "ವ್ಹಾ ಬೇಟೇ, ಶಾಬ್ಬಾಸ ಬೇಟೇ, ಪಕಡಲೇ ಬೇಟೇ, ಜಕಡಲೇ ಬೇಟೇ! ಚಿಪಟ ಜವಾನ, ಲಿಪಟ ಜವಾನ! ಮಾರದೇ ದೇ ಮಾರ ಮಾರದೇ !' ಶಾಬ್ಬಾಸ! ವ್ಹಾ! ಶಾಬ್ಬಾಸ!"

ಆದರೆ ನವಾಬರನ್ನು ಒಂದು ಮಾತು ಮಾತ್ರ ಸದಾ ಪೀಡಿಸುತ್ತಿತ್ತು, ದುಃಖಕ್ಕೆ ಕಾರಣವಾಗಿತ್ತು. ಅವರು ಬಯಸಿದಂಥ ಶ್ರೇಷ್ಠ ತರಗತಿಯ ಕೋಳಿ ಅವರಿಗೆ ಸಿಗುತ್ತಿರಲಿಲ್ಲ. ನವಾಬರು ಇಂಗ್ರೇಜಿ ಆಫೀಸರರಿಗೆ ಔತಣವಿತ್ತಾಗ ಕೋಳಿಗಳ ವಿಷಯ ಪ್ರಸ್ತಾಪಿಸಿ ಇಂಗ್ಲಂಡಿನಲ್ಲೂ ಕೋಳಿ 'ಶೋಕಿ'ಗಳಿದ್ದಾರೆ ಎಂಬುದನ್ನು ತಿಳಿದುಕೊಂಡಿದ್ದರು. ಇಂಗ್ಲಂಡಿನಲ್ಲಿ ಅತ್ಯುತ್ತಮ ಜಾತಿಯ ಕೋಳಿ ಸಿಗುತ್ತದೆ, ಕಾದಾಟದಲ್ಲಿ ಆ ಜಾತಿಯ ಹುಂಜವನ್ನು ಮೀರಿಸುವ ಹುಂಜವಿನ್ನೊಂದು ಈ ಭೂತಲದಲ್ಲಿಲ್ಲ ಎಂಬುದನ್ನು ಕೇಳಿದ್ದರು. ತಮಗೆ ಅಂಥ ಕೆಲವು ಹುಂಜಗಳನ್ನು, ಅವು ಸಿಗದೆ ಹೋದರೆ ಕನಿಷ್ಠ ಪಕ್ಷಕ್ಕೆ ಆ ಜಾತಿಯ ಕೆಲವು ಹೇಂಟೆಗಳನ್ನಾದರೂ ತರಿಸಿ ಕೊಡಬೇಕೆಂದು ಇಂಗ್ರೇಜಿ ಆಫೀಸರರಿಗೆ ದುಂಬಾಲ ಬಿದ್ದಿದ್ದರು. ಆಫೀಸರರು "ಅದಕ್ಕೇನು? ಅಗತ್ಯ ತರಿಸಿಕೊಡುತ್ತೇನೆ" ಎಂದು ಹೇಳಿ ಹೋಗುತ್ತಿದ್ದರು. ಮುಂದೆ ಆ ಮಾತನ್ನು ಮರೆತೇಬಿಡುತ್ತಿದ್ದರು.

ಹೀಗೆ ನವಾಬ ಸಾಹೇಬರು ಚಿಂತೆಯಿಂದ ಕೊರಗುತ್ತಿದ್ದಾಗ ಒಂದು ದಿನ ಯಾರೋ ಒಬ್ಬರು ಅವರಿಗೆ ಮುಂಬಯಿಯ ಮಿಯಾಂ ರಮಜಾನರ ಹತ್ತಿರ ಅತ್ಯುತ್ತಮ ತರಗತಿಯ ಐದು ಕೋಳಿ ಜೋಡಿಗಳಿವೆ ಎಂದು ತಿಳಿಸಿದರು. ಮಿಯಾಂ ರಮಜಾನರು ಸದ್ಯ ಬಡತನದ ಬೇಗೆಯಲ್ಲಿ ಸಿಕ್ಕು ಒದ್ದಾಡುತ್ತಿರುವದರಿಂದ ತಮ್ಮ ಹಾಗು ತಮ್ಮ ಕೋಳಿಗಳ ಹಿತಕ್ಕಾಗಿ ಅವನ್ನು ಮಾರಲು ಸಿದ್ಧರಾಗಬಹುದು ಎಂದೂ ಹೇಳಿದರು.

ಈ ಸಂತೋಷದ ಸಮಾಚಾರ ತಿಳಿದು ನವಾಬ ಸಾಹೇಬರು ಹಿರಿಹಿರಿ ಹಿಗ್ಗಿದರು. ತಮ್ಮ ಅನುಗ್ರಹ ಪಾತ್ರರಾದವರಿಗೆಲ್ಲ ಅವರು ಈ ಸಂತೋಷದ ಭರದಲ್ಲಿ ಒಂದು ಮೇಜವಾನಿಯನ್ನಿತ್ತರು. ಮತ್ತೆ ತಡಮಾಡದೆ ತಮ್ಮ ಕಾಯದೆ ಸಲಹೆಗಾರರನ್ನು ಮಿಯಾಂ ರಮಜಾನರ ಈ ಶ್ರೇಷ್ಠ ಕೋಳಿ ಜೋಡಿಗಳನ್ನು ಖರೀದಿ ಮಾಡಲು ಮುಂಬಯಿಗೆ ಕಳಿಸಿಕೊಟ್ಟರು.

ಮರುದಿನ ನವಾಬ ಸಾಹೇಬರಿಗೆ ತಂತಿ ಬಂತು ಕಾಯದೆ ಸಲಹೆಗಾರರಿಂದ. "ಕೇವಲ ಒಂದು ಲಕ್ಷ ಎಂಬತ್ತು ಸಾವಿರ ರೂಪಾಯಿಗಳಿಗೆ ಕೋಳಿಗಳನ್ನು ಖರೀದಿ ಮಾಡಿದೆ. ಅವನ್ನು ಬೇಗ ಜಗತಪುರಕ್ಕೆ ಕಳಿಸಿಕೊಡಲಾಗುವದು."

ನವಾಬ ಸಾಹೇಬರು ಅದಕ್ಕುತ್ತರವಾಗಿ "ಖರೀದಿ ಮಾಡಿದಿರಾ? ಒಳ್ಳೇದು ಮಾಡಿದಿರಿ. ನೀವೀಗ ನೆಟ್ಟಗೆ ಸಿಮ್ಲಾಕ್ಕೆ ಬಂದು ನಮ್ಮನ್ನು ಭೆಟ್ಟಿಯಾಗಿರಿ. ಬರುವಾಗ ದಿಲ್ಲಿಯಲ್ಲಿಳಿದು ಲಂಡನ್ನಿಗೆ ಹೋಗುವ ಪಾಸಪೋರ್ಟನ್ನೂ ತೆಗೆದುಕೊಂಡು ಬನ್ನಿರಿ. ಲಾರ್ಡ ಜಾನಸನ್ನರಿಂದ ಎರಡು ನಾಯಿಗಳನ್ನು ಖರೀದಿಮಾಡಲು ನೀವು ಲಂಡನ್ನಿಗೆ ಹೋಗಬೇಕಾಗಿದೆ. ಅವರ ನಾಯಿಗಳ ವಿಷಯದಲ್ಲಿ ನಾವು ಬಹಳಷ್ಟು ಹೊಗಳಿಕೆಯನ್ನು ಕೇಳಿದ್ದೇವೆ. ಅವರ ಮಗಳ ಬಟ್ಟೆಗಳನ್ನು ಕೂಡ ಕಳಚಿ ಈ ನಾಯಿಗಳೇ ಅಗಸರಿಗೆ ಒಯ್ದು ಕೊಡುತ್ತವಂತೆ" ಎಂದು ತಿಳಿಸಿದರು.

ಕಾಯದೆ ಸಲಹೆಗಾರ ಸಾಹೇಬರು ನವಾಬ ಸಾಹೇಬರ ಆದೇಶದಂತೆ ಖಜಾನೆಯಿಂದ ಹಣ ತೆಗೆದುಕೊಂಡು ಲಂಡನ್ನಿಗೆ ಪ್ರಯಾಣ ಬೆಳೆಸಿದರು.

ಮಿಯಾಂ ರಮಜಾನರ ಕೋಳಿ ಜೋಡಿಗಳು

ಜಗತಪುರ ರೇಲ್ವೆ ಸ್ಟೇಶನ್ನಿಗೆ ಬಂದು ಒಂದು ವಾರ ಕಳೆದರೂ ಅವನ್ನು ಒಯ್ಯಲು ಯಾರೂ ಬರಲಿಲ್ಲ. ಈ ಒಂದು ವಾರದಲ್ಲಿ ಕೋಳಿಗಳ ಸಂಖ್ಯೆ ಹತ್ತರಿಂದ ಐವತ್ತಕ್ಕೇರಿತು.

ನವಾಬ ಸಾಹೇಬರ ಅರಮನೆಗೆ ಸುದ್ದಿ ಕಳಿಸಿದಾಗ ಅವರು ಸಿಮ್ಲಾಕ್ಕೆ ಹೋಗಿದ್ದಾರೆಂದು ತಿಳಿದುಬಂತು.

ರೇಲ್ವೆಯುವರು ಸಿಮ್ಲಾಕ್ಕೆ ಪತ್ರ ಬರೆದು ನವಾಬ ಸಾಹೇಬರ ಸರಕಿನ ಮೇಲೆ ಡೆಮ್ರೇಜ ಬೀಳುತ್ತಲಿದೆ ಎಂದು ತಿಳಿಸಿದರು. ಡೆಮ್ರೇಜಿನ ಸಮಾಚಾರವನ್ನೋದಿ ನವಾಬ ಸಾಹೇಬರ ಸೆಕ್ರೆಟರಿಗಳು ಡೆಮ್ರೇಜಿನ ಹಣ ತುಂಬಲು ಕೋಶಾಧ್ಯಕ್ಷರಿಗೆ ಅಪ್ಪಣೆ ಮಾಡಿದರು. ಕೋಳಿಗಳ ಸಂಖ್ಯೆ ಜಗತಪುರ ಸ್ಟೇಶನ್ನಿನಲ್ಲಿ ಬೆಳೆಯುತ್ತಲೇ ಹೋಯಿತು.

ಅದೃಷ್ಟವೆನ್ನಿ ಅಥವಾ ದುರದೃಷ್ಟವೆನ್ನಿ, ಒಂದು ದಿನ ಅದು ಹೇಗೋ ಸ್ಟೇಶನ್ನಿನಲ್ಲಿ ಬಂಧಿತವಾಗಿದ್ದ ಈ ಕೋಳಿಗಳು ಬಂಧಮುಕ್ತವಾದವು. ಸ್ವಾತಂತ್ರ್ಯ ಸಿಕ್ಕ ಮೇಲೆ ಕೇಳುವದೇನು? ಬಹಳ ದಿನಗಳ ನಂತರ ಈ ಕೋಳಿಗಳಿಗೆ ಸ್ವಾತಂತ್ರ್ಯ ಲಭಿಸಿತ್ತು. ಅದರ ಸುದುಪಯೋಗವನ್ನು ಅವು ಮಾಡಿಕೊಳ್ಳದೆ ಇದ್ದಾವಾದರೂ ಹೇಗೆ? ಕೆಲ ಹುಂಜಗಳು ಸ್ಟೇಶನ್ನಿನಲ್ಲಿದ್ದ ರೇಲ್ವೆ ಡಬ್ಬಿಗಳ ಮಾಡಿನ ಮೇಲೇರಿ ಕುಳಿತು ತಮ್ಮ ಸ್ವಾತಂತ್ರ್ಯವನ್ನು ಸಾರಿದವು; :ಕೆಲವು ಸಿಗ್ನಲ ಕಂಬವನ್ನೇರಿದವು; ಇನ್ನು ಕೆಲವು ಪ್ಲಾಟಫಾರ್ಮಿನ ಮೇಲೆ ಮತ್ತು ಕಚೇರಿಯ ಕೋಣೆಗಳಲ್ಲಿ ಹುಳಹುಪ್ಪಡಿಗಳ ಶೋಧಕ್ಕಾಗಿ ಅಲೆಯತೊಡಗಿದವು. ಸ್ಟೇಶನ್ನಿನಲ್ಲಿ ಎಲ್ಲಿ ನೋಡಿದಲ್ಲಿ ಹುಂಜಗಳೇ ಹುಂಜಗಳು, ಹೇಂಟೆಗಳೇ ಹೇಂಟೆಗಳು, ಕೋಳಿ ಮರಿಗಳೇ ಮರಿಗಳು! ಜಗತಪುರ ಸ್ಟೇಶನ್ನಿನವರು "ಕೋಳಿ ದಿನ''ವನ್ನಾಚರಿಸುತ್ತಿರುವರೇನೋ ಎಂಬ ಭಾಸವುಂಟಾಗತೊಡಗಿತು.

ಒಂದು ದಿಟ್ಟ ಹುಂಜವು ಸ್ಟೇಶನ್ ಮಾಸ್ತರರ ಮೇಜನ್ನೇರಿ ಉಚ್ಚ ಸ್ವರದಿಂದ "ಕೊಕ್ಕೊಂಕೋ" ಎಂದು ಕೂಗತೊಡಗಿದಾಗಲೇ ಸ್ಟೇಶನ್ ಮಾಸ್ತರರಿಗೆ ಕೋಳಿಗಳಿಗೆ ಸ್ವಾತಂತ್ರ್ಯ ಪ್ರಾಪ್ತವಾಗಿರುವದರ ಅರಿವುಂಟಾಯಿತು.

"ಚಪರಾಸಿ, ಪ್ಯೂನ್, ಯಾರದೀ ಹುಂಜ ಎಲ್ಲಿಂದ ಬಂತು? ಹಾಕಿದನ್ನು ಹೊರಗೆ!" ಸ್ಟೇಶನ್ ಮಾಸ್ತರರು ಕೂಗಿದರು.

"ಸಾಹೇಬ, ಇದು ಗುದಾಮಿನಿಂದ ಬಂದಿದೆ" ಎನ್ನುತ್ತ ಚಪರಾಸಿ ಬರಖತ ಅಲಿಯು ಮೇಜಿನ ಮೇಲಿದ್ದ ಹುಂಜವನ್ನು ಹಿಡಿಯಲೆಂದು ಕೈಚಾಚಲು ಅದು ಹಾರಿ "ಸ್ಟೇಶನ್ ಮಾಸ್ತರ" ಎಂದು ಬರೆದಿದ್ದ ಬೋರ್ಡಿನ ಮೇಲೆ ಕುಳಿತಿತು. ಮತ್ತೊಮ್ಮೆ ಅಲ್ಲಿಂದ ಅದು ಬರಖತ ಅಲಿಗೆ "ಹುಂ! ಏನು ಮಾಡುತ್ತಿಯೋ ಮಾಡು ಗಂಡಸಾದರೆ" ಎಂದು ಅಣಕಿಸುವಂತೆ "ಕೊಕ್ಕೊಂಕೋ" ಎಂದು ಕೂಗಿತು.

ನಿಚ್ಚಣಿಕೆಯ ಸಹಾಯವಿಲ್ಲದೆ ಹುಂಜವನ್ನು ತಲುಪುವದು ಸಾಧ್ಯವಿರದ್ದರಿಂದ ಬರಖತ ಅಲಿ ಅಲ್ಲೆ ಬಳಿಯಲ್ಲಿದ್ದ ಬುಟ್ಟಿಯೊಂದರಲ್ಲಿಯ ಸವತೇಕಾಯಿಯೊಂದನ್ನು ಎತ್ತಿಕೊಂಡು "ಹತ್ ನಿನ್ನ ತಗೂ" ಎಂದು ಹುಂಜವನ್ನು ಹೊಡೆದನು.

ಬರಖತ ಅಲಿಗೆ ಗುರಿ ಸಾಧಿಸಲಿಲ್ಲ. ಮೇಲೆ ಹೋದ ಸವತೇಕಾಯಿ ಗುರುತ್ವಾಕರ್ಷಣ ನಿಯಮದಂತೆ ಕೆಳಗೆ ಬರುತ್ತಿದ್ದಾಗ ಕಾಕತಾಲನ್ಯಾಯದಂತೆ ಸ್ಟೇಶನ್ ಮಾಸ್ತರರು ಕೋಣೆಯಿಂದ ಹೊರಗೆ ಬಂದರು. ಸವತೇಕಾಯಿ ನೇರವಾಗಿ ಕೆಳಗಿಳಿದು ಅವರ ಬೊಕ್ಕತಲೆಗೆ ಅಪ್ಪಳಿಸಿತು. ಬಹುಶಃ 'ಎಲಾ! ತಪ್ಪಾಯಿತು' ಎಂದೆಂದುಕೊಂಡ ಆ ಸವತೇಕಾಯಿ ಆಶ್ಚರ್ಯಾಘಾತದ ಭರದಲ್ಲಿ ಒಂದರೆನಿಮಿಷ ಸ್ಟೇಶನ್ ಮಾಸ್ತರರ ತಲೆಯ ಮೇಲೆ ಕುಳಿತು ಬಳಿಕ ತನ್ನ ಸ್ಥಾನವಿದಲ್ಲ ಎಂಬ ಅರಿವಿನಿಂದ ಕೆಳಗೆ ಜಾರಿಬಿತ್ತು.

"ಆಂ! ಏನಿದು ಕುಚೋದ್ಯ!" ಸವತೇಕಾಯಿಯ ಪೆಟ್ಟಿನಿಂದ ತಪ್ತರಾದ ಸ್ಟೇಶನ್ ಮಾಸ್ತರರು ಗುಡುಗಿದರು. ಏನು ಬಂತು ಎಂದು ಹೆದರಿ ನಡುಗುತ್ತ ಬರಖತ ಅಲಿ "ಸಾಹೇಬ, ಇದು ಬಹಳ ಬದ್ಮಾಷ ಹುಂಜ. ಮೇಲಿಂದ ಏನೇನು ಕೆಳಗೆ ಚೆಲ್ಲುತ್ತದೊ ಅಲ್ಲಾನೇ ಬಲ್ಲ" ಎಂದನು.

' ಅಂ! ಇದೇನು ರೇಲ್ವೆ ಸ್ಟೇಶನ್ನೊ ಅಥವಾ ಕೋಳಿ ಕ್ಯಾಂಪೋ." ಎಂದು ಸ್ಟೇಶನ್ ಮಾಸ್ತರರು ಉದ್ಗರಿಸುತ್ತಿದ್ದ ಹಾಗೆ ಬಾಬು ಪರಶುರಾಮ್ರರು ಒಂದು ಹುಂಜವನ್ನು ಬೆನ್ನಟ್ಟಿಕೊಂಡು ಬಂದರು. ಸ್ಟೇಶನ್ ಮಾಸ್ತರರನ್ನು ಕಂಡು "ಸಾರ್, ಈ ಕೋಳಿಗಳ ಕಾಲದಲ್ಲಿ ಸಾಕಾಗಿ ಹೋಯಿತು. ಈಗ ಓಡಿತಲ್ಲ ಈ ಹುಂಜ! ಇದಂತೂ ಕೆಲವು ರಜಿಸ್ಟರುಗಳನ್ನೆ ಹೊಲಸು ಮಾಡಿ ಬಂದಿದೆ," ಎಂದರು.

"ಅಂದರೆ ಇದರ ಅರ್ಥವಾದರೂ ಏನು? ಗೂಡ್ಸ ಕ್ಲಾರ್ಕನನ್ನು ಕರೆಯಿರಿ."

ಬರಖತ ಅಲಿ ಗೂಡ್ಸ ಕ್ಲಾರ್ಕರನ್ನು ಕರೆತಂದನು.

ಗೂಡ್ಸ ಕ್ಲಾರ್ಕನು ಇನ್ನೂ ಹತ್ತು ಮಾರು ದೂರದಲ್ಲಿರುವಾಗಲೇ ಸ್ಟೇಶನ್ ಮಾಸ್ತರರು, "ಮನೋಹರಬಾಬು, ಇದೆಲ್ಲ ಏನು ಆಟ ನಡೆಯುತ್ತಿದೆ ಇಲ್ಲಿ? ಯಾರ ಕೋಳಿಗಳು ಇವು? ಇಲ್ಲಿ ಹೇಗೆ ಬಂದವು? ಯಾಕೆ ಗೊಂದಲ ಹಾಕುತ್ತಿವೆ?" ಎಂದು ಕೇಳಿದರು.

ಮನೋಹರ ಬಾಬು "ಸಾರ್, ನವಾಬ ಸಾಹೇಬರ ಕೋಳಿಗಳಿವು'' ಎಂದು ಅಂದರು.

'' ಕೋಳಿಗಳನ್ನು ಬಿಡಿಸಿಕೊಂಡು ಹೋಗಲು ಯಾರೂ ಬಂದಿಲ್ಲವೆ?

'' ಇಲ್ಲ. ಡೆಮ್ರೇಜ ಬೀಳುತ್ತಿದೆ.''

'' ನವಾಬ ಸಾಹೇಬರ ಮಾಲು! ಹೀಗೆ ಹಾಳಾಗಿ ಹೋಗುತ್ತಿದೆ! ನಿಮ್ಮ ಬುದ್ಧಿಯನ್ನೇನು ಮಾರಿಕೊಂಡಿರುವಿರೇನು? ಇವುಗಳಲ್ಲಿ ಏನಾದರೂ ಒಂದೇ ಒಂದು ಕೋಳಿಮರಿ ಇಲ್ಲವಾಯಿತಾದರೆ ನಮ್ಮೆಲ್ಲರ ಕುತ್ತಿಗೆಗೆ ಉರುಲು ಬಂದೀತು. ಗೊತ್ತಿಲ್ಲವೆ?" ಸ್ಟೇಶನ್ ಮಾಸ್ತರರು ಬಡಬಡಿಸಿದರು.

'' ಆದರೆ ಸಾರ್, ಇವುಗಳ ಸಂಖ್ಯೆ ಕಡಿಮೆಯಾಗುವ ಬದಲು ದಿನೇದಿನೇ ವೃದ್ಧಿಯಾಗುತ್ತಿದೆ. ನೀವು ಹೂಂ ಎಂದರೆ ಇವುಗಳ ಸಂಖ್ಯೆಯನ್ನು ಕಡಿಮೆ ಮಾಡಿಸೋಣ.'

'' ಅಂದರೆ?''

'' ಇವುಗಳ ಸಂಖ್ಯೆಯನ್ನು ಕಡಿಮೆ ಮಾಡುವ ಕೆಲ ಮಹಾನುಭಾವರು ನಮಗೆ ಸಿಗಬಹುದು.''

"ಆದರೆ ಇದು ಎರಡನೆಯವರ ಮಾಲು. ಎರಡನೆಯವರದು ಎಂದರೆ ನವಾಬರದು, ಮತ್ತಾರದಲ್ಲ. ಮೈಮೇಲೆ ಎಚ್ಚರವಿದೆಯೊ ಇಲ್ಲವೊ?"

"ಇದೆ ಸಾರ್. . ಆದರೆ ಸಂಖ್ಯೆ ಹೀಗೆಯೇ ಹೆಚ್ಚುತ್ತ ಹೋದರೆ, ಹೆಚ್ಚಿದ ಮಾಲಿನ ಹಕ್ಕು ಯಾರದಾಗುವದು? ರೇಲ್ವೆಯವರದೊ? ಮಾಲಿನ ಒಡೆಯರದೋ? ಮಾಲಿನ ಮಾಲಿಕನು ತನ್ನ ಮಾಲನ್ನೆಲ್ಲ ತೆಗೆದುಕೊಳ್ಳದೇ ಇರುವನೇ?"

"ರೇಲ್ವೆ-ಲಾ ತೆಗೆದು ನೋಡಿದರೆ ಈ ವಿಷಯ ತಿಳಿದೀತು. ರೇಲ್ವೆಯವರ ವಶದಲ್ಲಿದ್ದಾಗ ಮಾಲು ಕಡಿಮೆಯಾದರೆ ಅದರ ಹೊಣೆ ರೇಲ್ವೆಯವರ ಮೇಲಿರುವದು ಎಂಬುದಷ್ಟನ್ನು ನಾನು ಬಲ್ಲೆ.''

"ಮತ್ತೆ ಮಾಲು ಹೆಚ್ಚಿದಾಗ ಹೇಗೆ ಎಂಬುದನ್ನೂ ತಿಳಿದುಕೊಳ್ಳಿ ಸಾರ್. ಬಂದಾಗ ೧೦ ಇದ್ದ ಈ ಕೋಳಿ ಹಿಂಡಿನ ಸಂಖ್ಯೆ ಈಗ ಐವತ್ತಕ್ಕೆ ಮಿಕ್ಕಿದೆ."

ಕೋಳಿಗಳ ಸಂಖ್ಯೆ ಬೆಳೆಯುತ್ತಲೇ ಹೋಯಿತು. ಐವತ್ತು ಕೋಳಿಗಳು ಐದು ನೂರಾದವು!

ಕೋಳಿಗಳ ಯೋಗಕ್ಷೇಮ ನೋಡಿಕೊಳ್ಳುವದು ತನ್ನ ಕರ್ತವ್ಯ ಎಂದು ಬಗೆದು ಗೂಡ್ಸ ಕ್ಲಾರ್ಕ ಮನೋಹರಬಾಬು ತನ್ನ ಸಹಾಯಕ್ಕಾಗಿ ಇನ್ನೊಬ್ಬ ಕಾರಕೂನ ಮತ್ತು ಇಬ್ಬರು ಸಿಪಾಯಿಗಳನ್ನು ಕೊಡಬೇಕೆಂದು ಅರ್ಜಿ ಮಾಡಿಕೊಂಡನು.

ಸ್ಟೇಶನ್ನಿನ ಇನ್ನೊಬ್ಬ ಕಾರಕೂನನನ್ನು 'ಕೋಳಿ ಡ್ಯೂಟಿ'ಗೆ ನೇಮಿಸಲಾಯಿತು. ಕೋಳಿಗಳಿಗಾಗಿ ಮಾಡಬೇಕಾದ ವೆಚ್ಚವೂ ಏರತೊಡಗಿತು.

ಮಾಲು ಬಿಡಿಸಿಕೊಳ್ಳಬೇಕೆಂದು ನವಾಬ ಸಾಹೇಬರಿಗೆ ಸ್ಟೇಶನ್ನಿನಿಂದ ಮತ್ತೊಂದು ಪತ್ರ ಹೋಯಿತು. ಡೆಮ್ರೇಜಿನ ನೆನಪನ್ನೂ ಮಾಡಿಕೊಡಲಾಯಿತು. ಡೆಮ್ರೇಜಿನ ಹಣ ಬಂತು. ಕೋಳಿಗಳು ಸ್ಟೇಶನಿನಲ್ಲಿಯೇ ಉಳಿದವು.

ಕೋಳಿಗಳ ಸಂಖ್ಯೆ ಬೆಳೆದು ಒಂದು ಸಾವಿರಕ್ಕೇರಿತು.

ಇದುವರೆಗೆ ಸ್ಟೇಶನ್ ಅಧಿಕಾರಿಗಳು ಗೂಡ್ಸ ಗಾಡಿಯ ಬಾಗಿಲಿದ್ದ ಡಬ್ಬಿಗಳನ್ನು ಕೋಳಿ ಗೂಡುಗಳನ್ನಾಗಿ ಪರಿವರ್ತಿಸಿಕೊಂಡು ಕೆಲಸ ನಡೆಸಿದ್ದರು. ಆದರೆ ನಿಮಿಷನಿಮಿಷಕ್ಕೂ ಬೆಳೆ-ಯುತ್ತಿದ್ದ ಕೋಳಿಗಳನ್ನು ಕೂಡಿಡಲು ಸಾಲುವಷ್ಟು ಡಬ್ಬಿಗಳಾದರೂ ಲಭ್ಯವಾಗಬೇಕು ಹೇಗೆ?

ಗೂಡ್ಸ ಕ್ಲಾರ್ಕರೆಲ್ಲ ಸೇರಿಕೊಂಡು ಸ್ಟೇಶನ್ ಮಾಸ್ತರರ ಹತ್ತರ ಹೋದರು. ಕೋಳಿಗಳ ಸಂಖ್ಯೆ ಈಗ ಒಂದೂವರೆ ಸಾವಿರವಾಗಿದೆ ಎಂಬುದನ್ನು ತಿಳಿಸಿದರು. ಲಾಯಿನ್ ಮೇಲಿದ್ದ ಗೂಡ್ಸ ಡಬ್ಬಿಗಳೆಲ್ಲ ಅವುಗಳಿಂದ ತುಂಬಿಹೋಗಿವೆ, ಅವುಗಳಿಗಾಗಿ ಹೊಸ ಡಬ್ಬಿಗಳನ್ನು ತಯಾರಿಸುವ ಅವಶ್ಯಕತೆಯುಂಟಾಗಿದೆ ಎಂದು ಅರಿಕೆ ಮಾಡಿಕೊಂಡರು.

'' ಹೇಗಾದರೂ ಮಾಡಿರಿ. ನವಾಬ ಸಾಹೇಬರಿಗೆ ಮತ್ತೊಮ್ಮೆ ಬರೆದುಕೊಳ್ಳಿರಿ '' ಎಂದರು ಮಾಸ್ತರರು.

" ನವಾಬ ಸಾಹೇಬರಿಗೆ ಬರೆದುಕೊಳ್ಳುವದರಿಂದ ಪ್ರಯೋಜನವೇನೂ ಆಗುವದಿಲ್ಲ. ತಾವು ದಯವಿಟ್ಟು ರೇಲ್ವೆ ಕಮರ್ಶಿಯಲ್ ಮ್ಯಾನೇಜರರಿಗೆ ಬರೆದು ಅವರ ಸಲಹೆ ಪಡೆದುಕೊಳ್ಳಿ ಸಾರ್. ''

ಕಾರಕೂನರ ಮಾತು ಸ್ಟೇಶನ್ ಮಾಸ್ತರರಿಗೆ ಸರಿಯೆನಿಸಿತು. ಅವರು ಕಮರ್ಶಿಯಲ್ ಮ್ಯಾನೇಜರರಿಗೆ ಸ್ಟೇಶನ್ನಿನ ಕೋಳಿ ಸಂಸಾರದ ಕಥೆ ತಿಳಿಸಿ ಏನು ಮಾಡಬೇಕೆಂಬುದರ ಬಗ್ಗೆ ಸಲಹೆಯನ್ನೀಯಲು ಪ್ರಾರ್ಥಿಸಿಕೊಂಡರು.

ಪೂರ್ಣ ಐದು ವಾರಗಳು ಕಳೆದ ನಂತರ ಕಮರ್ಶಿಯಲ್ ಮ್ಯಾನೇಜರರಿಂದ ಉತ್ತರ ಬಂತು. " ಈ ವಿಷಯವು ಸರಕಾರವೂ ರೇಲ್ವೆಯವರೂ ಗೌರವದಿಂದ ಕಾಣುತ್ತಿರುವ ಓರ್ವ ದೊಡ್ಡವರಿಗೆ ಸಂಬಂಧಪಟ್ಟಿರುವದಾದ್ದರಿಂದ ಹೇಗಾದರೂ ಮಾಡಿ ಕೆಲಸ ಸಾಗಿಸಬೇಕು. ಕೋಳಿಗಳಿಗೆ ಕಷ್ಟವಾಗದಂತೆ ನೋಡಿಕೊಳ್ಳಬೇಕು" ಎಂದು ಕಮರ್ಶಿಯಲ್ ಮ್ಯಾನೇಜರರು ತಿಳಿಸಿದ್ದರು.

ಈ ಆದೇಶ ಬರುವದರೊಳಗಾಗಿ ಕೋಳಿಗಳ ಸಂಖ್ಯೆ ಮೂರು ಸಾವಿರಕ್ಕೆ ಮುಟ್ಟಿತ್ತು. ಅವುಗಳನ್ನು ನೋಡಿಕೊಳ್ಳುವದು ಕಠಿಣವಾಗತೊಡಗಿತ್ತು. ಸ್ಟೇಶನ್ ಅಧಿಕಾರಿಗಳಿಗೆ ಖಾಲಿ ಜಾಗ ಎಲ್ಲಿಯೆ ಕಾಣಲಿ, ಅಲ್ಲಿ ಕೋಳಿಗಳಿಗೆ ವಸತಿಯನ್ನು ಒದಗಿಸಿಕೊಡುತ್ತಿದ್ದರು. ಕೋಳಿಗಳಿಂದ ಕೆಲ ಕಾಗದಪತ್ರಗಳೂ ಹಾಳಾದವು.

ಕಮರ್ಶಿಯಲ್ ಮ್ಯಾನೇಜರರ ಉತ್ತರವನ್ನು ಕಂಡು ಸ್ಟೇಶನ್ ಮಾಸ್ತರರು ಗಾಬರಿಗೊಂಡರು. ತತ್‌ಕ್ಷಣ ಅವರು " ಕೋಳಿಗಳ ಸಂಖ್ಯೆ ಅಂಕೆಗೆ ಮೀರಿ ಹೆಚ್ಚಿದೆ. ಅವಕ್ಕಾಗಿ ಪ್ರತ್ಯೇಕ ಮನೆ ಕಟ್ಟಿಸದಿದ್ದರೆ ಪರಿಸ್ಥಿತಿ ಕೈಮೀರಿ ಹೋಗುವಷ್ಟು ಬಿಕ್ಕಟ್ಟಿನದಾದೀತು. ಮತ್ತೆ ಆಗ ಅವುಗಳಿಗೆ ತೊಂದರೆಯಾಗುವ ಭಯವೂ ಇದೆ" ಎಂದು ಬರೆದು ತಿಳಿಸಿದರು.

ಈ ಸಲ ಸರಿಯಾಗಿ ಎರಡು ತಿಂಗಳ ನಂತರ ಉತ್ತರ ಬಂತು: " ಹೇಗಾದರೂ ಮಾಡಿ ಕೆಲಸ ಸಾಗಿಸಿರಿ."

ಈ ಉತ್ತರ ಬಂದಾಗ ಕೋಳಿಗಳ ಸಂಖ್ಯೆ ಐದು ಸಾವಿರವಾಗಿತ್ತು. ಸ್ಟೇಶನ್ನಿನ ನೌಕರರಲ್ಲಿ ಅರ್ಧದಷ್ಟು ಜನರು ಕೋಳಿಗಳ ಚಾಕರರಾಗಿದ್ದರು.

ಸ್ಟೇಶನ್ನಿನಲ್ಲಿ ಎಲ್ಲಿ ನೋಡಿದಲ್ಲಿ ಕಟ್ಟಿಗೆಯ ಕೋಳಿ ಗೂಡುಗಳೇ ಕಂಡುಬರುತ್ತಿದ್ದವು.

ಕೊನೆಗೆ ಸ್ಟೇಶನ್ ಮಾಸ್ತರರು ಸೀದಾ ರೇಲ್ವೆ ಬೋರ್ಡಿಗೇ ಕೋಳಿಗಳ ಕಥೆಯನ್ನು ನಿವೇದಿಸಿಕೊಂಡರು. " ಸ್ಟೇಶನ್ನಿನಲ್ಲಿ ಕೋಳಿಗಳಿಂದ ಬಹಳ ಬಿಕ್ಕಟ್ಟಿನ ಪರಿಸ್ಥಿತಿ ತಲೆದೋರಿದೆ. ದಯವಿಟ್ಟು ಒಂದೇ ಕೋಳಿಗಳಿಗಾಗಿ ಬೇರೊಂದು ಮನೆ ಕಟ್ಟಿಸಿ ಹೆಚ್ಚಿಗೆ ನೌಕರರನ್ನು ಒದಗಿಸಬೇಕು, ಇಲ್ಲವೆ ಕೋಳಿಗಳನ್ನು ಬೇರೆಡೆ ಎಲ್ಲಿಯಾದರೂ ಕಳಿಸಿ ಕೊಡುವ ಆಜ್ಞೆಯನ್ನು ದಯಪಾಲಿಸಬೇಕು," ಎಂದು ಅವರು ಬರೆದುಕೊಂಡರು.

ಮೂರು ತಿಂಗಳ ವರೆಗೆ ರೇಲ್ವೆ ಬೋರ್ಡು ಈ ಅಪೂರ್ವ ಪ್ರಸಂಗದ ಬಗ್ಗೆ ಗಂಭೀರವಾಗಿ

ಯೋಚಿಸಿ "ಮಂತ್ರಿಗಳ ಆಜ್ಞೆಯಿಲ್ಲದೆ ಹೊಸ ಕಟ್ಟಡ ಕಟ್ಟಲು ಅಪ್ಪಣೆ ಕೊಡಲು ಸಾಧ್ಯವಿಲ್ಲ. ಆದರೆ ಸ್ಥಾನಾಭಾವದ ನಿಮ್ಮ ಪ್ರಸ್ತಾಪದ ವಿಷಯದಲ್ಲಿ ನಮ್ಮ ಅನುಕೂಲಾಭಿಪ್ರಾಯವಿದ್ದು ನಿಮ್ಮ ಡಿವಿಜನ್ನಿನ ಎಲ್ಲ ಸ್ಟೇಶನ್ನುಗಳಿಗೂ ಕೆಲ ಕೆಲವು ಕೋಳಿಗಳನ್ನು ಕಳಿಸಿಕೊಡಬೇಕು ಎಂದು ತಿಳಿಸುತ್ತೇವೆ. ಮುಂಗಡಪತ್ರದಲ್ಲಿ ಹೊಸ ಕೋಳಿಮಂದಿರ ಕಟ್ಟಿಸುವ ಬಗ್ಗೆ ಒಂದು ವಿಧೇಯಕವನ್ನು ವಿಧಾನ ಸಭೆಯ ಮುಂದೆ ಇಡಲಾಗುವದು. ಈ ಬಗ್ಗೆ ಟಿಪ್ಪಣಿ ಮಾಡಿಕೊಂಡಿದೆ," ಎಂದು ತಿಳಿಸಿತು.

ಬೋರ್ಡಿನ ಆದೇಶ ತಲುಪುವದರೊಳಗಾಗಿ ಕೋಳಿಗಳ ಸಂಖ್ಯೆ ಹತ್ತುಸಾವಿರಕ್ಕೂ ಮಿಕ್ಕಿತ್ತು.

ಸ್ಟೇಶನ್ ಮಾಸ್ತರರು ಎಲ್ಲ ಸ್ಟೇಶನ್ನುಗಳಿಗೂ ರೇಲ್ವೆ ಬೋರ್ಡಿನ ಆಜ್ಞೆಯನ್ನು ಫೋನಿನಿಂದ ತಿಳಿಸಿದರು. ದುರ್ಭಾಗ್ಯದ ಮಾತು! ಈ ಡಿವಿಜನ್ನಿನ ಸ್ಟೇಶನ್ನುಗಳೆಲ್ಲವೂ ಸಣ್ಣ ಸ್ಟೇಶನ್ನುಗಳೇ ಆಗಿದ್ದವು. ಕೋಳಿಗಳ ವಸತಿಯ ಏರ್ಪಾಡು ಮಾಡಿಕೊಳ್ಳದೆ ಅವುಗಳನ್ನು ಸಾಕಲು ಯಾವ ಸ್ಟೇಶನ್ ಮಾಸ್ತರನೂ ಸಿದ್ಧನಿರಲಿಲ್ಲ.

ನಿರಾಶರಾದ ಸ್ಟೇಶನ್‌ಮಾಸ್ತರರು ಡಿವಿಜನ್ನಿನ ಯಾವ ಒಂದು ಸ್ಟೇಶನ್ನಿನಲ್ಲಿಯೂ ಕೋಳಿಗಳ ವ್ಯವಸ್ಥೆಯಾಗುವದು ಸಾಧ್ಯವಿಲ್ಲ ಎಂದು ರೇಲ್ವೆ ಬೋರ್ಡಿಗೆ ಬರೆದು ತಿಳಿಸಿದರು.

ಎರಡು ತಿಂಗಳ ನಂತರ ರೇಲ್ವೆ ಬೋರ್ಡಿನವರು, "ಸದ್ಯ ಇದ್ದಂತೆಯೆ ಇರಲಿ. ಸರಕಾರದ ಸಿಮ್ಲಾ ಕೋಳಿಸಂಗೋಪನ ಶಾಖೆಯೊಡನೆ ಈ ಕೋಳಿಗಳ ಜೋಪಾನದ ವಿಷಯವನ್ನು ಚರ್ಚಿಸುತ್ತಿದ್ದೇವೆ" ಎಂದು ತಿಳಿಸಿದರು.

ರೇಲ್ವೆ ಬೋರ್ಡಿನವರು ಸಿಮ್ಲಾ ಶಾಖೆಯವರೊಡನೆ ನಡೆಸಿದ ಮಾತುಕತೆಗಳು ಎರಡು ತಿಂಗಳ ನಂತರ ಮುಗಿದವು. ಅಷ್ಟರಲ್ಲಿ ಜಗತ್‌ಪುರ ಸ್ಟೇಶನ್ನಿನಲ್ಲಿ ಕೋಳಿಗಳ ಸಂಖ್ಯೆ ಮೂವತ್ತು ಸಾವಿರವಾಗಿತ್ತು. ಸಿಮ್ಲಾ ಕೋಳಿ-ಸಂಗೋಪನ ಶಾಖೆಯು ರೇಲ್ವೆಶಾಖೆಯ ಖರ್ಚಿನಿಂದ ಕೋಳಿಗಳ ಜೋಪಾನ ಮಾಡಬಹುದೆಂಬ ಆಜ್ಞೆಯನ್ನು ಸರಕಾರದ ಪಶು ಇಲಾಖೆ ಹೊರಡಿಸಿತು.

ಪ್ಲಾಟಫಾರ್ಮಿನ ಮೇಲೆ ಕೋಳಿಗಳ ಸ್ಪೆಶಲ್ ಟ್ರೇನ್ ಸಿಮ್ಲಾಕ್ಕೆ ಹೊರಡಲು ಸಿದ್ಧವಾಗಿ ನಿಂತಿತ್ತು. ನವಾಬ ಸಾಹೇಬರ ಸ್ಪೆಶಲ್ ಟ್ರೇನು ಸಿಮ್ಲಾದಿಂದ ಹೊರಟು ಬಂದು ಜಗತ್‌ಪುರಕ್ಕೆ ಬಂತು. ಡಬ್ಬಿಗಳಲ್ಲಿ ಕೋಳಿಗಳನ್ನು ತುಂಬಲಾಗುತ್ತಿತ್ತು. ನವಾಬಸಾಹೇಬರು ಮಗ್ಗಲಿನ ಹಳಿಯ ಮೇಲೆ ನಿಂತಿದ್ದ ಟ್ರೇನಿನಲ್ಲಿ ಕೋಳಿಗಳನ್ನು ತುಂಬುವ ಕಾರ್ಯವನ್ನು ಕುತೂಹಲದಿಂದ ನೋಡುತ್ತಿದ್ದರು. ಇಷ್ಟೆಲ್ಲ ಕೋಳಿಗಳಲ್ಲಿ ತಮಗೆ ಬೇಕಾದ ಮಾದರಿಯ ಮೂರು ನಾಲ್ಕು ಹುಂಜಗಳಾದರೂ ದೊರೆಯಲಿಕ್ಕಿಲ್ಲವೇ ಎಂದು ನವಾಬರು ಯೋಚಿಸುತ್ತಿದ್ದರು.

ಹುಂಜಗಳ ವಿಚಾರ ಮಾಡುತ್ತಿದ್ದಾಗ ನವಾಬ ಸಾಹೇಬರಿಗೆ ತಾವು ಮುಂಬಯಿಯಲ್ಲಿ ಮಿಯಾಂರಮಜಾನರಿಂದ ಕೊಂಡ ಕೋಳಿಗಳ ನೆನಪು ಬಂದಿತು.

ತಮ್ಮ ಕಾಯದೆ ಸಲಹೆಗಾರರತ್ತ ಮುಖ ತಿರುಗಿಸಿ ಅವರು, "ನೀವು ಮುಂಬಯಿಯಲ್ಲಿ ಐದು ಕೋಳಿ ಜೋಡಿಗಳನ್ನು ಖರೀದಿ ಮಾಡಿದ್ದಿರಲ್ಲ, ಅವು ಇನ್ನೂ ಬಂದು ಮುಟ್ಟಿಲ್ಲವೆ ?" ಎಂದು ಕೇಳಿದರು.

"ನಾನು ನಾಯಿಗಳ ಖರೀದಿಗಾಗಿ ಲಂಡನ್ನಿಗೆ ಹೋದೆನಲ್ಲ, ಹುಜೂರ. ಸ್ಟೇಶನ್ನಿನಲ್ಲಿ ವಿಚಾರಿಸಿದರೆ ಮಾಲು ಬಂದಿತೊ ಇಲ್ಲವೊ ತಿಳಿಯುವದು! ಬರದಿದ್ದರೆ ಯಾಕೆ ತಡವಾಗಿರಬಹುದು ?" ಸಲಹೆಗಾರರು ತುಸು ಯೋಚಿಸಿ, "ಮಳೆಯ ಮೂಲಕ ಒಂದೆರಡು ಕಡೆಗಳಲ್ಲಿ ರೇಲ್ವೆ ಹಳಿಗಳು ಕಿತ್ತುಬಿದ್ದಿದ್ದವು. ಕೆಲ ಮಾಲಗಾಡಿಯ ಡಬ್ಬಿಗಳೂ ಹಳಿ ತಪ್ಪಿ ಬಿದ್ದಿದ್ದವು. ಬಹುಶಃ ಅದಕ್ಕಾಗಿಯೆ ತಡವಾಗಿರಬೇಕು" ಎಂದು ನವಾಬರಿಗೆ ಹೇಳಿದರು.

"ತಪಾಸ ಮಾಡಿರಿ. ಕೋಳಿಗಳಿಗೇನಾದರೂ ಅಪಾಯವಾಗಿದೆಯೊ ಏನೋ ?"

ಸಲಹೆಗಾರ ಸಾಹೇಬರು ಗಾಡಿಯಿಂದಿಳಿದು

ಸ್ಟೇಶನ್ ಮಾಸ್ತರರ ಕೋಣೆಗೆ ಹೋದರು. " ಕೆಲ ತಿಂಗಳ ಹಿಂದೆ ನವಾಬ ಸಾಹೇಬರಿಗೆ ಐದು ಕೋಳಿ ಜೋಡಿಗಳು ಮುಂಬಯಿಯಿಂದ ಕಳಿಸಲ್ಪಟ್ಟಿದ್ದವಲ್ಲ! ಅವಿನ್ನೂ ಯಾಕೆ ಬಂದಿಲ್ಲ? ಬಂದಿದ್ದರೆ ಎಲ್ಲಿವೆ?" ಎಂದು ಕೇಳಿದರು.

ಸ್ಟೇಶನ್ ಮಾಸ್ತರರು, "ಸಾಹೇಬರೇ, ಮುಂಬಯಿಯಿಂದ ಕಳಿಸಲ್ಪಟ್ಟ ಕೋಳಿಗಳು ಈಗ ಈ ಜಗತ್ತಿನಲ್ಲಿ ಇವೆಯೊ ಇಲ್ಲವೊ ನಾನು ಹೇಳಲಾರೆ. ಆದರೆ ಅವುಗಳ ಮಕ್ಕಳು-ಮರಿಗಳು ಮಾತ್ರ ಇವೆ. ಅವುಗಳ ಪರಿವಾರವಾದ ೩೦-೪೦ ಸಾವಿರ ಕೋಳಿಗಳು ಇಂದು ಸಿಮ್ಲಾಕ್ಕೆ ಸ್ಪೇಶಲ್ ಟ್ರೇನಿನಲ್ಲಿ ಹೋಗುತ್ತವೆ" ಎಂದರು.

"ನವಾಬ ಸಾಹೇಬರು ಇದೇ ಗಾಡಿಯಲ್ಲಿದ್ದಾರೆ. ನಾನು ಅವರೊಡನೆ ಮಾತಾಡಿ ಬರುವ ವರೆಗೆ ಕೋಳಿ ಟ್ರೇನು ಬಿಡಬೇಡಿರಿ" ಎಂದಂದು ಸಲಹೆಗಾರರು ನವಾಬರ ಭೆಟ್ಟಿಗೆ ಹೊರಟರು.

ನವಾಬ ಸಾಹೇಬರು ಆತುರದಿಂದ "ಪತ್ತೆಯಾಯಿತೇ?" ಎಂದು ಕೇಳಿದರು.

"ಹುಜೂರ, ಈ ಕೋಳಿ ಪರಿವಾರವೆಲ್ಲ ಮುಂಬಯಿಯ ಕೋಳಿ ಜೋಡಿಗಳದೇ. ಅವು ಸತ್ತು ಹೋಗಿದ್ದರೂ ಅವುಗಳ ಸಂತಾನವನ್ನು ರೇಲ್ವೆಯವರು ಕಾಪಾಡಿಕೊಂಡು ಬಂದಿದ್ದಾರೆ" ಸಲಹೆಗಾರರು ಹೇಳಿದರು.

" ತೋಬಾ ತೋಬಾ ! ಹೇಗಾಯಿತು ಹೀಗೆ? ಆ ಕೋಳಿಗಳ ಸಂತಾನದ ಈ ಅವಸ್ಥೆ ಕಲ್ಪನಾತೀತವಾದದ್ದು. ಇವುಗಳಲ್ಲಿ ಅಸ್ಸಲ ಜಾತಿಯ ವೀರಯೋದ್ಧ ಹುಂಜಗಳೆಷ್ಟಿವೆಯೋ ಯಾರು ಬಲ್ಲರು? ಟ್ರೇನನ್ನು ತಡೆಹಿಡಿಯಿರಿ. ಎಲ್ಲ ಕೋಳಿಗಳನ್ನು ಗೂಡುಗಳಿಗೆ ಕಳಿಸಿರಿ," ನವಾಬರು ಅಪ್ಪಣೆ ಮಾಡಿದರು.

ಸಲಹೆಗಾರ ಸಾಹೇಬರು ಖುದ್ದಾಗಿ ಹೋಗಿ ಸ್ಟೇಶನ್ ಮಾಸ್ತರರಿಗೆ ನವಾಬ ಸಾಹೇಬರ ಅಪ್ಪಣೆ ತಿಳಿಸಿದರು. ಸ್ಟೇಶನ್ ಮಾಸ್ತರರು ಕಾನೂನಿನಂತೆ ಹಾಗೆ ಮಾಡಲು ತಾವು ಅಸಮರ್ಥರೆಂಬುದನ್ನು ವಿವರಿಸಿ "ನಿಮ್ಮ ಮೂಲ ಮಾಲು ನಷ್ಟವಾಗಿರುವದರಿಂದ ನೀವು ರೇಲ್ವೆ ಶಾಖೆಯ ಮೇಲೆ ಹಾನಿ ತುಂಬಿಕೊಡಲು ದಾವೆ ಮಾಡಬಹುದು" ಎಂದು ತಿಳಿಸಿದರು.

"ಆದರೆ ಮಾಲಿನಿಂದ ಮಾಲು ಹೆಚ್ಚಾದಾಗ ಅದು ಕೂಡ ಮಾಲಕನದೇ ಆಗುವದಿಲ್ಲವೇ?"

"ಕಮರ್ಶಿಯಲ್ ಮ್ಯಾನೇಜರರನ್ನು ಫೋನಿನಲ್ಲಿ ವಿಚಾರಿಸಿ ಹೇಳುತ್ತೇನೆ."

ಕಮರ್ಶಿಯಲ್ ಮ್ಯಾನೇಜರರು ರೇಲ್ವೆ ಸಲಹೆಗಾರರನ್ನು ಕೇಳಿರಿ ಎಂದರು.

ದುರ್ದೈವದಿಂದ ರೇಲ್ವೆ ಸಲಹೆಗಾರರು ಕೆಲಸಕ್ಕಾಗಿ ಪರಊರಿಗೆ ಹೋದವರು ಮೂರನೆಯ ದಿನ ವಾಪಸು ಬಂದರು. ಅದುವರೆಗೂ ಸ್ಟೇಶನ್ನಿನಲ್ಲಿ ನವಾಬ ಸಾಹೇಬರ ಸ್ಪೆಶಲ್ ಟ್ರೇನು ಮತ್ತು ಕೋಳಿ ಸ್ಪೆಶಲ್ ಟ್ರೇನು ಎದುರುಬದುರಾಗಿ ನಿಂತಿದ್ದವು.

ಮಾಲನ್ನು ಮಾಲಿಕರಿಗೆ ಒಪ್ಪಿಸಬಹುದೆಂದು ಮೂರನೆಯ ದಿನ ರೇಲ್ವೆ ಸಲಹೆಗಾರರು ಸ್ಟೇಶನ್ ಮಾಸ್ತರರಿಗೆ ತಿಳಿಸಿದರು.

ಕೋಳಿಗಳಿಗಾಗಿ ಖರ್ಚು ಮಾಡಿದ್ದ ೧೮ ಲಕ್ಷ ರೂಪಾಯಿಗಳನ್ನು ವಸೂಲು ಮಾಡಿಕೊಂಡು ರೇಲ್ವೆ ಶಾಖೆಯು ಕೋಳಿಗಳನ್ನು ನವಾಬ ಸಾಹೇಬರ ಸಲಹೆಗಾರರಿಗೆ ಒಪ್ಪಿಸಿದರು.

ಮರುದಿನದಿಂದ ಕೋಳಿಗಳು ನವಾಬ ಸಾಹೇಬರ ಕೋಳಿ ಗೂಡುಗಳನ್ನು ಸೇರತೊಡಗಿದವು. ರೇಲ್ವೆ ಡಬ್ಬಿಗಳು ಖಾಲಿಯಾಗತೊಡಗಿದವು.

ಕೆಲ ದಿನಗಳ ನಂತರ ಕೋಳಿ ಮನೆ ಕಟ್ಟಲು ರೇಲ್ವೆ ಬೋರ್ಡಿನವರು ಅಪ್ಪಣೆ ಕೇಳಿದ್ದಕ್ಕೆ ರೇಲ್ವೆ ಮಂತ್ರಿ ಶಾಖೆಯಿಂದ ಮಂಜೂರಿ ದೊರೆಯಿತು. ಜಗತಪುರ ಸ್ಟೇಶನ್ನಿನಲ್ಲಿ ಕೋಳಿ ಮನೆಯೊಂದು ಕಟ್ಟಲ್ಪಟ್ಟಿತು.

ಆದರೆ ದುರ್ದೈವದಿಂದ ನವಾಬ ಸಾಹೇಬರು ಪರಲೋಕಯಾತ್ರೆಕೈಕೊಂಡರು. ತಮ್ಮ ಕೋಳಿ ಸಂತಾನದ ರಕ್ಷಣೆ ಮಾಡಬೇಕೆಂದು ಅವರು ಮರಣ ಸಮಯದಲ್ಲಿ ಹೇಳಿದ್ದರಾದ್ದರಿಂದ ಕೋಳಿಗಳ ಪರಿವಾರವನ್ನು ಅವರ ಸಂಬಂಧಿಕರು ನೋಡಿಕೊಳ್ಳತೊಡಗಿದರು.

✲



# ನಾನು ಓದಿ ಮೆಚ್ಚಿದ್ದು

ಶ್ರೀ ಎ. ಎನ್. ಮೂರ್ತಿರಾಯರ "ಹಗಲುಗನಸುಗಳು" ಎಂಬ ಪುಸ್ತಕದ "ಹೂವು" ಎಂಬ ಪ್ರಬಂಧದಿಂದ

ಗುಲಾಬಿ ಪರದೇಶದ ಹೂವಾದರೂ ಇಲ್ಲಿ ಬಂದು ರಾಜ್ಯವನ್ನು ಕಟ್ಟಿದೆ. ಅದನ್ನು ನೋಡಿದಾಗ ಮನಸ್ಸು ಈ ಪ್ರಪಂಚವನ್ನು ಬಿಟ್ಟು ಬೇರೊಂದು ಕಲ್ಪನಾ ಪ್ರಪಂಚವನ್ನು, ರೋಮಾನ್ಸ ಪ್ರಪಂಚವನ್ನು ಪ್ರವೇಶಿಸಿ ಅಲೆಯತೊಡಗುವುದು. ಗುಲಾಬಿಯ ಆವರಣವೇ ರೋಮಾನ್ಸ ಆವರಣ. ಚಿಕ್ಕಂದಿನಿಂದಲೂ ನನ್ನ ಮನಸ್ಸು ಆ ಹೂವಿನೊಡನೆ ಯಾವುದೋ ಸಂಬಂಧಗಳನ್ನು ಕಲ್ಪಿಸಿಕೊಂಡಿದೆ. ಇರಾನಿನ ರಾಜರ ಶೃಂಗಾರವನ, ಇಲ್ಲವೇ ಕಾಶ್ಮೀರದ ಷಾಲಿಮರ ತೋಟ, ಮೊಗಲ ಬಾದಶಹರ ಉಪವನ ಮತ್ತು ರಂಗಮಹಲು; ಅದರ ಉಪ್ಪರಿಗೆಯ ಮೇಲೆ ನಿಂತು ಯಮುನೆಯು ಪ್ರವಹಿಸುತ್ತಿರುವದನ್ನು ನೋಡುವ ಸಂಧ್ಯಾರಾಗ ರಂಜಿತವಾದ ಮುಖಗಳುಳ್ಳ ರಮಣಿಯರು ಗುಲಾಬಿ ತುಂಬಿದ ನೀರಿನಲ್ಲಿ ಸ್ನಾನ ಮಾಡುವಾಗ ಅತ್ತರನ್ನು ಕಂಡುಹಿಡಿದು ಜಗತ್ತಿಗೆ ದಿವ್ಯ ಪರಿಮಳವನ್ನು ಒದಗಿಸಿಕೊಟ್ಟ ಯವನ ಸುಂದರಿ ನೂರಜಹಾನ ಈ ನೆನಪುಗಳೆಲ್ಲ ಮನಸ್ಸಿಗೆ ಬರುವವು. ಗುಲಾಬಿಯು ಸಾಮಾನ್ಯವಾಗಿ ಒರಟು ಜನರ ಕೈಗೆ ಸಿಕ್ಕುವಂಥ ಹೂವಲ್ಲ. ಅದನ್ನು ಬೆಳೆಸಲು ಬೇರೆ ಸಂಸ್ಕಾರವೇ ಬೇಕು. ನಿಯಮಿತ ಸೇವೆ ಬೇಕು. ಅದು ಹೂವುಗಳ ರಾಣಿ. ಗುಲಾಬಿಯೆಂದರೆ ಗುಲಾಬಿ ಬಣ್ಣದ ಗುಲಾಬಿ. ಉಳಿದವುಗಳು ನವಿಲನ್ನು ಅನುಕರಿಸುವ ಕೆಂಬೂತಗಳಂತೆ. ಬಣ್ಣ, ಮಾಟ, ಕಂಪು ಎಲ್ಲವನ್ನು ನೋಡಿದರೆ ಅದಕ್ಕೆ ಸರಿಸಮಾನವಾದ ಹೂವು ಇನ್ನೊಂದಿಲ್ಲ. ಕಮಲಕ್ಕೆ ಒಂದು ತೆರನಾದ ಗಾಂಭೀರ್ಯ ಹೆಚ್ಚಿರಬಹುದು. ಆದರೆ ಗುಲಾಬಿಗಿರುವ ಸ್ವರ್ಗೀಯ ವರ್ಣವೂ, ಕೋಮಲತೆಯೂ, ಹೊಸ ಯೌವ್ವನದ ಸೊಂಪೂ ಇಲ್ಲ. ನಿಜವಾಗಿಯೂ ಅದು ಹೂವುಗಳ ರಾಣಿ.

ಅಯ್ದುವರು "ಕಮಲಾತನಯ"

ಶ್ರೀ ವಿ. ಎಂ. ಇನಾಮದಾರರ (ಅನುವಾದ) "ಎರಡು ಧ್ರುವ" ದಿಂದ

ಕಾಲದ ಒಂದು ಕ್ಷಣವು ಎಷ್ಟು ಚಿಕ್ಕದೆಂದು ಅನಿಸುತ್ತದೆ. ಆದರೆ ಕ್ಷುದ್ರ ಜಂತುವನ್ನು ಸೂಕ್ಷ್ಮದರ್ಶಕ ಯಂತ್ರದಿಂದ ನೋಡಿದರೆ ಅದರ ಶರೀರದೊಳಗಿನ ತೊಡಕು ತೊಡಕಿನ ಕಲ್ಪನೆ ಬರುವಂತೆ, ಕಾಲದ ಒಂದು ಕ್ಷಣವನ್ನೂ ಭಾವನೆಯ ದೃಷ್ಟಿಯಿಂದ ನೋಡಿದರೆ ಅದರಲ್ಲಿ ಇಡೀ ಬ್ರಹ್ಮಾಂಡವೇ ಕಾಣತೊಡಗುತ್ತದೆ. ಸಮುಪ್ರದ ಒಂದೊಂದು ಹನಿಯಲ್ಲಿಯೂ ಹೊಳಪೂ ಉಪ್ಪೂ ಎರಡೂ ಕೂಡಿಕೊಂಡಂತೆ ಅನಂತಕಾಲದ ಒಂದು ಕ್ಷಣದಲ್ಲಿಯೂ ಜಗದ ಸುಖದುಃಖಗಳೆಲ್ಲವೂ

ಸಮರಸವಾಗಿ ಮೆರೆಯುತ್ತಿರುವವು. ಅರಮನೆಯಲ್ಲಿ ತುಪ್ಪಳದ ಹಾಸಿಗೆಯ ಮೇಲೆ ತಳಿಮಳಿಸುವ ಅರಸು, ಫುಟಪಾಥದ ಮೇಲೆ ಮುದುಡಿಕೊಂಡು ಗೊರಕೆ ಹೊಡೆಯುವ ತಿರುಕ, ವ್ಯಸನಿಯಾದ ಗಂಡನ ದಾರಿಕಾಯುತ್ತಿರುವ ಹೆಂಡತಿಯ ಕಣ್ಣೀರು, ಅದೇ ಗಂಡನೊಡನೆ ವಿಲಾಸಮಗ್ನಳಾದ ವೇಶ್ಯೆಯ ಬಟ್ಟಲಲ್ಲಿಯ ಮದ್ಯ, ಹೊಟ್ಟೆಗಾಗಿ ಕನ್ನ ಕೊರೆಯಲು ಹೊರಟ ಮನುಷ್ಯನ ಎದೆಗುದಿ, ಕಳ್ಳರ ಭೀತಿಯಿಂದ ಗಕ್ಕನೆ ಎಚ್ಚರಿಯುವ, ದುಡಿಯದೆ ದುಡ್ಡು ಕೂಡುಹಾಕಿದ ಧನಿಕನ ಚಿಂತೆ, ಕನಸಿನಲ್ಲಿ ತನ್ನ ಸತ್ತಗಂಡನ ತೋಳಿನ ಮೇಲೆ ತಲೆಯಿಡಲಿಕ್ಕೆ ಸಿಕ್ಕಿದ್ದರಿಂದ ತರುಣಿ ವಿಧವೆಯ ನಿದ್ರಿತ ಮುಖದ ಮೇಲೆ ಮೂಡುವ ಆನಂದ, ಮಗ್ಗುಲಲ್ಲಿಯೇ ಮಲಗಿದ ಪ್ರಿಯಪತ್ನಿಯು ಸತ್ತಂತೆ ಭಾಸವಾಗಲು ತರುಣ ಪತಿಯ ಮೋರೆಯಲ್ಲಿ ತೋರುವ ಸಂಕಟ—ಜಗತ್ತಿನಲ್ಲಿಯ ಪರಸ್ಪರ ವಿರೋಧಿಗಳಾದ ಭಾವನೆಗಳ ಸುಖದುಃಖಗಳ ರಾಸಾಯನಿಕ ಮಿಶ್ರಣವೇ ಮಧ್ಯರಾತ್ರಿಯ ಒಂದು ಕ್ಷಣ.

ಆಯ್ದವರು : ಜಿ. ವ್ಹಿ. ಹುದಲಿ, ಹುಬ್ಬಳ್ಳಿ.

ಶ್ರೀ ಡಿವಿಜಿಯವರ "ಉಮರನ ಒಸಗೆ"ಯಿಂದ

ಭತ್ತದ ಕಾಳಿಗೆ ಮೋಕ್ಷ, ಅದು ಅನ್ನವಾಗಿ ಊಟದೆಲೆಯಲ್ಲಿ ಇಳಿದಾಗ. ಆದರೆ ಹೊಟ್ಟಲ್ಲದೇ ಭತ್ತ ಬೆಳೆಯದು; ಹೊಟ್ಟದ್ದು ಅಡಿಗೆಯಾಗದು. ಬಿಸಿಲು, ಗಾಳಿ, ಒರಳು, ಒನಕೆ, ನೀರು, ಬೆಂಕಿ ಇಷ್ಟರ ಸಂಸ್ಕಾರದಿಂದ ನೆಲ್ಲಿಗೆ ತನ್ನ ಹೊಟ್ಟಿನಿಂದಲೂ ತನ್ನ ಗಟ್ಟಿತನದಿಂದಲೂ ಮುಕ್ತಿ. ಮನುಷ್ಯ ಜೀವಕ್ಕೆ ಇಂದ್ರಿಯಗಳ ಹಿಡಿತದಿಂದ ಬಿಡುಗಡೆಯಾಗುವದೂ ಹಾಗೆಯೇ,-ಸಂಸಾರ ಸಂಸ್ಕಾರದಿಂದ ಸುಖ ಸಾಧನ ಯತ್ನದ ಆಯಾಸ ನಿರಾಶೆಗಳ ಕಾವು ಜೀವವನ್ನು ಬೇಯಿಸಿ ಮೆದುಮಾಡಬೇಕು. ಜೀವ ಪುಟಕ್ಕೆ ಬೇಕಾದದ್ದು ಒಂದು ಕಡೆ ಕಾವ್ಯಲೋಕದ ರಸಾನುಭವಾಗ್ನಿಯಾದರೆ ಇನ್ನೊಂದು ಕಡೆ ಅದು ವಾಸ್ತವ ಲೋಕದ ಸಂಸಾರಾನುಭವಾಗ್ನಿ.

ಆಯ್ದವರು : "ಜೈಶಂಕರ" ಕಾನಸೂರ

ಶ್ರೀ ದಿನಕರ ದೇಸಾಯಿಯವರ "ಕವನಸಂಗ್ರಹ" ದಿಂದ

ಹೂಗಳ ಮುತ್ತು
ಗಾಳಿಗೆ ಗೊತ್ತು
ಗಿರಿಗಳ ಮುತ್ತು
ಮುಗಿಲಿನ ಸೊತ್ತು.

ಮೂಡುವ ಹೊತ್ತು
ಮೂಡಲ ಮುತ್ತು
ಪಡುವಲ ದಿಕ್ಕಿಗೆ
ಸಂಜೆಗೆ ಇತ್ತು.

ಚಂದ್ರನ ಮುತ್ತು
ಹುಣ್ಣಿಮೆಗಿತ್ತು
ಸೂರ್ಯನ ಮುತ್ತು
ವಿಶ್ವದ ಸುತ್ತು.

ತಾಯಿಯ ಬಾಯಿಯ ಮೋಹದ ಮುತ್ತು
ಏನೂ ಅರಿಯದ ಕೂಸಿಗೆ ಗೊತ್ತು
ಎಲ್ಲಾಕಡೆಯಲಿ ದೇವರ ಮುತ್ತು
ಭಾವತರಂಗದ ಕವಿಗೇ ಗೊತ್ತು.

ಆಯ್ದವರು : ಶ. ವೆಂ. ಪಾ., ಧಾರವಾಡ




# ಕ್ಯಾಸ್ಟರ್‌ಬ್ರಿಜ್ ನಗರಾಧ್ಯಕ್ಷ

ಮೂಲ: ಥಾಮಸ್ ಹಾರ್ಡಿ (೧೮೪೦-೧೯೨೮) * ಸಂಗ್ರಹಾನುವಾದ: ವಿ. ಎಂ. ಇನಾಂದಾರ

ಥಾಮಸ್ ಹಾರ್ಡಿ ಇಂಗ್ಲಂಡಿನ ಡಾರ್ಸೆಟ್ ಗ್ರಾಮದಲ್ಲಿ ಒಬ್ಬ ಕಲ್ಲುಕುಟಿಗನ ಮಗನಾಗಿ ಹುಟ್ಟಿದ. ಅವನು ಕಲಿತದ್ದು ವಾಸ್ತುಶಿಲ್ಪ ಕಲೆ; ಆದದ್ದು ಮಹಾ ಕಾದಂಬರಿಕಾರ. ಅವನ ಹಲವು ಕಾದಂಬರಿಗಳು ಅತ್ಯುನ್ನತ ಶ್ರೇಣಿಯವಾಗಿದ್ದಂತೆ ನೈತಿಕವಾದಿಗಳಿಂದ ತುಂಬ ತೆಗಳಿಕೆಗೂ ಗುರಿಯಾದವು. ಟೆಸ್, ಜೂಡ್ ದಿ ಒಬ್‌ಸ್ಕ್ಯೂರ್ ಇವು ಈ ಸಾಲಿನಲ್ಲಿ ಬರುತ್ತವೆ. ಅವನು ಪ್ರಾರಂಭದಲ್ಲಿ ಉತ್ತಮ ಭಾವಗೀತಗಳನ್ನೂ ಕೊನೆಗೆ ಒಂದು ಮಹಾಕಾವ್ಯವನ್ನೂ ಬರೆದನು. ೧೯೧೦ರಲ್ಲಿ ಅವನಿಗೆ ಆರ್ಡರ್ ಆಫ್ ಮೆರಿಟ್ ಬಹುಮಾನ ಸಿಕ್ಕಿತು. "ಕ್ಯಾಸ್ಟರ್‌ಬ್ರಿಜ್ ನಗರಾಧ್ಯಕ್ಷ" (Mayor of Casterbridge) ಹಾರ್ಡಿಯ ಅತ್ಯುತ್ತಮ ಕಾದಂಬರಿಗಳಲ್ಲೊಂದು. ಅದೊಂದು ಮನೋವೇಧಕ ದುರಂತ ಕಥೆ. ಇದರ ಕಥಾಸಂಗ್ರಹವನ್ನು ಪ್ರೊ. ಇನಾಂದಾರರು ತಮ್ಮ ಸರಳ ಮಧುರ ಶೈಲಿಯಲ್ಲಿ ಮಾಡಿದ್ದಾರೆ.

# ಕ್ಯಾಸ್ಟರ್‌ಬ್ರಿಜ್ ನಗರಾಧ್ಯಕ್ಷ

ಕಳೆದ ಶತಮಾನದ ಕತೆ. ಸಂಜೆಯ ಹೊಂಬೆಳಕಿನಲ್ಲಿ ಸುಮಾರು ಇಪ್ಪತ್ತೊಂದು ವಯಸ್ಸಿನ ಯುವಕನೊಬ್ಬ ತನ್ನ ಹೆಂಡತಿ ಮತ್ತು ಹೆಣ್ಣು ಮಗುವಿನೊಂದಿಗೆ ವೆಡನ್ ಪ್ರಾಯರ್ಸ್ ಎಂಬ ಹಳ್ಳಿಯ ಹಾದಿಯನ್ನು ತುಳಿಯುತ್ತಿದ್ದಾನೆ. ಕಂಕುಳಲ್ಲಿ ಮಗು-ವನ್ನು ಹೊತ್ತು ಸಾಗುತ್ತಿದ್ದ ಆ ಹೆಣ್ಣು ಮಗಳೊಡನೆ ಯುವಕ ಮಾತನಾಡುತ್ತಿಲ್ಲ. ಹೊಲಗಳಲ್ಲಿ ಕೆಲಸ ಮಾಡುತ್ತಿದ್ದ ಆತ ಕೆಲಸ ಹುಡುಕಲಿಕ್ಕೆಂದು ಹೊರಟ ಹಾಗಿದೆ. ಕೆಲಸವಿಲ್ಲದಕ್ಕಾಗಿ ಆತ ವ್ಯಗ್ರಚಿತ್ತನಾಗಿದ್ದಾನೆ. ದಾರಿ ಸವೆಯುತ್ತಿದೆ.

ಆ ಹಳ್ಳಿಯನ್ನು ತಲುಪಿದಾಗ ಮುಚ್ಚಂಜೆಯಾಗಿತ್ತು. ಇಬ್ಬರೂ ದಣಿದಿದ್ದರು. ಮಗು ನಿದ್ರೆ ಹೋಗುವದರಲ್ಲಿತ್ತು. ಎಲ್ಲಿಯಾದರೂ ಉಪ-ಹಾರ ತೆಗೆದುಕೊಳ್ಳಬೇಕೆನ್ನುವಷ್ಟರಲ್ಲಿ "ಇಲ್ಲಿ ಗೋಧಿಯ ಗಂಜಿ ಸಿಕ್ಕುತ್ತದೆ" ಎಂಬ ಹಲಗೆಯನ್ನುಳ್ಳ ಒಂದು ಸಾಮಾನ್ಯ ಅಂಗಡಿಯ ಕಡೆಗೆ ಅವರ ಲಕ್ಷ್ಯ ಸರಿಯಿತು. ಹೆಂಡತಿ ಸೂಸನ್‌ಳಿಗೆ ಅಲ್ಲಿ ಹೋಗುವ ಮನಸ್ಸಿರಲಿಲ್ಲ. ಆದರೆ ಹೆಂಚರ್ಡ ಆಗಲೇ ಒಳಗೆ ಹೋಗಿಬಿಟ್ಟಿದ್ದ. ಬದಿಯಲ್ಲಿ ಇನ್ನೊಂದು ಅಂಗಡಿಯಿದ್ದರೂ ಅಲ್ಲಿಗೇ ಹೋಗಬೇಕೆಂದು ಆತನಿಗೆ ಹೇಗೆ ಮನಸ್ಸಾಯಿತೊ!

ಒಳಗಡೆ ಹೋಗಿಯಾದ ಒಂದೆರಡು ಕ್ಷಣಗಳಲ್ಲಿಯೆ ಹೆಂಚರ್ಡನಿಗೆ ಮನವರಿಕೆಯಾಗಿತ್ತು— ಆ ಅಂಗಡಿಯನ್ನು ನಡಸುತ್ತಿದ್ದ ಹಳೆಯ ಮುದುಕಿ ಗೋಧಿಯ ಗಂಜಿಯಲ್ಲಿ ಗುಪ್ತವಾಗಿ ಮದ್ಯವನ್ನು ಸೇರಿಸಿ ಮಾರಾಟಮಾಡುತ್ತಿದ್ದಳು ಎಂದು. ಕಣ್ಸನ್ನೆಯಿಂದ ಅಂಥ ಗಂಜಿಯನ್ನು ಬೇಡಿದ, ಕುಡಿದ. ಇದನ್ನು ಕಂಡು ತಿಳಿದ ಸೂಸನ್ ಪತಿಯನ್ನು ಅಲ್ಲಿಂದ ಕರೆದೊಯ್ಯಬೇಕೆಂದು ಬೇಕಾದಷ್ಟು ಬೇಡಿದರೂ ಆತ ಅಲ್ಲಿಂದ ಕದಲಲಿಲ್ಲ. ಮೂರು ನಾಲ್ಕು ಬಾರಿ ಕುಡಿಯುವಷ್ಟರಲ್ಲಿ ಹೆಂಚರ್ಡನ ಮಾತಿನ, ಮನಸ್ಸಿನ ತೂಕ ತಪ್ಪುವದರಲ್ಲಿತ್ತು.

ಅಂದು ಆ ಹಳ್ಳಿಯಲ್ಲಿ ನಡೆದುಹೋದ ಜಾತ್ರೆಯ ಕೊನೆಯ ದಿನ. ಮಾರಾಟವಾಗದೆ ಉಳಿದ ಕೆಲವು ಹಳೆಯ ಕುದುರೆಗಳನ್ನು ಯಾರೊ ಕೂಗಿ ಮಾರಾಟ ಮಾಡಬಯಸುತ್ತಿದ್ದರು. ಆ ದನಿಯನ್ನು ಕೇಳಿ ಉನ್ಮತ್ತನಾದ ಹೆಂಚರ್ಡ ತಾನು ಹೆಂಡತಿಯನ್ನು ಮಾರುತ್ತೇನೆಂದು ಮೊದಲುಮಾಡಿದ.

"ಇದೆಂಥ ಚೇಷ್ಟೆ? ಸಾಕು, ಮೈಕೆಲ್ ; ನೀನು ಹಾಗೆ ಹೇಳಿದರೆ ನಾನು ನಿಜವಾಗಿಯೂ ಹೊರಟು ಹೋಗುತ್ತೇನೆ" ಎಂದು ಆಕೆ ಹೇಳಿದಳು.

"ಚೇಷ್ಟೆ ಎಂದು ಯಾರು ಹೇಳಿದರು? ನಿಜವಾಗಿಯೂ ಮಾರಿಬಿಡುತ್ತೇನೆ. ಇದ್ದಾರೆಯೆ ಯಾರಾದರೂ ಇಲ್ಲಿ ಈ ಸುಂದರಿಯನ್ನು ಕೊಳ್ಳಬಯಸುವವರು?" ಎಂದನಾತ.

ಅಂಗಡಿಯಲ್ಲಿ ಕುಳಿತಿದ್ದ ಕೆಲಸವಿಲ್ಲದ ಉಳಿದವರು, "ಐದು ಶಿಲಿಂಗಿಗೆ ಕೊಡುತ್ತೀಯಾ?" ಎಂದು ನಗೆಯಾಡಿದರು.

"ಅದೆಲ್ಲ ಸಾಧ್ಯವಿಲ್ಲ. ಐದು ಗಿನಿಗಳಿಗೆ ಒಂದು ಬಿಡಿಗಾಸೂ ಕಡಿಮೆಯಾಗುವದಿಲ್ಲ. ಬೇಕಾದರೆ ಹೇಳಿ."

ಅವನು ಹೀಗೆ ಕೂಗುತ್ತಿದ್ದ. ಹೊತ್ತಿಗೆ ಸ[illegible] ಯಾಗಿ ನಾವಿಕನ ವೇಷದ ಯುವಕನೊಬ್ಬ ಪ್ರವೇಶಿಸಿದ. "ಯಾರಿಗೂ ಬೇಡವೆ?" ಎಂದು ಹೆಂಚರ್ಡ ಕೊನೆಯಾಗಿ ಕೇಳುತ್ತಿದ್ದುದಕ್ಕೆ "ಆಗಬಹುದು, ನಾನು ಕೊಳ್ಳುತ್ತೇನೆ" ಎಂದು ಯುವಕ ಮುಂದುವರಿದು ಐದು ಪೌಂಡಿನ ನೋಟುಗಳನ್ನು, ಮೇಲೆ ಐದು ಶಿಲಿಂಗ ನಾಣ್ಯವನ್ನು ಆತನ ಮುಂದಿರಿಸಿದ. ಸುತ್ತಲಿನವರಿಗೆ ಗಾಬರಿಯಾಯಿತು. ಸೂಸನ್ ಶಿಲಾಮೂರ್ತಿಯಂತೆ ನಿಂತಿದ್ದಳು. ಹೆಂಚರ್ಡ ಹಣವನ್ನು ಜೇಬಿಗೆ ಹಾಕಿದ. ನೆಟ್ಟದೃಷ್ಟಿಯಿಂದ ಆಕೆ ತನ್ನ ಪತಿಯನ್ನು ನೋಡಿದಳು. ನಿರುಪಾಯವಾಗಿ ಎಂಬಂತೆ ಮಗುವಿನೊಂದಿಗೆ ನಾವಿಕನನ್ನು ಹಿಂಬಾಲಿಸಿ ಹೊರಟುಹೋದಳು.

ಅಲ್ಲಿಯೆ ಮೇಜಿನ ಮೇಲೆ ತಲೆ ಇಟ್ಟು ನಿದ್ರೆ ಹೋದ ಹೆಂಚರ್ಡನಿಗೆ ತಾನು ಮಾಡಿದ್ದೇನು ಎಂಬುದರ ಪೂರ್ತಿ ಕಲ್ಪನೆಯಾದದ್ದು ಮರುದಿನ

ಬೆಳಿಗ್ಗೆ. ಎಚ್ಚರವಾದಾಗ ಸುತ್ತಲೂ ಯಾರೂ ಇರಲಿಲ್ಲ. ಮನಸ್ಸನ್ನಾವರಿಸಿದ ಮದ್ಯದ ಮುಸುಕು ಮರೆಯಾಗಿತ್ತು. ನಿಧಾನವಾಗಿ ಎಲ್ಲವೂ ಜ್ಞಾಪಕಕ್ಕೆ ಬಂದಿತು. ನಿರ್ವಿಣ್ಣನಾಗಿದ್ದರೂ ಪರಿತಪಿಸಿ ಅಲ್ಲಿಂದೆದ್ದು ಎಲ್ಲೆಲ್ಲಿಯೋ ಸೂಸನ್‌ಳಿಗಾಗಿ, ಮಗುವಿಗಾಗಿ ಹುಡುಕಿದ. ಇನ್ನೊಬ್ಬರನ್ನು ಕೇಳುವದೂ ಕಷ್ಟವಾಗಿತ್ತು. ಅಲೆಯುತ್ತಿದ್ದಾಗ "ಈ ಮದ್ಯದಿಂದಲ್ಲವೆ ಇಷ್ಟಾದದ್ದು ?" ಎಂದು ಕಡು ಪಶ್ಚಾತ್ತಾಪಪಟ್ಟ. ದೂರದಲ್ಲಿ ಕಾಣುತ್ತಿದ್ದ ಒಂದು ಚರ್ಚಿನೆಡೆಗೆ ಬಂದು ದೇವರೆದುರು ಒಂದು ಘನವಾದ ಪ್ರತಿಜ್ಞೆಯನ್ನು ಮಾಡಿದ: "ಇದು ವರೆಗೆ ನಾನ್ನು ಬದುಕಿದ ಒಂದೊಂದು ವರ್ಷಕ್ಕೆ ಸರಿಸಮನಾಗಿ ಇನ್ನು ಇಪ್ಪತ್ತೊಂದು ವರ್ಷ ಕಾಲ ನಾನು ಮದ್ಯವನ್ನು ಮುಟ್ಟಿದ್ದಾದರೆ ನನ್ನ ಅಂಗಾಂಗಗಳೂ ವಿಕಲವಾಗಲಿ" ಎಂದು ಘೋರ ಶಪಥವನ್ನು ಮಾಡಿ ದೇಶದಾದ್ಯಂತವೂ ಹೆಂಡತಿಗಾಗಿ, ಮಗುವಿಗಾಗಿ ಅಲೆದಾಡಿದ. ಸಮುದ್ರತೀರದ ಒಂದೆಡೆಯಲ್ಲಿ ಅಂಥ ಒಬ್ಬ ಹೆಣ್ಣುಮಗಳು ಹಡಗವನ್ನೇರಿ ಹೊರಟುಹೋದ ಳೆಂಬ ಸಮಾಚಾರ ದೊರಕಿದಾಗ ಆಸೆಯನ್ನು ತೊರೆದು ಹಿಂದಿರುಗಿದ. ತಿಂಗಳುಗಟ್ಟಲೆ ಹುಡುಕಿದರೂ ಅವರು ಸಿಕ್ಕದೆ ಹತಾಶನಾಗಿ ಕೊನೆಗೆ ಕ್ಯಾಸ್ಟರ್‌ಬ್ರಿಜ್ ನಗರವನ್ನು ಸೇರಿದ.

( ೨ )

ಈ ಮಾತು ನಡೆದು ಹದಿನೆಂಟು ವರ್ಷಗಳಾಗಿ ಹೋಗಿವೆ. ವೆಡನ್‌ಪ್ರಾಯರ್ಸ ಹಳ್ಳಿಯ ಅದೇ ದಾರಿಯನ್ನು ಸೂಸನ್ ತುಳಿಯುತ್ತಿದ್ದಾಳೆ. ಎಲ್ಲವೂ ಮೊದಲಿನ ಹಾಗೆಯೆ ಇದೆ. ವ್ಯತ್ಯಾಸ ಇಷ್ಟೆ: ಅಂದು ಕಂಕುಳಲ್ಲಿದ್ದ ಮಗು ಇಲ್ಲ. ಅದಕ್ಕೆ ಬದಲಾಗಿ ಯುವತಿಯೊಬ್ಬಳು ಜೊತೆಯಲ್ಲಿ ಹೆಜ್ಜೆ ಹಾಕುತ್ತಿದ್ದಾಳೆ. ಆಕೆಯೆ ತಾಯನ್ನು ಕೇಳಿದಳು: "ಯಾಕಮ್ಮ ನಾವು ಇಲ್ಲಿಗೆ ಹೊರಟದ್ದು ?"

"ನಿನ್ನ ತಂದೆ ನ್ಯೂಸನ್‌ನನ್ನು ನಾನು ಮೊದಲು ಕಂಡದ್ದು ಇಲ್ಲಿಯೆ!" ಎಂದು ಸೂಸನ್ ಹೇಳಿದಳು.

"ಅಯ್ಯೋ. ಆತನಂತೂ ಮುಳುಗಿಹೋದನಲ್ಲ!" ಎಂದು ಯುವತಿ ಹೇಳುತ್ತಿರುವಾಗ ಸೂಸನ್ "ನಾವೀಗ ಹುಡುಕುತ್ತಿರುವ ಸಂಬಂಧಿಕನನ್ನಾದರೂ ನಾನು ಕೊನೆಯಾಗಿ ನೋಡಿದ್ದು ಇಲ್ಲಿಯೆ" ಎಂದಳು. "ಆತ ನಮಗೆ ಹತ್ತಿರದವನೆ?" ಎಂದುದಕ್ಕೆ "ಹುಂ. ಮದುವೆಯ ಮೂಲಕ ಸಂಬಂಧಿಕ," ಎಂದಿಷ್ಟೇ ಹೇಳಿ ಸುಮ್ಮನಾದಳು. ತನ್ನ ಹಿಂದಿನ ಇತಿಹಾಸವನ್ನು ಮಗು-ಎಲಿಝಾಬೆತ್ತಳಿಗೆ ಹೇಳುವದು ಸೂಸನ್‌ಳಿಗೆ ಬೇಕಿರಲಿಲ್ಲ . . . .

ಎಂದಿನಂತೆಯೆ ಹಳ್ಳಿಯ ಜಾತ್ರೆ ಮುಗಿದ ಹಾಗಿತ್ತು. ಅಂದು ಗೋದಿಯ ಗಂಜಿಯನ್ನು ಕೊಟ್ಟ ಹಳೆಯ ಮುದುಕಿಯ ಅಂಗಡಿಯೂ ಇತ್ತು. ಆಕೆಯನ್ನು ವಿಚಾರಿಸಲಾಗಿ "ಯಾವ ಗಂಡ ಯಾವ ಹೆಂಡತಿಯನ್ನು ಯಾವ ಕಾಲಕ್ಕೆ ಮಾರಿದನೊ! ಅದು ಯಾವ ದೊಡ್ಡ ವಿಷಯ ಎಂದು ನನಗೆ ಜ್ಞಾಪಕದಲ್ಲಿರಬೇಕು? ಒಂದು ಖೂನಿಯೊ, ಕಳವೋ ಅಥವಾ ಇನ್ನೇನೊ ಆದರೆ ಮಾತು ಬೇರೆ" ಎಂದಳು. ಆಮೇಲೆ ಜ್ಞಾಪಿಸಿಕೊಂಡು ಅವಳು ಹೇಳಿದಳು: "ಆದರೂ ಆ ಮನುಷ್ಯ ಮರುವರ್ಷ ಬಂದಿದ್ದನೆಂದು ಜ್ಞಾಪಕ. ಈಗ ಎಲ್ಲಿದ್ದಾನೆಯೊ ಯಾರು ಹೇಳಬೇಕು? ಹಾಂ, ಹೌದು. ಯಾರಾದರೂ ಹೆಂಗಸು ತನ್ನನ್ನು ಕೇಳಿದರೆ ತಾನು ಕ್ಯಾಸ್ಟರ್‌ಬ್ರಿಜ್‌ನಲ್ಲಿದ್ದೇನೆಂದು ಹೇಳಬೇಕೆಂದು ಹೇಳಿದ್ದ. ಹೌದು."

ಆ ಸುಳಿವಿನ ಮೇಲಿಂದ ತಾಯಿಮಕ್ಕಳಿಬ್ಬರೂ ಮುಂದೆ ಕೆಲ ದಿನಗಳಲ್ಲಿ ಕ್ಯಾಸ್ಟರ್‌ಬ್ರಿಜ್ ನಗರವನ್ನು ತಲುಪಿದರು. ದಾರಿಹೋಕರ ಮಾತುಗಳ ಮೇಲಿಂದ ಹೆಂಚರ್ಡ ಅಲ್ಲಿದ್ದನೆಂದು ಮಾತ್ರವಲ್ಲದೆ ನಗರಾಧ್ಯಕ್ಷನಾಗಿದ್ದನೆಂದೂ ದೊಡ್ಡ ಧಾನ್ಯದವಸಗಳ ವ್ಯಾಪಾರಿಯಾಗಿದ್ದನೆಂದೂ ತಿಳಿಯಿತು. ತನ್ನ ಭವಿಷ್ಯದ ಬಗೆಯಲ್ಲಿ ಭರವಸೆಯನ್ನಿಟ್ಟುಕೊಂಡ ಎಲಿಝಾಬೆತ್‌ಳಿಗೆ ಎಲ್ಲಿಲ್ಲದ ಸಂತೋಷವೆನಿಸಿತು. ಊರಲ್ಲಿ ರಾತ್ರಿಯನ್ನು ಹೇಗೆ ಕಳೆಯುಬೇಕೆಂಬ ಬಗೆಯಲ್ಲಿ ಒಬ್ಬಳನ್ನು ಸೂಸನ್ ವಿಚಾರಿಸಿದಾಗ "ಅಯ್ಯೋ

ಏನು ಹೇಳೋಣ, ಒಂದು ಒಳ್ಳೆಯ ರೊಟ್ಟಿಗೂ ಗತಿಯಿಲ್ಲದಾಗಿದೆ ಈ ಊರಲ್ಲಿ. ಇದಕ್ಕೆಲ್ಲ ಕಾರಣವೆಂದರೆ ಅಲ್ಲಿ ನಗರ ಸಭೆಯಲ್ಲಿ ವಾದ್ಯ ವೈಭವದಿಂದ ಇದೀಗ ಊಟ ಮಾಡುತ್ತಿದ್ದಾನಲ್ಲ, ಅವನೇ ಕಾರಣ'' ಎಂದು ದೂರಿಕೊಂಡಳು.

ಅವರಿಬ್ಬರೂ ಅಲ್ಲಿಗೆ ನಡೆದು ಬಂದಾಗ ನಗರಾಧ್ಯಕ್ಷರ ಮೇಜವಾನಿ ನಡೆದಿತ್ತು. ಸದಸ್ಯರೆಲ್ಲರೂ ವಿರಾಜಮಾನರಾಗಿದ್ದರು. ಊರ ಬಡಜನ ಹೊರಗಿನಿಂದಲೇ ದೊಡ್ಡವರ ವೈಭವವನ್ನು ನೋಡುತ್ತ ನಿಂತಿದ್ದರು. ಹೀಗೆ ನೋಡುತ್ತಿದ್ದವರಲ್ಲಿ ಅದೇ ಆ ಊರಿಗೆ ಬಂದು ರಾತ್ರಿಯಮಟ್ಟಿಗೆ ತಂಗಿ ಮುಂದೆ ಸಾಗಬೇಕೆಂದಿದ್ದ ಫಾರ್ಫ್ರೆ ಎಂಬ ಸ್ಕಾಚ್ ಯುವಕನೊಬ್ಬ. ಊಟ ಮುಗಿಯಿತು. ಸದಸ್ಯರಲ್ಲಿ ಕೆಲವರು ಹೆಂಚರ್ಡನು ಊರಿಗೆ ಪೂರೈಸಿದ ಕೆಟ್ಟ ಗೋದಿಯ ಬಗ್ಗೆ ಪ್ರಶ್ನೋತ್ತರಕ್ಕೆ ಪ್ರಾರಂಭಿಸಿದರು. ಇದಿರುಮಾತನ್ನು ಕೇಳದ ಪ್ರತಿಷ್ಠೆಯನ್ನು ನಗರಾಧ್ಯಕ್ಷನಾದ ಹೆಂಚರ್ಡ ಗಳಿಸಿದ್ದ. ಅವನಿಗೆ ಅಂಥ ಪ್ರಶ್ನೆಗಳು ಬೇಡವಾಗಿದ್ದವು. ನಿಷ್ಠುರವಾಗಿ ಆತ ಹೇಳುತ್ತಿದ್ದ: "ಆ ಗೋದಿಯನ್ನು ನಾನು ಮಾಡಲಿಲ್ಲವಲ್ಲ. ಬೆಳೆಯು ಕೆಟ್ಟುಹೋದರೆ ನಾನೇನು ಮಾಡುವಹಾಗಿದ್ದೇನೆ? ಕೆಟ್ಟುಹೋದ ಗೋದಿಯನ್ನು ಸರಿಪಡಿಸುವ ವಿಧಾನವನ್ನು ನನಗೆ ಹೇಳಿ; ಎಂದರೆ ಒಳ್ಳೆಯದನ್ನು ಬದಲಾಗಿ ಒದಗಿಸುತ್ತೇನೆ. ಆದರೆ ಹಾಗೆ ಮಾಡುವದು ಸಾಧ್ಯವಿಲ್ಲ" ಎಂದು ಹೇಳಿ ಅವರ ಬಾಯಿ ಮುಚ್ಚಿಸಿದ.

ಈ ಮಾತನ್ನು ಕೇಳಿದ ಫಾರ್ಫ್ರೆ ತಕ್ಷಣ ಒಂದು ಚೀಟಿಯನ್ನು ಬರೆದು ಹೆಂಚರ್ಡನೆಡೆಗೆ ಕಳುಹಿದ. ಕೆಟ್ಟುಹೋದ ಗೋದಿಯನ್ನು ಸರಿಪಡಿಸುವ ವಿಧಾನ ತನಗೆ ಗೊತ್ತಿದೆಯೆಂದೂ ತಿಳಿಯಬೇಕಿದ್ದರೆ ತಾನು ಉಳಿದುಕೊಂಡಿದ್ದ ತಂಗುಮನೆಯಲ್ಲಿ ತನ್ನನ್ನು ಕಾಣಬಹುದೆಂದೂ ಆತ ಬರೆದು ಅಲ್ಲಿಂದ ಹೊರಟುಹೋದ. ಊಟ ಮುಗಿದಿತ್ತು. ಉಳಿದ ಸದಸ್ಯರು ಮದ್ಯದಲ್ಲಿ ಮುಳುಗುವದರಲ್ಲಿದ್ದರು. ಹೆಂಚರ್ಡ ನಿಧಾನವಾಗಿ ಅಲ್ಲಿಂದ ಹೊರಟು ಯಾರಿಗೂ ತಿಳಿಯದ ಹಾಗೆ ಫಾರ್ಫ್ರೆ ಉಳಿದುಕೊಂಡ ತಂಗುಮನೆಯನ್ನು ಸೇರಿದ--ಆತನನ್ನು ಕಾಣಲೆಂದು.

( ೩ )

ಸಾಮಾನ್ಯ ತರಗತಿಯದಾಗಿದ್ದ ಅದೇ ತಂಗುಮನೆಯನ್ನು ತಾಯಿ ಮಗಳು ಅಂದಿನ ರಾತ್ರಿಗೊಂದು ಆಶ್ರಯವೆಂದು ಕೆಲವು ನಿಮಿಷ ಮೊದಲು ಬಂದು ಸೇರಿದ್ದರಷ್ಟೆ. ಕೊಡಬೇಕಾಗಿದ್ದ ಬಾಡಿಗೆಯಲ್ಲಿಯ ಒಂದು ಭಾಗದ ಬದಲು ಎಲಿಝಾಬೆತ್‌ಳು ಪರಿಚಾರಿಕೆಯ ಕೆಲಸವನ್ನು ಒಪ್ಪಿಕೊಂಡು ತಮ್ಮ ಕೋಣೆಯ ಬದಿಯಲ್ಲಿಯ ಕೋಣೆಯಲ್ಲಿದ್ದ ಫಾರ್ಫ್ರೆಗೆ ಊಟವನ್ನು ತಂದು ಬಡಿಸಿದ್ದಳು. ಹೆಂಚರ್ಡ ಆತನ ಕೋಣೆಗೆ ಬಂದಾಗ ಸೂಸನ್ ಬದಿಯ ಕೋಣೆಯಲ್ಲಿಯೆ ಇದ್ದಳು. ಅವರಿಬ್ಬರ ಮಾತುಗಳು ಆಕೆಗೆ ಸ್ಪಷ್ಟವಾಗಿ ಕೇಳಿಸುತ್ತಿದ್ದವು.

ಉಪಚಾರದ ಮಾತು ಮುಗಿದ ಮೇಲೆ ಫಾರ್ಫ್ರೆ ಕೆಟ್ಟ ಕಾಳನ್ನು ಸರಿಯಾಗಿಸುವ ವಿಧಾನವನ್ನು ತೋರಿಸಿಕೊಟ್ಟ. ಅದಕ್ಕಾಗಿ ಹೆಂಚರ್ಡ ಕೃತಜ್ಞನಾಗಿದ್ದ. ಆಗಲೆ ಇಬ್ಬರಲ್ಲಿ ಎಲ್ಲಿಲ್ಲದ ಆತ್ಮೀಯತೆ ತಲೆದೋರಿತು. ಫಾರ್ಫ್ರೆ ಮದ್ಯವನ್ನು ಕೊಡಮಾಡಿದಾಗ ಹೆಂಚರ್ಡನು ತಾನು ಮದ್ಯವನ್ನು ಮುಟ್ಟುವದಿಲ್ಲವಾಗಿಯೂ ಮದ್ಯದ ಮೂಲಕ ತನ್ನ ಜೀವನ ಪಶ್ಚಾತ್ತಾಪದಿಂದ ಕೂಡಿತ್ತೆಂದೂ ಹೇಳಿದ್ದನ್ನು ಸೂಸನ್ ಕೇಳಿದಳು. ಆತನ ಪರಿತಾಪ ಆಕೆಗೆ ಸಮಾಧಾನವನ್ನು ಒದಗಿಸಿತು. ಮರುದಿನ ಬೆಳಿಗ್ಗೆ ಆತನೆಡೆಗೆ ಎಲಿಝಾಬೆತ್‌ಳನ್ನು ಕಳಿಸುವದೆಂದು ನಿಶ್ಚಯಿಸಿದಳು. ಹೆಂಚರ್ಡ ಕೆಲವು ಕಾಲ ಮಾತನಾಡಿ ಹೊರಟುಹೋದ.

ತನ್ನ ಪ್ರಯಾಣವನ್ನು ಮುಂದರಿಸಲು ಫಾರ್ಫ್ರೆ ಮುಂಜಾನೆ ಹೊರಡುತ್ತಿದ್ದಾಗ ತನಗೆ ಒಂದು ಮಾತನ್ನೂ ಹೇಳಲಿಲ್ಲವೆಂದು ಎಲಿಝಾಬೆತ್‌ಳಿಗೆ ಖೇದವೆನಿಸಿತು. ಪರಿಚಾರಿಕೆಯಾಗಿ ಆತನೆದುರು ಓಡಾಡಿದಾಗ ಏನೋ ಒಂದು ಬಗೆಯ ಆತ್ಮೀಯತೆಯನ್ನು ಆತನ ಕಣ್ಣನೋಟದಲ್ಲಿ ಆಕೆ ಗುರುತಿಸಿದ್ದಳೆಂದೇ ಈ ಖೇದ

ಭಾವ. ಆದರೆ ಆತ ಹೊರಟುಹೋಗಿಬಿಟ್ಟ. ಮುಂದೆ ಒಂದೆರಡು ಗಂಟೆಗಳಲ್ಲಿ ತಾಯಿಯು ಪರವಾಗಿ ಹೆಂಚರ್ಡನನ್ನು ಕಾಣಲೆಂದು ಹೋದರೆ ಅಲ್ಲಿ ಆಕೆ ಮೊದಲು ಸಂಧಿಸಿದ್ದು ಫಾರ್ಫ್ರೆಯನ್ನು! ಇದಕ್ಕೆ ಕಾರಣವೆಂದರೆ, ದೇಶಾಂತರ ಹೊರಟುಹೋಗಬೇಕೆಂದಿದ್ದ ಫಾರ್ಫ್ರೆಯನ್ನು ಹೆಂಚರ್ಡ ದಾರಿಯಲ್ಲಿ ಸಂಧಿಸಿ ಪರಿಪರಿಯಾಗಿ ಆತನನ್ನು ಮನವೊಲಿಸಿ, ವ್ಯವಹಾರದಲ್ಲಿ ಆತನಿಗೊಂದು ಪಾಲುಕೊಡಲೂ ಒಪ್ಪಿ, ತನ್ನ ಧಾನ್ಯ ವ್ಯಾಪಾರದ ಸಂಚಾಲಕನೆಂದು ನಿಯಮಿಸಿಕೊಂಡುಬಿಟ್ಟಿದ್ದ. ಹೊರಟೇಹೋಗಬೇಕೆಂದಿದ್ದ ಫಾರ್ಫ್ರೆ "ದೈವಕ್ಕೆ ಇದಿರಾಗಿ ಯಾರು ಹೋದಾರು?" ಎಂದು ಒಪ್ಪಿ ಬಂದು ಆಗಲೆ ಕೆಲಸಕ್ಕೆ ತೊಡಗಿದ್ದ.

ಎಲಿಝಾಬೆತ್ ಹೆಂಚರ್ಡನನ್ನು ಕಂಡು ಆತನ ದೂರದ ಸಂಬಂಧಿಕಳಾದ ಸೂಸನ್ - ನ್ಯೂಸನ್ ಎಂಬ ನಾವಿಕನ ವಿಧವೆ-ಆತನನ್ನು ಕಾಣಲೆಂದು ಊರಲ್ಲಿ ಬಂದಿರುವದಾಗಿಯೂ ತಾನು ಆಕೆಯ ಮಗಳೆಂದೂ ವಿವರಿಸಿದಳು. ಹೆಂಚರ್ಡನಿಗೆ ಹಿಡಿಸಲಾರದ ಸಂತೋಷವಾಯಿತು. ತನ್ನನ್ನು ಬಂದು ಮಾತನಾಡಿಸಿದ ಯುವತಿಯ ಹೆಸರು ಎಲಿಝಾಬೆತ್ ಎಂದು ಕೇಳಿದಾಗಲಂತೂ ಆತನಿಗೆ ಮಾತು ಸಾಲದ ಸಂತಸವೆನಿಸಿತು. ಆಕೆಯನ್ನು ಮನೆಯ ಒಳಕ್ಕೆ ಕರೆದುಕೊಂಡುಹೋಗಿ ಸೂಸನ್‌ಳ ಹೆಸರಿನಲ್ಲಿ ಒಂದು ಚೀಟಿಯನ್ನು ಬರೆದು ಅದರ ಜೊತೆಯಲ್ಲಿ ಐದು ಪೌಂಡು ಐದು ಶಿಲಿಂಗ್ ಹಣವನ್ನಿಟ್ಟು ಆ ಲಕ್ಕೋಟೆಯನ್ನು ಆಕೆಗೆ ಕೊಡಬೇಕೆಂದು ಹೇಳಿ ಕಳುಹಿದ. ಸಂಜೆಗತ್ತಲು ಮುಸುಕಿದ ನಂತರ ಊರಹೊರಗಡೆಯಲ್ಲಿ ಯಾರೂ ಬಾರದ ಒಂದು ಸ್ಥಳಕ್ಕೆ ಸೂಸನ್ ಬಂದು ತನ್ನನ್ನು ಕಾಣಬೇಕೆಂದು ಆ ಚೀಟಿಯಲ್ಲಿ ಬರೆದಿದ್ದ.

ರಾತ್ರಿಯ ಎಂಟು ಗಂಟೆಗೆ ಸರಿಯಾಗಿ ನಿರ್ದಿಷ್ಟ ಸ್ಥಳಕ್ಕೆ ಸೂಸನ್ ಬಂದಾಗ ಹೆಂಚರ್ಡ ಆಗಲೆ ಅಲ್ಲಿ ಕಾಯುತ್ತಿದ್ದ. ಪರಿತಪ್ತ ಹೃದಯಗಳ ಪುನರ್ಮಿಲನ ಹತ್ತೊಂಬತ್ತು ವರ್ಷಗಳ ನಂತರ ನಡೆಯಿತು. "ನಾನು ಬಂದದ್ದು ನಿಮಗೆ ತೊಂದರೆಯೆ?" ಎಂದು ಆಕೆ ಕೇಳಿದರೆ "ನೀನು-ನನ್ನನ್ನು ಕ್ಷಮಿಸಬೇಕು. ಕುಡಿದುಬಿಟ್ಟು ಅಂದು ಹಾಗೆ ಮಾಡಿದೆ. ಆದರೆ ಅಂದಿನಿಂದ ಇಂದಿನ ವರೆಗೆ ನಾನು ಮದ್ಯವನ್ನು ಮುಟ್ಟಿಲ್ಲ" ಎಂದು ಹೆಂಚರ್ಡ ಹೇಳಿದ. ನೇರವಾಗಿ ತಾಯಿ ಮಗಳು ಮನೆಗೆ ಬರುವ ಹಾಗಿರಲಿಲ್ಲ. ಬಂದರೆ ಹಿಂದಿನ ಇತಿಹಾಸ ಹೊರಬೀಳುತ್ತದೆ. ಹೀಗೆಂದು ಹೆಂಚರ್ಡ ತನ್ನ ಯೋಜನೆಗಳನ್ನು ಹೇಳಿದ. ತಾಯಿ ಮತ್ತು ಮಗಳು ಊರಲ್ಲಿ ಬೇರೆಯಾಗಿ ಮನೆ ಮಾಡಿಕೊಂಡಿರಬೇಕು; ನಿಧಾನವಾಗಿ ತಾನು ಸೂಸನ್‌ಳನ್ನು ಪ್ರೀತಿಸುತ್ತಿದ್ದ ಹಾಗೆ ನಟಿಸಿ ಸಕಾಲದಲ್ಲಿ ಮತ್ತೆ ತೋರಿಕೆಗೆ ಮದುವೆಯಾಗುವದು ಎಂದು. ಸೂಸನ್ ಒಪ್ಪಿದಳು. ತಮ್ಮಿಬ್ಬರ ಹಳೆಯ ಸಂಬಂಧ ಎಲಿಝಾಬೆತ್‌ಳಿಗೆ ತಿಳಿಯದು. ಆಕೆಗೆ ತಿಳಿಯದಿರುವದೇ ಒಳ್ಳೆಯದೆಂದು ಅವರಿಬ್ಬರೂ ನಿರ್ಧರಿಸಿದರು.

ಸೂಸನ್‌ಳೊಡನೆ ಸಂದರ್ಶನವನ್ನು ಮುಗಿಸಿಕೊಂಡು ಹೆಂಚರ್ಡ ಹಿಂದಿರುಗಿದಾಗ ಫಾರ್ಫ್ರೆ ತನ್ನ ಆಫೀಸಿನಲ್ಲಿ ಇನ್ನೂ ಕೆಲಸ ಮಾಡುತ್ತಲೇ ಇದ್ದ. ತನ್ನ ಸಂತಸವನ್ನು, ಅದರಿಂದ ಹುಟ್ಟಿಕೊಂಡ ಸಮಸ್ಯೆಯನ್ನು ಒಂದೇ ದಿವಸದಲ್ಲಿ ಆತ್ಮೀಯನಾಗಿ ಬಿಟ್ಟಿದ್ದ ಫಾರ್ಫ್ರೆಯ ಮುಂದೆ ಬಿಚ್ಚಿಡಲು ಅವನಿಗೆ ಆತುರವಾಯಿತು. ಅವನನ್ನು ಮನೆಯೊಳಕ್ಕೆ ಸಲಿಗೆಯಿಂದ ಕರೆದೊಯ್ದು ಸೂಸನ್‌ಳನ್ನು ತಾನು ಕಳೆದುಕೊಂಡ ಸಮಾಚಾರವನ್ನೂ ಆಕೆ ಹಿಂದಿರುಗಿ ಬಂದ ಸಮಾಚಾರವನ್ನೂ ವಿವರಿಸಿದ. ಫಾರ್ಫ್ರೆ ತನ್ನ ಸಂತೋಷ ವ್ಯಕ್ತಪಡಿಸಿದ್ದಕ್ಕೆ ಹೆಂಚರ್ಡ ಹೇಳಿದ: "ಸಂತೋಷ ಸರಿಯೆ. ಇದರಲ್ಲಿ ತೊಡಕೂ ಒಂದಿದೆ. ಒಬ್ಬಳಿಗೆ ನ್ಯಾಯ ಮಾಡಬೇಕಾದರೆ ಇನ್ನೊಬ್ಬಳಿಗೆ ಅನ್ಯಾಯವಾಗುತ್ತದೆ. ಹತ್ತೊಂಬತ್ತು ವರ್ಷ ಮದ್ಯ ಕುಡಿಯದೆ ಇದ್ದೇನೆ. ಆದರೆ ಒಂದೆಡೆ ವ್ಯವಹಾರಕ್ಕೆಂದು ಹೋಗುತ್ತಿದ್ದಾಗ ಇನ್ನೊಬ್ಬಳ ಪರಿಚಯ ಆಗಿದೆ. ಸಂಬಂಧ ಬೆಳೆದಿದೆ. ಇಷ್ಟರಲ್ಲಿ ಆಕೆಯನ್ನು ಮದುವೆಯಾಗುವದರಲ್ಲಿದ್ದೆ. ಆದರೆ ಈಕೆ ಬಂದುಬಿಟ್ಟಳು."

ಫಾರ್ಫ್ರೆ "ಅನ್ಯಾಯದ ಮಾತು. ಆದರೆ ಏನು ಮಾಡುವದು? ಎರಡನೆಯವಳಿಗೆ ತಿಳಿ ಹೇಳಬೇಕು" ಎಂದ.

"ಹೌದು. ಆದರೆ ಇನ್ನೂ ಒಂದು ತೊಡಕಿದೆ. ಸೂಸನ್ ಜೊತೆಯಲ್ಲಿ ಅಂದಿನ ಆ ಮಗು ಈಗ ದೊಡ್ಡವಳಾಗಿ ಬಂದಿದ್ದಾಳೆ. ಆಕೆಗೆ ಹಿಂದಿನ ಯಾವ ಸಮಾಚಾರವೂ ತಿಳಿಯದು. ಆಕೆಯ ಮಟ್ಟಿಗೆ ನಾನು ಸೂಸನ್‌ಳ ದೂರದ ಸಂಬಂಧಿಕ. ಇದ್ದುದೆಲ್ಲ ಆಕೆಗೆ ತಿಳಿಸಿದರೆ ನನ್ನ ವಿಚಾರದಲ್ಲಿ ಆಕೆ ಏನೆಂದುಕೊಂಡಾಳು?"

"ಇದ್ದುದನ್ನು ಇದ್ದ ಹಾಗೆ ಹೇಳಿಬಿಡುವದೇ ಒಳ್ಳೆಯದು" ಎಂದು ಫಾರ್ಫ್ರೆ ಸಲಹೆ ಕೊಟ್ಟ.

ಆದರೆ ಹೆಂಚರ್ಡನಿಗೆ ಮಾತ್ರ "ಸಾಧ್ಯವಿಲ್ಲ" ಎನಿಸಿತು. ಅವನು ಅಂದೇ ರಾತ್ರಿ, ತನ್ನನ್ನು ಒಲಿದು ಬಂದ ಎರಡನೆಯವಳಿಗೆ ಕಾಗದ ಬರೆದು ಜೊತೆಯಲ್ಲಿ ಹಣದ ಮೊತ್ತವೊಂದನ್ನು ಇಟ್ಟು ಕಳಿಸಿದ. ಅಷ್ಟು ಮಾತ್ರದಿಂದ ಆ ವಿಷಯ ಬಗೆ ಹರಿಯಬಹುದೇ ಎಂಬ ಬಗೆಯಲ್ಲಿ ಮಾತ್ರ ಆತನಿಗೆ ಶಂಕೆಯಿತ್ತು. ಆದರೆ ಏನಾದರೂ ಸೂಸನ್‌ಳಿಗಾದ ಅನ್ಯಾಯವನ್ನು ತೊಡೆದು ಹಾಕಲೇಬೇಕೆಂದು ಆತ ನಿರ್ಧರಿಸಿದ್ದ.

### ( ೪ )

ಗೊತ್ತುಪಡಿಸಿದ ಹಾಗೆ ತಾಯಿಮಗಳಿಬ್ಬರೂ ಒಂದು ಒಳ್ಳೆಯ ಮನೆಯಲ್ಲಿ ಬಂದಿರತೊಡಗಿದರು. ಎಲ್ಲದಕ್ಕೂ ಹೆಂಚರ್ಡನೆ ಗುಪ್ತವಾಗಿ ಹಣವನ್ನು ಪೂರೈಸುತ್ತಿದ್ದ. ಮುಂದೆ ಒಂದೆರಡು ತಿಂಗಳಲ್ಲಿ ಆತ ಅಲ್ಲಿಗೆ ಹೋಗಿಬರುವದು ಹೆಚ್ಚಾಯಿತು. ಊರವರ ಗಮನವನ್ನೂ ಸೆಳೆಯಿತು. ವಿಧವೆ ಶ್ರೀಮತಿ ನ್ಯೂಸನ್‌ಳನ್ನು ಹೆಂಚರ್ಡ ಪ್ರೀತಿಸುತ್ತಿದ್ದಾನೆ ಎಂದು ಜನ ಆಡಿಕೊಳ್ಳತೊಡಗಿದರು. ಎಂಥ ಮನುಷ್ಯ, ಏನು ಹೆಂಗಸು ಎಂದವರೂ ಇದ್ದರು. ಸೂಸನ್ ತೀರ ಬಡಕಲಾದ್ದರಿಂದ ಊರ ಹುಡುಗರಿಗೂ ಅದೊಂದು ಚೇಷ್ಟೆಯ ವಿಷಯವೇ ಆಗಿತ್ತು. ಯಾರು ಏನೆಂದರೂ ಮೊದಲೇ ಗೊತ್ತುಮಾಡಿಕೊಂಡ ಹಾಗೆ ಹೆಂಚರ್ಡ ಒಂದು ದಿನವನ್ನು ಗೊತ್ತು ಮಾಡಿ ಸೂಸನ್‌ಳನ್ನು ಮದುವೆ-ಅಥವಾ ಮರುಮದುವೆ-ಯಾದ. ಮದುವೆಯಾಗುವದೇ ಇದ್ದರೆ ಅಂಥ ಅಸ್ಥಿಪಂಜರವನ್ನೇಕೆ ಆಗಬೇಕಿತ್ತು? ಎಂದು ಜನ ಆಡಿಕೊಂಡರು. ಬಳಿಕ ಸುಮ್ಮನಾದರು.

ಮದುವೆಯ ನಂತರದ ಕಾಲ ಸೂಸನ್‌ಳ ಜೀವಮಾನದ ವಸಂತಕಾಲವಾಯಿತು. ಹಿಂದೆ ತಾನು ಮಾಡಿದ ಅನ್ಯಾಯವನ್ನು ನೆನೆದು ಹೆಂ-ಚರ್ಡ ಆಕೆಗೆ ಯಾವದನ್ನೂ ಕಡಿಮೆ ಮಾಡಲಿಲ್ಲ. ಬಡತನದಲ್ಲಿ ಬೆಳೆದ ಎಲಿಝಾಬೆತ್‌ಳ ಸೌಂದರ್ಯ ಹೊಸ ಅನುಕೂಲಗಳ ಮಧ್ಯದಲ್ಲಿ ಊರವರ ಕಣ್ಣು ಸೆಳೆಯುವಂತೆ ಹೆಚ್ಚತೊಡಗಿತು. ಮೂವರ ಮಟ್ಟಿಗೂ ಸುಖವಾಗಿ ದಿನಗಳು ಉರುಳುತ್ತಿದ್ದವು. ತನ್ನ ಮಗಳು ಕುಮಾರಿ ನ್ಯೂಸನ್ ಎಂದುಕೊಳ್ಳುತ್ತಿದ್ದಳೆನ್ನುವದೊಂದೇ ಹೆಂಚ-ರ್ಡನಿಗೆ ಕೊರತೆ ಎನಿಸುತ್ತಿತ್ತು. ಒಂದು ದಿನ ಆ ವಿಷಯವನ್ನು ಹೆಂಡತಿಯೊಡನೆ ಪ್ರಸ್ತಾಪಿಸಿದಾಗ ಆಕೆ ತನ್ನ ಅಂತರಂಗದಲ್ಲಿ ಏನಿದ್ದರೂ, "ಆಗಬಹುದು. ಆಕೆ ಒಪ್ಪಿದರೆ ಹೆಸರನ್ನು ಬದಲಾಯಿಸಿಬಿಡಬಹುದು" ಎಂದಿದ್ದಳು. ಎಲಿ-ಝಾಬೆತ್‌ಳಿಗೆ ಹೆಂಚರ್ಡ ಆ ಸೂಚನೆಯನ್ನು ಮಾಡಿದಾಗ ಆಕೆ, "ಯೋಚಿಸುವೆ" ಎಂದಳು. ಯಾವದರಿಂದಲೂ ಅವಳ ಮನಸ್ಸನ್ನು ನೋಯಿಸಲಾರದ ಹೆಂಚರ್ಡ "ಆಗಲಿ, ನಿನಗೆ ತಿಳಿದ ಹಾಗೆ ಮಾಡು" ಎಂದು ಸುಮ್ಮನಾದ.

ಹೆಂಚರ್ಡನ ವ್ಯವಹಾರವನ್ನೆಲ್ಲ ಸುವ್ಯವಸ್ಥಿತವಾಗಿ ನೋಡಿಕೊಳ್ಳುತ್ತಿದ್ದ ಫಾರ್ಫ್ರೆ ಮನೆಯವನ ಹಾಗೆಯೆ ಇದ್ದ. ದಿನ ಬೆಳಗೂ ಆತನನ್ನು ನೋಡುತ್ತಿದ್ದ ಎಲಿಝಾಬೆತ್ ಆತನಲ್ಲಿ ಕೆಲಮಟ್ಟಿಗೆ ಅನುರಕ್ತಳಾಗಿದ್ದಳೆಂದರೂ ಅಡ್ಡಿ ಇಲ್ಲ. ಹೀಗಿರುವಾಗ ಒಂದು ದಿನ ಇಬ್ಬರಿಗೂ ಬೇರೆ ಬೇರೆಯಾಗಿ ಕಣಜದಾಚೆಯಲ್ಲಿ ಒಂದು ಸ್ಥಳಕ್ಕೆ ಬರಬೇಕೆಂದು ಯಾರ ರುಜುವೂ ಇಲ್ಲದ ಕಾಗದ ಬಂದವು. ಆಕೆ ಬರೆದಿರಬೇಕೆಂದು ಈತ, ಈತ ಬರೆದಿರಬೇಕೆಂದು ಆಕೆ, ಅಲ್ಲಿಗೆ ಬಂದು ಇಬ್ಬರೂ ಪೆಚ್ಚಾಗುವಂತಾಯಿತು. ಯಾರು ಕಾಗದ ಬರೆದವರು ಎನ್ನುವದು ಗೊತ್ತಾಗಲಿಲ್ಲ.

ಆದರೆ ಆ ಸನ್ನಿವೇಶದಿಂದಾಗಿ ಇಬ್ಬರ ಹೃದಯಗಳೂ ಒಬ್ಬರೊಬ್ಬರ ಹತ್ತಿರ ಬರಲಿಕ್ಕೆ ಮಾತ್ರ ಅನುಕೂಲವಾಯಿತು.

ಹೀಗೆ ಅವರಿಬ್ಬರೂ ಹತ್ತಿರ ಬರುತ್ತಿದ್ದ ಕಾಲಕ್ಕೆ ಒಂದು ಘಟನೆ ನಡೆಯಿತು. ಧಾನ್ಯವನ್ನು ಹೇರಿಕೊಂಡು ಹೆಂಚರ್ಡನ ಗಾಡಿಗಳು ಬೆಳಗಿನಲ್ಲಿ ಹೋಗಬೇಕಿತ್ತು. ಎಬೆಲ್ ಎಂಬ ನಿದ್ದೆ ಬಡಕ ಗಾಡಿಯುವನೊಬ್ಬ ಸರಿಯಾದ ವೇಳೆಗೆ ಬರಲಿಲ್ಲ. ಹೇಳಿದರೂ ಬಾರದ್ದನ್ನು ಕಂಡು ಹೆಂಚರ್ಡ ಕೋಪಾವಿಷ್ಟನಾಗಿ ಆತನ ಗುಡಿಸಲಿನ ವರೆಗೂ ಹೋಗಿ ಆತನನ್ನು ಇದ್ದಕ್ಕಿದ್ದ ಹಾಗೆ ಅರೆಬೆತ್ತಲೆಯಾಗಿದ್ದವನನ್ನು ತಳ್ಳಿಕೊಂಡು ಬಂದು ಹಾಗೆಯೆ ಗಾಡಿ ಹೊಡೆದುಕೊಂಡು ಹೋಗಬೇಕೆಂದ. ಆತನಿಗೆ ಪಾಠ ಕಲಿಸಲು ಅದೇ ದಾರಿ ಎಂದು ಹೆಂಚರ್ಡನ ವಿಚಾರವಾಗಿತ್ತು. ಆದರೆ ಆ ಸಂದರ್ಭದಲ್ಲಿ ಫಾರ್ಫ್ರೆ ಅವನಿಗೆ ಇದಿರಾಗಿ ನಿಂತ. ಹಾಗೆ ಮಾಡುವದು ಅನ್ಯಾಯ; ತಾನು ಸಂಚಾಲಕನಾಗಿರುವಾಗ ಇಂಥ ವಿಷಯ ನಡೆಯಲಾರದು ಎಂದು ಹೇಳಿ ಎಬೆಲ್‌ನನ್ನು ಬಟ್ಟೆಹಾಕಿಕೊಂಡು ಬರುವಂತೆ ಮನೆಗೆ ಕಳಿಸಿದ.

ಹೆಂಚರ್ಡನಿಗೆ ತಡೆಯಲಾರದ ಕೋಪವಾದರೂ ಫಾರ್ಫ್ರೆಯ ನ್ಯಾಯವಾದ ಮಾತಿಗೆದುರು ಸುಮ್ಮನಿರಬೇಕಾಯಿತು. ನ್ಯಾಯವಾಗಿದ್ದರೂ ಆಳುಮಕ್ಕಳೆದುರು ತನ್ನನ್ನು ಹಾಗೆ ಅವಮಾನಗೊಳಿಸಬಾರದಾಗಿತ್ತು ಎಂದುಕೊಂಡ.

ಏನಿದ್ದರೂ ಅವರಿಬ್ಬರ ನಡುವಿನ ಸೌಹಾರ್ದವನ್ನು ಕೆಲವುಟ್ಟಿಗೆ ಈ ಮೋಡ ಮುಸುಕುವಂತಾಯಿತು. ಎಲಿಝಬೆತ್‌ಳು ಫಾರ್ಫ್ರೆಗೆ ಹತ್ತಿರ ಬರುತ್ತಿದ್ದ ಹಾಗೆ ಆತ ಹೆಂಚರ್ಡನಿಂದ ಕೆಲವುಟ್ಟಿಗಾದರೂ ದೂರ ಸರಿಯುವಂತಾಯಿತು. ಆ ಕ್ಷಣಕ್ಕೆ ಹೆಂಚರ್ಡ ಸುಮ್ಮನಾಗಿದ್ದರೂ ಆದ ಅವಮಾನವನ್ನು ಮರೆಯುವ ಸ್ವಭಾವ ಆತನದಾಗಿರಲಿಲ್ಲ.

ಇದಕ್ಕೆ ಪೋಷಕವಾಗುವಂತೆ ಇನ್ನೊಂದು ವಿಷಯ ನಡೆಯಿತು; ಯಾವದೊ ಒಂದು ಉತ್ಸವದ ದಿನ. ಹಾಗೆಂದು ಊರವರಿಗಾಗಿ ಏನಾದರೊಂದು ಮನರಂಜನೆಯ ಕಾರ್ಯಕ್ರಮವನ್ನೇರ್ಪಡಿಸಬೇಕೆಂದು ಫಾರ್ಫ್ರೆ ಹೆಂಚರ್ಡನ ಅನುಮತಿ ಪಡೆದೇ ಯೋಜನೆಯೊಂದನ್ನು ಮಾಡಿದ. ತಾನು ನಗರಾಧ್ಯಕ್ಷನಾಗಿದ್ದರಿಂದ ಅಂಥ ಕಾರ್ಯಕ್ರಮವನ್ನು ತಾನೂ ದೊಡ್ಡ ಪ್ರಮಾಣದಲ್ಲಿ ನಡೆಸಬೇಕೆಂದು ಹೆಂಚರ್ಡ ಹವಣಿಸಿದ. ಎಲ್ಲವನ್ನು ಸರಿಯಾಗಿ ಯೋಜಿಸಿಕೊಂಡ ಫಾರ್ಫ್ರೆ ಮಳೆಗಾಳಿಗಳಿಂದ ಆಶ್ರಯ ಸಿಕ್ಕುವಂಥ ಗಿಡಗಳ ಗುಂಪಿನ ಮಧ್ಯದಲ್ಲಿ ರಂಗಸ್ಥಳವನ್ನೇರ್ಪಡಿಸಿ, ಗಿಡಗಳ ಮೇಲುಗಡೆಯಲ್ಲಿ ತಾಡಪತ್ರಿಗಳನ್ನು ಹಾಸಿ ಎಲ್ಲವನ್ನೂ ಸರಿಯಾಗಿ ಅಣಿ ಮಾಡಿಕೊಂಡಿದ್ದ. ಅದಕ್ಕೆ ಪ್ರತಿಯಾಗಿ ಹೆಂಚರ್ಡನ ಬಯಲು ನಾಟ್ಯಮಂದಿರವೂ ಸಿದ್ಧವಾಯಿತು.

ಉತ್ಸವದ ದಿನ ಬೆಳಗು ಮೋಡ ಕವಿಯಿತು. ಮಧ್ಯಾಹ್ನಕ್ಕೆ ಧಾರಾಕಾರವಾಗಿ ಮಳೆ ಸುರಿಯಿತು. ನಗರಾಧ್ಯಕ್ಷನ ಕಾರ್ಯಕ್ರಮ ನೆಲಕ್ಕುರುಳಿತು. ಇದಕ್ಕೆ ಪ್ರತಿಯಾಗಿ ಫಾರ್ಫ್ರೆಯ ಯೋಜನೆ ಸಫಲವಾಯಿತು. ಊರ ಜನ ಅಲ್ಲಿಯೇ ಬಂದು ಸೇರಿದರು. ತನ್ನ ಕಾರ್ಯಕ್ರಮ ನಡೆಯಲಿಲ್ಲವೆನ್ನುವದಕ್ಕಿಂತ ಹೆಚ್ಚಾಗಿ ಜನ ಫಾರ್ಫ್ರೆಯನ್ನೇ ಹಿಂಬಾಲಿಸುತ್ತಿದ್ದರೆನ್ನುವದು ಆತನಿಗೆ ನೋವನ್ನುಂಟುಮಾಡಿತ್ತು. ಇದಕ್ಕೆ ಸರಿಸಮನಾಗಿ ಆತನ ಕಾರ್ಯಕ್ರಮದಲ್ಲಿ ಎಲಿಝಬೆತ್‌ಳೂ ಭಾಗ ವಹಿಸಿದ್ದಳು. ತಾನು ನೋಡಹೋದಾಗ ಆಕೆ ಆತನ ಜೊತೆಯಲ್ಲಿ ಕುಣಿಯುತ್ತಿದ್ದಳು. ಹೆಂಚರ್ಡನಿಗೆ ತನ್ನ ಸೋಲು ಸಹಿಸದಾಯಿತು. ಇದೂ ಸಾಲದೆಂಬಂತೆ ಗೆಳೆಯರಿಬ್ಬರ ಮೂದಲಿಕೆಯ ಮಾತುಗಳನ್ನೂ ಕೇಳಬೇಕಾಯಿತು: "ಚೆನ್ನಾಗಿ ಆಯಿತಲ್ಲ ನಿನ್ನ ಸಂಚಾಲಕನಿಂದ ಮಂಗಳಾರತಿ? ಆಳು ಯಾರು, ಯಜಮಾನ ಯಾರು?" ಎಂದು ಮುಂತಾಗಿ. ಹೆಂಚರ್ಡನಿಗೆ ತಡೆಯದಾಯಿತು. ಕಾರ್ಯಕ್ರಮ ಮುಗಿಯುವ ವರೆಗೂ ಅಲ್ಲಿಯೆ ಕಾದು ಫಾರ್ಫ್ರೆ ಹೊರಬಂದೊಡನೆ ಆತನನ್ನು ತನ್ನ ಕೆಲಸದಿಂದ ಕಡಿಮೆ ಮಾಡಿದ್ದಾಗಿ ಹೇಳಿಬಿಟ್ಟ.

( ೫ )

ಸಂಚಾಲಕನ ಕೆಲಸದಿಂದ ದೂರವಾದ ಫಾರ್ಫ್ರೆ ಮುಂದೇನು ಮಾಡಬೇಕೆಂಬ ಯೋಚನೆ ಯಲ್ಲಿದ್ದಾಗ ಒಂದು ಸಂಜೆ ಅಕಸ್ಮಾತ್ತಾಗಿ ದಾರಿ ಯಲ್ಲಿ ಸಿಕ್ಕ ಎಲಿಝಾಬೆತ್‌ಳನ್ನು ಕೇಳಿದ್ದ : "ನಾನು ಇಲ್ಲಿಂದ ಹೊರಟುಹೋಗಬೇಕೆಂದರೆ ಬೇಡ ಎನ್ನುವವರು ಯಾರಿದ್ದಾರೆ?'' ಎಂದು. ಆಕೆ ಹೇಳಿದಳು, ''ಯಾರಿಲ್ಲದಿದ್ದರೂ ನಾನೊಬ್ಬ ಳಂತೂ ಇದ್ದೇನೆ.'' ಮುಂದೆ ಫಾರ್ಫ್ರೆ ಅಲ್ಲಿಯೇ ಉಳಿದು ಸ್ವತಂತ್ರವಾಗಿ ಧಾನ್ಯದ ವ್ಯಾಪಾರ ಮಾಡತಕ್ಕದ್ದೆಂದು ನಿರ್ಧರಿಸಿದ. ಇದನ್ನು ಕೇಳಿ ಹೆಂಚರ್ಡನಿಗೆ ತಡೆಯಲಾಗದ ಸಂತಾಪವಾ- ಯಿತು. '' ನನ್ನಿಂದಲೆ ಒಂದು ಹಾದಿಗೆ ಬಂದ ಈ ಪಿಳ್ಳೆ ನನಗೆ ಇದಿರಾಗಿ ನಿಂತು ವ್ಯವಹಾರ ನಡೆ- ಸುತ್ತದೆಯೆ? ಈತನನ್ನು ನೆಲಕ್ಕಿಳಿಸುವುದು ಯಾವ ದೊಡ್ಡ ಕೆಲಸ?'' ಎಂದುಕೊಂಡ. ಅಂದೆಯೆ ಎಲಿಝಾಬೆತ್‌ಳನ್ನು ಕರೆದು, "ಆ ಫಾರ್ಫ್ರೆ ವಿಚಾರ ಒಂದು ಮಾತು. ಆತನಿಗೆ ನೀನು ಏನಾದರೂ ಮಾತು ಕೊಟ್ಟಿಲ್ಲವಷ್ಟೆ? ಇನ್ನು ಮುಂದೆ ಆತನೊಡನೆ ನೀನು ಯಾವ ಸಂಪರ್ಕವನ್ನೂ ಇಟ್ಟುಕೊಳ್ಳಕೂಡದು. ನಮ್ಮ ಮನೆತನಕ್ಕೆಯೆ ಆತನೊಬ್ಬ ವೈರಿ,'' ಎಂದು ಹೇಳಿದ. ಇಷ್ಟರಿಂದಲೂ ಸಮಾಧಾನ ಹೊಂದದೆ ನೇರವಾಗಿ ಆತನಿಗೊಂದು ಕಾಗದ ಬರೆದ— ಇನ್ನು ಮುಂದೆ ಆತ ಎಲಿಝಾಬೆತ್‌ಳನ್ನು ಕಾಣ ಬಾರದು, ಮಾತನಾಡಿಸಬಾರದು, ಎಂದು.

ಆದರೆ ಇಂಥ ಯಾವ ಯೋಜನೆಯೂ ಫಾರ್ಫ್ರೆ ಯನ್ನು ತಟ್ಟಲಿಲ್ಲ. ನೇರವಾಗಿ ತನ್ನ ವ್ಯವಹಾರ, ಪ್ರಾಮಾಣಿಕವಾಗಿ, ಹೆಂಚರ್ಡನೊಡನೆ ಸ್ಪರ್ಧೆಗೆ ನಿಲ್ಲದೆ, ಸಾಗತಕ್ಕದ್ದೆಂದು ಆತ ನಿಶ್ಚಯಿಸಿದ್ದ. ಹೆಂಚರ್ಡನ ಗಿರಾಕಿಗಳು ತನ್ನೆಡೆಗೆ ಬಂದರೆ ಅವರನ್ನು ಹಿಂದಿರುಗಿಸುತ್ತಿದ್ದ. ಸ್ವಭಾವಗತವಾದ ಕಾರ್ಯದಕ್ಷತೆಯ ಜೊತೆಯಲ್ಲಿ ನೇರವಾದ ಪ್ರಾಮಾಣಿಕತೆ ಕೂಡಿಕೊಂಡಿತು. ಆತನ ವ್ಯವ ಹಾರ ಬೆಳೆದು ಆತನೂ ಒಬ್ಬ ಗಣ್ಯ ವ್ಯಾಪಾರಸ್ಥ ನೆನಿಸಿಕೊಳ್ಳಲು ಬಹಳ ದಿನ ಬೇಕಾಗಲಿಲ್ಲ.

ಇತ್ತೀಚೆಗೆ ಸೂಸನ್‌ಳ ದೇಹಾರೋಗ್ಯ ಸರಿ ಯಾಗಿರುತ್ತಿರಲಿಲ್ಲ. ಎಲಿಝಾಬೆತ್‌ಳು ಹಗಲಿ ರುಳೂ ಆಕೆಯನ್ನು ಉಪಚರಿಸುತ್ತಲೇ ಇದ್ದಳು. ಹೀಗಿರುವಾಗ ಒಂದು ದಿನ ಹೆಂಚರ್ಡನಿಗೆ ಒಂದು ಕಾಲದ ಪ್ರೇಯಸಿಯಾದ ಲ್ಯೂಸೆಟಾ ಳಿಂದ ಒಂದು ಕಾಗದ ಬಂದಿತು. ಆಕೆಯಿಂದ ದೂರವಾಗಬೇಕಾದಾಗ ಹೆಂಚರ್ಡ ಬರೆದ ಕಾಗ ದಕ್ಕೆ ಉತ್ತರವೆಂಬಂತಿತ್ತು ಅದು. ಆತನನ್ನು ಯಾವ ಬಗೆಯಲ್ಲಿಯೂ ದೂಷಿಸದೆ ತಮ್ಮ ಒಂದು ಕಾಲದ ಸಂಬಂಧ ಗುಪ್ತವಾಗಿಯೆ ಉಳಿಯ- ಬೇಕಿದ್ದರೆ ತಾನು ಬರೆದ ಅನೇಕ ಕಾಗದಗಳನ್ನು ಹಿಂದಿರುಗಿಸಬೇಕು ಎಂದು ಹೇಳಿದ್ದಳು. ತಾನು ಕ್ಯಾಸ್ಟರ್‌ಬ್ರಿಜ್‌ದಲ್ಲಿ ಹಾಯ್ದು ಬೇರೆಡೆಗೆ ಹೋಗುತ್ತಿದ್ದ ಒಂದು ದಿನವನ್ನು ಹೇಳಿ ನಿರ್ದಿಷ್ಟ ಸಮಯಕ್ಕೆ ಆ ಕಾಗದಗಳನ್ನು ತಂದುಕೊಡ ಬೇಕೆಂದು ಬಿನ್ನವಿಸಿದ್ದಳು. ಇದು ಸರಿಯೆಂದು ತೋರಿದ್ದರಿಂದ ಹೆಂಚರ್ಡ ಸೂಚಿಸಿದ ವೇಳೆಗೆ ಪತ್ರಗಳೆಲ್ಲವನ್ನು ಗಂಟು ಕಟ್ಟಿಕೊಂಡು ಹೋದ. ಆದರೆ ಸಮಯಕ್ಕೆ ಸರಿಯಾಗಿ ಲ್ಯೂಸೆಟಾ ಬರ ಲಿಲ್ಲವಾದ ರಿಂದ ಪತ್ರಗಳ ಕಟ್ಟನ್ನು ಹೊತ್ತು- ಕೊಂಡು ಹಿಂದಿರುಗಬೇಕಾಯಿತು.

ದಿನದಿನಕ್ಕೆ ಸೂಸನ್ ಕ್ಷೀಣಳಾಗುತ್ತಿದ್ದಳು. ಆಕೆ ಉಳಿಯಲಾರಳೆಂದು ಎಲ್ಲರಿಗೂ ತಿಳಿದ ಹಾಗಿತ್ತು. ಅಂಥ ಸ್ಥಿತಿಯಲ್ಲಿಯೆ ಆಕೆ ಒಂದು ದಿನ ಬರೆಯುವ ಸಾಮಗ್ರಿಗಳನ್ನು ತರಿಸಿಕೊಂಡು, ಕಾಗದವೊಂದನ್ನು ಬರೆದು ಒಂದು ಲಕ್ಕೋಟೆ ಯಲ್ಲಿರಿಸಿದಳು. ಅದರ ಮೇಲುಗಡೆಯಲ್ಲಿ "ಎಲಿ- ಝಾಬೆತ್‌ಳ ಮದುವೆಯ ದಿನದ ವರೆಗೆ ತೆರೆಯು ತಕ್ಕದ್ದಲ್ಲ" ಎಂದು ಬರೆದಿದ್ದಳು. ತೀರ ನಿಃಶಕ್ತಿ ಯಲ್ಲಿದ್ದಾಗ ಒಂದು ದಿನ ಮಗಳನ್ನು ಕುರಿತು, "ಆ ದಿನ ನಿನಗೆ ಮತ್ತು ಫಾರ್ಫ್ರೆಗೆ ಕಣಜಪಾಚೆ ಭೆಟ್ಟಿಯಾಗಲು ಕಾಗದವನ್ನು ಯಾರು ಬರೆದಿದ್ದರು ಗೊತ್ತೆ?" ಎಂದು ಕೇಳಿ, "ಆ ಕಾಗದವನ್ನು ಇಬ್ಬರಿಗೂ ನಾನೇ ಬರೆದಿದ್ದೆ. ಆತನನ್ನು ನೀನು ಮದುವೆಯಾದುದನ್ನು ಕಣ್ಣಾರೆ ನೋಡಬೇಕೆಂ ದಿದ್ದೆ. ಆದರೆ ಎಲ್ಲವೂ ಬಯಸಿದಂತೆ ಎಲ್ಲಿ ನಡೆ ಯುತ್ತದೆ?" ಎಂದು ಹೇಳಿ ಕಣ್ಣು ಮುಚ್ಚಿದಳು.

( ೬ )

ಸೂಸನ್ ಸತ್ತು ಮೂರು ವಾರವಾಗಿತ್ತು. ಆಕೆಯ ಸಾವು, ಫಾರ್ಫ್ರೆಯೊಡನೆ ವಿರಸ, ಲ್ಯುಸೆಟಾಳಿಂದ ಬಿಡುಗಡೆ, ಹೀಗಾಗಿ ತೀರ ಏಕಾಕಿಯಾಗಿದ್ದ ಹೆಂಚರ್ಡನಿಗೆ ಇನ್ನು ಮುಂದೆ ತನಗೆ ತನ್ನವರೆಂಬುವವರು ಯಾರಾದರೂ ಆಗ ಬಹುದಾದರೆ ಅದು ಎಲಿಝಬೆತ್ ಎಂದು ತೋರಿತು. ಆದರೆ ಆಕೆ ಕೂಡ ತನ್ನ ತಂದೆ ನ್ಯೂಸನ್ ಎಂದುಕೊಳ್ಳುತ್ತಿದ್ದಾಳೆ. ಇದನ್ನು ಸರಿಪಡಿಸಬೇಕೆಂದು ಒಂದು ರಾತ್ರಿ ಆ ಮಾತು ಈ ಮಾತು ಆಡಿ ಕೊನೆಗೆ, "ಎಲಿಝಬೆತ್, ನಿನ್ನ ತಂದೆ ನಾನೇ ಆಗಿದ್ದರೆ ಹೇಗಿರುತ್ತಿತ್ತು?" ಎಂದುದಕ್ಕೆ ಆಕೆ "ಬೇರೆಯವರನ್ನು ನನ್ನ ತಂದೆ ಎಂದು ಹೇಗೆ ತಿಳಿಯಲಿ?" ಎಂದಳು. ಆಗ ಹೆಂಚರ್ಡ "ನಿನ್ನ ತಾಯಿ ಬದುಕಿದ್ದಾಗ ಎಲ್ಲ ವನ್ನೂ ನಿನಗೆ ಹೇಳಲಿಲ್ಲ. ನಿನ್ನ ನಿಜವಾದ ತಂದೆ ನಾನೇ. ಹಿಂದೆ ಏನೇನೋ ಅನ್ಯಾಯ ನಡೆಯಿತು. ನಾಚಿಕೆಯಿಂದ ಅದನ್ನೆಲ್ಲ ನಾವು ಹೇಳಲಿಲ್ಲ. ಇನ್ನು ಮುಂದೆ ನೀನೊಬ್ಬಳೇ ನನಗೆ. ಈ ಮನೆಗೆ ನೀನೇ ಯಜಮಾನಿ. ಎಲ್ಲವೂ ನಿನ್ನದು" ಎಂದು ಹೇಳಿದ. ಎಲಿಝಬೆತ್‌ಳಿಗೆ ದುಃಖವಾಯಿತು. ಆಶ್ಚರ್ಯವಾಯಿತು, ಆನಂದವೂ ಆಯಿತು. ಅವಳ ಕಣ್ಣೀರನ್ನು ಒರೆಸುತ್ತ ಹೆಂಚರ್ಡ, "ಈಗ ನೀನು ಹೋಗಿ ನಿದ್ರಿಸು. ಒಮ್ಮೆಲೆ ಹೊಂದಿಕೊಳ್ಳುವದು ಕಷ್ಟ: ಎಲ್ಲವೂ ತಾನಾಗಿಯೇ ಸರಿಯಾಗುತ್ತದೆ" ಎಂದು ಆಕೆಯನ್ನು ಅಕ್ಕರೆಯಿಂದ ಮುದ್ದಿಸಿ ಕಳುಹಿದ.

ಬಲುದಿನದ ಕನಸು ನನಸಾದ ಸಂತೋಷದಲ್ಲಿ ಹೆಂಚರ್ಡ ತನ್ನ ಕೋಣೆಯನ್ನು ಸೇರಿ ಯಾವದೋ ಒಂದು ಕಾಗದಕ್ಕಾಗಿ ಪೆಟ್ಟಿಗೆಯನ್ನು ತೆರೆದ. ಆಕಸ್ಮಾತ್ತಾಗಿ ಅಲ್ಲಿ ಸೂಸನ್‌ಳು ಬರೆದಿಟ್ಟ ಲಕ್ಕೋಟೆ ಆತನ ಲಕ್ಷ್ಯವನ್ನು ಸೆಳೆಯಿತು. ಅದರ ಮೇಲಿನ ಬರಹ ಕುತೂಹಲವನ್ನು ಕೆರಳಿಸಿತು. ಹಚ್ಚಿದ ಅರಗು ಬಿಚ್ಚಿದ್ದರಿಂದ ಕುತೂಹಲ ಇನ್ನೂ ಹೆಚ್ಚಿತು. ತೆರೆದು ನೋಡಿದ.

ಅದರಲ್ಲಿ ಹೀಗೆ ಬರೆದಿತ್ತು: "ನಮ್ಮ ಮೂವರ ಹಿತದ ದೃಷ್ಟಿಯಿಂದ ಒಂದು ವಿಷಯವನ್ನು ನಿನ್ನಿಂದ ಬಚ್ಚಿಟ್ಟಿದ್ದೇನೆ. ಎಲಿಝಬೆತ್‌ಳು ನಿನ್ನ ಮಗಳಲ್ಲ. ಅಂದು ನನ್ನ ಕಂಕುಳಲ್ಲಿದ್ದ ಮಗು ಮುಂದೆ ಮೂರು ತಿಂಗಳಲ್ಲಿ ಸತ್ತುಹೋಯಿತು. ನ್ಯೂಸನ್‌ನಿಗೆ ಹುಟ್ಟಿದ ಮಗು ಈಕೆ. ಮೊದಲ ಮಗುವನ್ನು ಮರೆಯಲಾಗದ್ದಕ್ಕೆ ಅದೇ ಹೆಸರನ್ನಿಟ್ಟಿದ್ದೇನೆ. ನನಗೆ ನೀನು ಮಾಡಿದ ಅನ್ಯಾಯವನ್ನು ನೆನೆದಾದರೂ ನೀನು ನನ್ನನ್ನು ಕ್ಷಮಿಸಬೇಕು."

ಓದಿ ಮುಗಿಸಿದಾಗ ಹೆಂಚರ್ಡನಿಗೆ ದಿಕ್ಕು ಕೆಟ್ಟಂತಾಯಿತು. ದೇವ-ದೈವತಗಳಲ್ಲಿ ಬಹುಮಟ್ಟಿಗೆ ನಂಬಿಕೆಯನ್ನಿಟ್ಟ ಆತ ಕೊಟ್ಟು ಕಸಿದುಕೊಳ್ಳುವ ದೈವ ತನ್ನನ್ನು ಬೆನ್ನಟ್ಟಿ ಕಾಡುತ್ತಿದೆ ಎಂದುಕೊಂಡ. ಆಕೆ ತನ್ನವಳೆಂದು ಒಪ್ಪಿಕೊಂಡ ಕ್ಷಣಕ್ಕೆಯೆ ಆಕೆ ತನ್ನವಳಲ್ಲವೆಂದು ತಿಳಿಯಬೇಕಾಗಿ ಬಂದರೆ ಎಂಥ ವಿಪರೀತ! ಆತ ಮನೆಬಿಟ್ಟು, ಹೊರಬಿದ್ದು ಅಪರಾತ್ರಿಯಲ್ಲಿ ಎಲ್ಲೆಲ್ಲಿಯೊ ವಿಮನಸ್ಕನಾಗಿ ಅಲೆದಾಡಿದ. ಹಿಂದಿರುಗಿ ಬಂದು ನಿದ್ರೆಹೋದ ಎಲಿಝಬೆತ್‌ಳನ್ನು ನಿಟ್ಟಿಸಿ ನೋಡಿದ. ಕೂದಲು ಬಣ್ಣ ಬೇರೆಯಾಗಿತ್ತು. ಮುಖದ ಮಾಟದಲ್ಲಿ ಯಾವದೋ ಒಂದು ವ್ಯತ್ಯಾಸವಿತ್ತು. "ಅಯ್ಯೋ, ಈಕೆ ನನ್ನವಳಲ್ಲ" ಎಂದು ಹತಾಶನಾಗಿ ಹಿಂದಿರುಗಿದ. ಮರುದಿನ ಬೆಳಿಗ್ಗೆ ಎಲಿಝಬೆತ್ ಎದ್ದು ಬಂದು, "ನಾನು ಇಡೀ ರಾತ್ರಿ ಯೋಚಿಸಿದೆ. ನೀನು ಹೇಳುವದೇ ಸರಿ- ಇನ್ನು ಮುಂದೆ ನೀನೇ ನನಗೆ ತಂದೆ. ಹೌದು, ಅದು ಹಾಗಿರುವದೇ ಸರಿ –" ಎಂದು ಮುಂತಾಗಿ ಅಕ್ಕರೆಯಿಂದ ಮಾತನಾಡುತ್ತಿದ್ದುದನ್ನು ನೋಡಿ ಹೆಂಚರ್ಡನಿಗೆ ಯಾವ ಯಾತನೆಯಾಯಿತೊ! ಆಕೆಯನ್ನು ಮುದ್ದಿಸಿದ. ಆದರೆ ಅದರಲ್ಲಿ ಸಂತೋಷವಿರಲಿಲ್ಲ.

( ೭ )

ಆಕೆ ತನ್ನವಳಲ್ಲವೆಂದು ಮನವರಿಕೆಯಾದ ಕ್ಷಣದಿಂದ ಹೆಂಚರ್ಡ ಆಕೆಯಿಂದ ದೂರವಾಗತೊಡಗಿದ. ದಿನ ಕಳೆದ ಹಾಗೆ ಕಿರುಕುಳಕ್ಕೂ ಪ್ರಾರಂಭವಾಯಿತು. ಆಕೆಯ ಬರಹ ಚೆನ್ನಾಗಿರ

ಲಿಲ್ಲವೆಂದು, ಆಕೆಯ ಮಾತಿನ ರೀತಿ ಹಳ್ಳಿಗಾಡು ಎಂದು, ಊರಿಗೆ ಬಂದ ದಿನ ತಂಗುಮನೆಯಲ್ಲಿ ಪರಿಚಾರಿಕೆಯಾಗಿ ಕೆಲಸ ಮಾಡಿ ತನ್ನನ್ನು ಅವಮಾನಗೊಳಿಸಿದಳೆಂದು ಆಪಾದನೆಗಾರಂಭವಾಯಿತು. ತಾನು ತಂದೆಯೆಂದು ಹೇಳಿಕೊಂಡಂದಿನಿಂದಲೇ ಮೊದಲಾದ ಈ ಸ್ಥಿತ್ಯಂತರವನ್ನು ಕಂಡು ಎಲಿಝಾಬೆತ್ ನೊಂದಳು. ತಾನು ಅಲ್ಲಿಂದ ಹೊರಟು ಬೇರೆಯಾಗಿರದೆ ಮಾರ್ಗವಿಲ್ಲವೆನ್ನುವವರೆಗೂ ಆಕೆಗೆ ಮನಸ್ತಾಪವಾಯಿತು. ಹೀಗೆ ದುಃಖಿಸುತ್ತಿದ್ದಾಗ ಆಕೆ ಸಾಮಾನ್ಯವಾಗಿ ತನ್ನ ತಾಯಿಯ ಗೋರಿಯ ಹತ್ತಿರ ಹೋಗಿ ಕುಳಿತು ಕಣ್ಣೀರು ಹಾಕುತ್ತಿದ್ದಳು.

ಒಂದು ದಿನ ಹೀಗೆಯೆ ವಿಪರೀತ ವೇದನೆಗೊಳಗಾಗಿ ತನ್ನ ತಾಯ ಜೊತೆಯಲ್ಲಿ ತಾನೂ ಸತ್ತುಹೋಗಬಾರದಾಗಿತ್ತೆ ? ಎಂದುಕೊಳ್ಳುತ್ತಿದ್ದಾಗ ಹತ್ತಿರದಲ್ಲಿಯೆ ಒಬ್ಬ ಚೆಲುವೆ ಬಂದು ನಿಂತಿದ್ದನ್ನು ಕಂಡಳು. ಯಾರು, ಎಂತು ಎಂಬ ಮಾತಾದಮೇಲೆ ಆ ಚೆಲುವೆ ತೋರಿದ ಸಹಾನುಭೂತಿಗಾಗಿ ಎಲಿಝಾಬೆತ್ ತನ್ನ ತೊಡಕಿನ ಪರಿಸ್ಥಿತಿಯನ್ನು ವಿವರಿಸಿದಳು. ಅದನ್ನು ಕೇಳಿಕೊಂಡು ಆಕೆ "ಹಾಗಿದ್ದರೆ ನೀನು ಚಿಂತೆಪಡಬೇಕಾದದ್ದಿಲ್ಲ. ನಾನು ಈ ಊರಲ್ಲಿ ಒಬ್ಬಂಟಿಗಳಾಗಿ ಇದ್ದೇನೆ. ಜೀವನದ ಅನುಕೂಲವಿದೆ. ನನಗೆ ಜೊತೆಗಾತಿಯಾಗಿ ಇರುವ ಯಾರಾದರೂ ನನಗೆ ಬೇಕಾಗಿದ್ದಾರೆ. ನೀನು ಬರುವ ಮನಸ್ಸು ಮಾಡಿದರೆ ಆಗಬಹುದು," ಎಂದು ಹೇಳಿದಳು. ತಂದೆಯ ತಿರಸ್ಕಾರದ ನಡತೆಯಿಂದ ಬೇಸರಗೊಂಡಿದ್ದ ಆಕೆ ತಟ್ಟನೆ ಒಪ್ಪಿದಳು. ಮನೆಗೆ ಬಂದು ತಂದೆಗೆ ತಾನು ಬೇರೆಯಾಗಿರಬೇಕೆಂದುಕೊಂಡುದನ್ನು ತಿಳಿಸಿದಳು. ಎಲ್ಲಿ? ಎಂದು ಕೇಳಿದ್ದಕ್ಕೆ "ಮಿಸ್ ಟೆಂಪಲ್‌ಮನ್ ಹತ್ತಿರ" ಎಂದು ಹೇಳಿದ್ದನ್ನು ಕೇಳಿ ಆತ ಬೆಚ್ಚಿದ. ಆದರೆ ಎಲಿಝಾಬೆತ್ ಅದನ್ನು ಗಮನಿಸುವ ಮನಃಸ್ಥಿತಿಯಲ್ಲಿರಲಿಲ್ಲ. ತನ್ನ ಇದ್ದ ಬಿದ್ದ ಸಾಮಾನುಗಳನ್ನು ಕಟ್ಟಿಕೊಂಡು ಅಂದೇ ಎಲಿಝಾಬೆತ್ ತನ್ನ ಬಿಡಾರವನ್ನು ಬದಲಾಯಿಸಿದಳು.

ಎಲಿಝಾಬೆತ್‌ಳಿಗೆ ಸಹಾನುಭೂತಿ ತೋರಿದ ಮಿಸ್ ಟೆಂಪಲ್ಮನ್ ಇನ್ನಾರೂ ಆಗಿರದೆ ಹೆಂಚರ್ಡನ ಒಂದು ಕಾಲದ ಪ್ರೇಯಸಿಯಾಗಿದ್ದ ಲ್ಯೂಸೆಟಾ ಆಗಿದ್ದಳು. ಸೂಸನ್‌ಳ ನಿಧನ ವಾರ್ತೆಯನ್ನು ತಿಳಿದುಕೊಂಡು ತಾನು ಹೆಂಚರ್ಡನನ್ನು ಮದುವೆಯಾಗಬಹುದೆಂಬ ಆಸೆಯಿಂದ ಊರಿಗೆ ಅದೇ ಬಂದಿದ್ದಳು. ಈ ವಿಷಯವನ್ನು ಆಕೆ ಆತನಿಗೆ ಆಗಲೆ ಕಾಗದ ಬರೆದು ತಿಳಿಸಿದ್ದಳು. ಸೋದರತ್ತೆಯೊಬ್ಬಳ ಆಸ್ತಿ ಕೈಗೆ ಬಂದಿತ್ತೆಂದೂ ತಾನು ಸ್ವತಂತ್ರವಾಗಿ ಬಂದಿರಬೇಕೆಂದುಕೊಂಡಿದ್ದಳೆಂದೂ ಮುಂದಿನ ಯೋಜನೆ ಆತನಿಗೆ ಸೇರಿದ್ದೆಂದೂ ಆಕೆ ಬರೆದಿದ್ದಳು. ಎಲಿಝಾಬೆತ್‌ಳ ಬಾಯಿಂದ ಆ ಹೆಸರನ್ನು ಕೇಳಿ ಹೆಂಚರ್ಡ ಬೆಚ್ಚಿದ್ದು ಅದಕ್ಕಾಗಿ. ಅವರಿಬ್ಬರ ಸಂಬಂಧ ಅವಳಿಗೆ ತಿಳಿಯದು. ಎಲಿಝಾಬೆತ್ ತನ್ನ ಹತ್ತಿರವಿದ್ದರೆ ಆಕೆಯನ್ನು ನೋಡುವ ನೆಪದಿಂದ ಹೆಂಚರ್ಡ ತನ್ನಲ್ಲಿಗೆ ಹೆಚ್ಚಾಗಿ ಬರಲು ಅನುಕೂಲವಾಗುವದೆಂಬ ಸ್ವಾರ್ಥವೂ ಲ್ಯೂಸೆಟಾಳ ಸಹಾನುಭೂತಿಗೆ ಕಾರಣವಾಗಿತ್ತು.

ಲ್ಯೂಸೆಟಾಳಿಂದ ಕಾಗದ ಬಂದ ಸಾಯಂಕಾಲವೇ ಆಕೆಯನ್ನು ಕಾಣಲೆಂದು ಹೆಂಚರ್ಡ ಹೋಗಿದ್ದ. ಆದರೆ ಆಗ ಆತನನ್ನು ನೋಡಲಾಗುವದಿಲ್ಲವೆಂದು ಆಕೆ ಹೇಳಿ ಕಳುಹಿದ್ದಳು. ಅಬ್ಬಾ, ಎಂಥ ಅಟ್ಟಹಾಸ ಈಕೆಯದು? ಇನ್ನು ತಾನಾಗಿಯೆ ಹೇಳಿ ಕಳುಹುವ ವರೆಗೆ ತಾನು ಬರತಕ್ಕದ್ದಲ್ಲ ಎಂದುಕೊಂಡು ಮನೆಗೆ ಹಿಂತಿರುಗಿದ್ದ. ಮುಂದೆ ಎರಡುಮೂರು ದಿನ ಕಾಯ್ದರೂ ಹೆಂಚರ್ಡ ಬರಲಿಲ್ಲ. ತಾನಿದ್ದ ಮನೆಯೆದುರಿನ ಪೇಟೆಯಲ್ಲಿ ಎರಡು ಗಂಟೆ ಬಂದಿದ್ದರೂ ಒಳಗೆ ಬರಲಿಲ್ಲವಾದ್ದರಿಂದ ನಿರಾಶೆಗೊಂಡಳು. ಎಲಿಝಾಬೆತ್‌ಳ ಮೂಲಕ ಬಂದಿರಲಿಕ್ಕಿಲ್ಲವೆಂದು ಆಕೆಯನ್ನು ಏನೇನೋ ಕೆಲಸ ಹೇಳಿ ಹೊರಗೆ ಕಳುಹಿ ಕೂಡಲೆ ಬರಬೇಕೆಂದು ಚೀಟಿ ಬರೆದು ಕಳುಹಿದಳು. ಆತನ ಏಕಾಂತ ಸ್ವಾಗತಕ್ಕೆ ಸಿದ್ಧಳಾಗಿ ಕುಳಿತಳು. ಯಾರಾದರೂ ಬಂದರೆ ನೇರವಾಗಿ ಒಳಗೆ ಕಳುಹಬೇಕೆಂದು ಬಾಗಿಲಲ್ಲಿಯ ಸೇವಕನಿಗೆ ಹೇಳಿದ್ದಳು.

ಬಾಗಿಲು ಸದ್ದಾಯಿತು. ಯಾರೋ ಒಳಗೆ ಬಂದರು. ಆದರೆ ಬಂದವ ಹೆಂಚರ್ಡ ಆಗಿರಲಿಲ್ಲ!

( ೮ )

ಆಕೆಯು ಎದುರು ಬಂದು ನಿಂತ ವ್ಯಕ್ತಿ ಫಾರ್ಫ್ರೆ. ಎಲಿಝಾಬೆತ್‌ಳನ್ನು ನೋಡಿಕೊಂಡು ಹೋಗಲು ಬಂದಿದ್ದ. ಆಕಸ್ಮಿಕವಾದ ಈ ಸಂದರ್ಶನ ವಿಚಿತ್ರವಾಗಿಯೆ ಪರಿಣಮಿಸಿತು. ಯಾವದೋ ಒಂದು ಮೋಹಿನಿ ಅವರಿಬ್ಬರನ್ನೂ ಆ ಕ್ಷಣಕ್ಕೆ ಆವರಿಸಿತು. ಕೆಲ ಮಟ್ಟಿಗೆ ಎಲಿಝಾಬೆತ್‌ಳಲ್ಲಿ ಅನುರಕ್ತನಾಗಿದ್ದ ಫಾರ್ಫ್ರೆ ಆಕೆಯನ್ನು ನೋಡ ಬಂದವ ಲ್ಯೂಸೆಟಾಳಲ್ಲಿ ಮೋಹಗೊಂಡ. ಅಂಥ ಚೆಲುವು, ವೈಯಾರ ಆಕೆಯದು. ಹೆಂಚರ್ಡನಿಗಾಗಿ ಊರಲ್ಲಿ ಮನೆಮಾಡಿಕೊಂಡು, ಆ ಕ್ಷಣಕ್ಕೆ ಆತನಿಗಾಗಿ ಆತುರದಿಂದ ಕಾಯುತ್ತಿದ್ದ ಲ್ಯೂಸೆಟಾ ಫಾರ್ಫ್ರೆಯಲ್ಲಿ ಮೋಹಗೊಂಡಳು. ಅಂಥ ಬದಲಾವಣೆ ಒಂದು ಕ್ಷಣದಲ್ಲಿ ನಡೆಯಿತು. ಅನಿರೀಕ್ಷಿತವಾಗಿ ಕೂಡಿಬಂದ ಸಂದರ್ಶನ ಅವರಿಬ್ಬರನ್ನೂ ಹತ್ತಿರ ಸೆಳೆಯಿತು. ಉಪಚಾರದಿಂದ ಮೊದಲಾದ ಮಾತು ಉಪಚಾರವನ್ನು ಮರೆತು ಆತ್ಮೀಯವಾಯಿತು. "ಪೇಟೆಗೆ ಹಿಂದಿರುಗಬೇಕು. ಏನೋ ಮಾತು ಬೆಳೆಯಿತು" ಎಂದು ಆತ ಹೇಳಿದ್ದಕ್ಕೆ, "ಅಯ್ಯೋ, ಈ ಪ್ರಪಂಚದಲ್ಲಿ ಪೇಟೆ, ವ್ಯವಹಾರ ಎನ್ನುವದೇ ಇರಬಾರದಾಗಿತ್ತು" ಎಂದು ಆಕೆ ಹೇಳುವಂತಾಯಿತು. "ಈಗ ನಡೆದದ್ದು ತುಂಬ ವಿಚಿತ್ರ" ಎಂದು ಆಕೆ ಹೇಳಿದ್ದಕ್ಕೆ, "ಹೌದು. ಇಲ್ಲಿಂದ ಹೊರಟು ಹೋದ ಮೇಲೆಯೂ ಹೃದಯವನ್ನು ಆವರಿಸಿ ನಿಲ್ಲಬಹುದಾದ ವಿಷಯ ಇದು" ಎಂದು ಆತ ಹೇಳಿದ್ದ. ಒಟ್ಟಿನಲ್ಲಿ ಆಕೆಯ ಮನಸ್ಸಿನಿಂದ ಹೆಂಚರ್ಡ ದೂರವಾಗುವಂತೆ, ಆತನ ಮನಸ್ಸಿನಿಂದ ಎಲಿಝಾಬೆತ್ ದೂರವಾಗುವಂತೆ ಮಾತು ಬೆಳೆಯಿತು. ಮತ್ತೆ ಬರುತ್ತೇನೆಂದು ಹೇಳಿ ಫಾರ್ಫ್ರೆ ಹೊರಟುಹೋದ. ಆತ ಹೋದ ಕೆಲವೇ ನಿಮಿಷಗಳಲ್ಲಿ ಹೆಂಚರ್ಡ ಬಂದು ಬಾಗಿಲು ತಟ್ಟಿದ. ತನಗೆ ತುಂಬ ತಲೆನೋವೆಂದೂ ಇನ್ನೊಮ್ಮೆ ಯಾವಾಗಲಾದರೂ ಕಾಣುವೆನೆಂದೂ ಆಕೆ ಹೇಳಿಕಳುಹಿಬಿಟ್ಟಳು!

ಮುಂದೆ ಬಂದೆರಡು ಸಲವೂ ಹೀಗೆಯೆ ಆಯಿತು. ಆದರೆ ಹೆಂಚರ್ಡ ನಿರಾಶೆಗೊಳ್ಳದೆ ಒಂದು ಸಲ ಮನೆಯಲ್ಲಿ ಆಕೆಯನ್ನು ಸಂಧಿಸಿ ನೇರವಾಗಿ ಮಾತನಾಡಿಸಿದ. "ಈ ಯಾವ ವಿಷಯವೂ ನಮ್ಮಿಬ್ಬರಿಗೆ ಹೊಸದಲ್ಲ. ನನ್ನ ಮಟ್ಟಿಗೆ ನಾನು ಸಿದ್ಧನಾಗಿದ್ದೇನೆ," ಎಂದುದಕ್ಕೆ ಆಕೆ "ಅಂಥ ಯಾವ ಅವಸರ? ಇನ್ನು ಕೆಲವು ಕಾಲ ಹೋಗಲಿ" ಎಂದು ಹೇಳಿದಳು. "ಹೀಗೆ ಮಾತು ಹಾರಿಸುವದು ಬೇಡ. ಹಳೆಯ ಕತೆ ಹೊರಬೀಳಬಾರದು" ಎಂದು ಬೆದರಿಸಿದ. ಆಕೆ ಮಣಿಯಲಿಲ್ಲ. ಮಾತು ತೇಲಿಸಿ ಆ ಸಲ ಪಾರಾದಳು.

ಹೆಂಚರ್ಡ ಮತ್ತೊಮ್ಮೆ ಬಂದ. ಇನ್ನಾರಲ್ಲಿಯೋ ಆಕೆ ಆಸಕ್ತಳಾಗಿದ್ದರಿಂದಲೆ ಆಕೆ ಹಾಗೆ ಮಾತನ್ನು ಹಾರಿಸುತ್ತಿದ್ದಾಳೆಂದು ಆತನಿಗೆ ಮನವರಿಕೆಯಾಗಿತ್ತು. ಆ ಇನ್ನೊಬ್ಬ ಪ್ರತಿಸ್ಪರ್ಧಿ ಯಾರು ಎಂಬುದನ್ನು ತಿಳಿಯೋಣವೆಂದೇ ಆತ ಬಂದಿದ್ದ. ಎಲಿಝಾಬೆತ್‌ಳೂ ಇದ್ದಳು. "ನಿನಗೆ ಫಾರ್ಫ್ರೆ ಗೊತ್ತೆ?" ಎಂದು ಆತ ಕೇಳಿದ್ದಕ್ಕೆ "ನಮ್ಮಿಬ್ಬರಿಗೂ ಗೊತ್ತು" ಎಂದು ಎಲಿಝಾಬೆತ್ ಹೇಳಿದಳು. ಆ ಮಾತು ಈ ಮಾತು ನಡೆಯುತ್ತಿರುವಾಗಲೆ ಬಾಗಿಲು ಸದ್ದಾಯಿತು. ನೇರವಾಗಿ ಫಾರ್ಫ್ರೆ ಒಳಗೆ ಬಂದ! ಮೂವರಿಗೂ ಸನ್ನಿವೇಶ ಕಷ್ಟದ್ದಾಯಿತು. ಲ್ಯೂಸೆಟಾ ಒಳಗಿನಿಂದಲೇ ಒದ್ದಾಡುತ್ತಿದ್ದಳು. ಇಬ್ಬರ ಒಡನೆಯೂ ಅನೌಪಚಾರಿಕವಾಗಿ ನಡೆದುಕೊಳ್ಳಲು ಪ್ರಯತ್ನಿಸುತ್ತಿದ್ದಳು. ಆದರೆ ನೋಡುವ ಕಣ್ಣಿಗೆ ಫಾರ್ಫ್ರೆ ಬಗೆಯಲ್ಲಿನ ಅನುರಕ್ತಿ ಸ್ಪಷ್ಟವಾಗಿತ್ತು. ಹೆಂಚರ್ಡ ಅಲ್ಲಿಂದ ಹೊರಟು ಹೋದಾಗ ಸತ್ಯಾಂಶ ಆತನಿಗೆ ತಿಳಿಯದಿದ್ದರೂ ನೂರು ಸಂಶಯಗಳು ಆತನನ್ನು ಕಾಡುತ್ತಿದ್ದವು. ತನ್ನ ಪ್ರತಿ-ಸ್ಪರ್ಧಿ ಫಾರ್ಫ್ರೆಯಾಗಿರಬೇಕೆಂಬ ಸಂಶಯವೂ ಆತನಿಗೆ ಬಂದಿತ್ತು. ವ್ಯವಹಾರದಲ್ಲಿ ಪ್ರತಿಸ್ಪರ್ಧಿಯಾಗಿದ್ದವ ಪ್ರೀತಿಯಲ್ಲಿಯೂ ಪ್ರತಿಸ್ಪರ್ಧಿಯಾದನೇ ಎಂಬ ಸಂತಾಪವೂ ತೊಡಗಿತ್ತು.

ಅಂದಿನ ಆ ಸಂದರ್ಶನದ ಫಲವಾಗಿ ಎಲಿಝಾಬೆತ್‌ಳಿಗೆ ಎರಡು ವಿಷಯ ಸ್ಪಷ್ಟವಾಯಿತು. ತಾನು ಫಾರ್ಫ್ರೆಯು ಆಸೆಯನ್ನು ತೊರೆಯಬೇಕು ಎನ್ನುವದೊಂದು; ತನ್ನ ತಂದೆ ಮತ್ತು ಫಾರ್ಫ್ರೆ ಇಬ್ಬರೂ ಲ್ಯೂಸೆಟಾಳಿಗಾಗಿ ಕಾತರರಾಗಿದ್ದಾರೆನ್ನುವದು ಇನ್ನೊಂದು. ಮೊದಲನೆಯ ಕಾರಣದಿಂದಾಗಿ ತಾನು ತನ್ನ ಯಜಮಾನಿಯಿಂದ ದೂರವಾಗಿರಬೇಕಾಯಿತು ಎಂಬುದನ್ನು ಆಕೆ ಮನಗಂಡಳು.

ಪ್ರೀತಿಯಲ್ಲಿಯೂ ಫಾರ್ಫ್ರೆ ಪ್ರತಿಸ್ಪರ್ಧಿಯಾದನೆಂಬ ಸಂದೇಹ ಬಂದಾಗ ಹೆಂಚರ್ಡ ಏನಾದರೂ ಮಾಡಿ ಆತನನ್ನು ಬಗ್ಗುಬಡಿಯಬೇಕೆಂದು ಹಟತೊಟ್ಟ. ಒಂದು ಕಾಲಕ್ಕೆ ಫಾರ್ಫ್ರೆಯ ಸ್ಥಳದಲ್ಲಿ ಸಂಚಾಲಕನಾಗಿ ಬರಬಹುದಾಗಿದ್ದ ಜಾಪ್‌ನನ್ನು ಬರಮಾಡಿ ಆತನೆದುರು ಪ್ರತಿಸ್ಪರ್ಧಿಯನ್ನು ಬೇಕಾದಹಾಗೆ ಆಡಿಕೊಂಡು ''ಏನು ಬೇಕಾದುದನ್ನು ಮಾಡು. ಆತನ ವ್ಯವಹಾರ ಪೂರ್ತಿಯಾಗಿ ಮಣ್ಣುಗೂಡಬೇಕು'' ಎಂದು ಹೇಳಿದ. ಫಾರ್ಫ್ರೆ ತನ್ನ ಕೆಲಸವನ್ನು ಕಸಿದುಕೊಂಡಿದ್ದನೆಂಬ ಅಸೂಯೆ ಜಾಪ್‌ನನ್ನು ಎಂದಿನಿಂದಲೂ ಕಾಡುತ್ತಿತ್ತು. ಆತ ಒಡನೆಯೆ ಒಪ್ಪಿದ.

ಇಡೀ ತಿಂಗಳು ಹವೆ ಸರಿಯಾಗಿರದ್ದರಿಂದ ಮುಂಬರುವ ಸುಗ್ಗಿಯಲ್ಲಿ ಗೋದಿಯ ಬೆಳೆ ಸರಿಯಾಗಿ ಬಾರದು. ಪೇಟೆಯಲ್ಲಿಯ ಗೋದಿಯನ್ನೆಲ್ಲ ಕೊಂಡುಬಿಟ್ಟರೆ ಫಾರ್ಫ್ರೆಯ ವ್ಯಾಪಾರ ತಾನಾಗಿಯೇ ಮುಗ್ಗುತ್ತದೆ ಎಂದು ಸಲಹೆ ನೀಡಿದ ಜಾಪ್. ಹೆಂಚರ್ಡ ಜ್ಯೋತಿಷಿಯನ್ನು ಕೇಳಿಕೊಂಡು ಬಂದ. ಗೋದಿಯ ಸುಗ್ಗಿ ಒಳ್ಳೆಯದಾಗುವಂತಿಲ್ಲ ಎಂದು ಜ್ಯೋತಿಷಿ ಎರಡೂ ದಂಡೆಯ ಮೇಲೆ ಕೈಇಟ್ಟು ಮಾತನಾಡಿದ್ದನ್ನು ಹೆಂಚರ್ಡ ತನ್ನ ಅಭಿಲಾಷೆಗೆ ಅನುಕೂಲವಾಗಿಯೆ ಅರ್ಥ ಮಾಡಿಕೊಂಡು ಕೈಗೆ ಸಿಕ್ಕ ಗೋದಿಯನ್ನೆಲ್ಲ ಕೊಂಡು ಶೇಖರಿಸಿದ.

ಆತನ ಕಣಜಗಳು ತುಂಬಿ ತುಳುಕುತ್ತಿರುವಾಗ ಹವೆ ಬದಲಾಯಿತು. ಗೋದಿಯ ಸುಗ್ಗಿ ಉತ್ತಮವಾಗುವ ಭರವಸೆ ಉಂಟಾಯಿತು. ನಡೆದದ್ದೂ ಹಾಗೆಯೇ. ಬೇಕಾದಷ್ಟು ಹೊಸ ಗೋದಿ ಪೇಟೆಗೆ ಬಂದಿತು. ಬೆಲೆ ನೆಲಕ್ಕಿಳಿಯಿತು. ಪರಿಣಾಮವೆಂದರೆ ಹೆಂಚರ್ಡ ಸಾಲಗಾರನಾದ. ಶೇಖರಿಸಿದ ಗೋದಿಯನ್ನು ಕೈಗೆ ಬಂದ ಬೆಲೆಗೆ ಮಾರಬೇಕಾಯಿತು. ಮುಂಧೋರಣೆಯಿಂದ ವ್ಯವಹಾರ ಸಾಗಿಸಿದ ಫಾರ್ಫ್ರೆಗೆ ಕೈತುಂಬ ದುಡ್ಡು ಬಂದಿತು.

ಹೆಂಚರ್ಡ ಪೂರ್ತಿ ಹಾಳಾಗುವ ಪರಿಸ್ಥಿತಿ ಒದಗಿತು. ಬ್ಯಾಂಕಿನವರಿಗೆ ಆಸ್ತಿಪಾಸ್ತಿಗಳನ್ನು ಅಡವಾಗಿ ಬರೆದುಕೊಟ್ಟು ಹೊರಬರುತ್ತಿದ್ದಾಗ ಜಾಪ್ ಸಿಕ್ಕ. '' ಒಳ್ಳೆಯ ಮನುಷ್ಯ! ಚೆನ್ನಾಗಿ ಸಲಹೆ ಹೇಳಿ ಹಾಳುಮಾಡಿದೆ! ಈಗ ನೀನು ಮಾಡಿದಷ್ಟು ಉಪಕಾರ ಸಾಕು '' ಎಂದು ಹೇಳಿ ಆತನನ್ನು ಹೆಂಚರ್ಡ ಕೆಲಸದಿಂದ ದೂರವಾಗಿಸಿದ. '' ಇದು ಸರಿಯಾದ ಮಾತಲ್ಲ. ಇದಕ್ಕಾಗಿ ಪಶ್ಚಾತ್ತಾಪ ಪಡಬೇಕಾದೀತು" ಎಂದು ಜಾಪ್ ಹೇಳಿದ್ದನ್ನು ಹೆಂಚರ್ಡ ಕೇಳಿದನೋ ಇಲ್ಲವೋ ! ''ತುಂಬಾ ನಷ್ಟವಾಯಿತೆ ?'' ಎಂದು ಫಾರ್ಫ್ರೆ ಸಹಾನುಭೂತಿಯನ್ನು ತೋರಿಸಬೇಕೆಂದಾಗ ಸ್ವಾಭಿಮಾನಿಯಾದ ಹೆಂಚರ್ಡ ಹೇಳಿದ್ದು : '' ವ್ಯವಹಾರ ಎಂದ ಮೇಲೆ ಹಾಗೂ ನಡೆಯುತ್ತದೆ, ಹೀಗೂ ನಡೆಯುತ್ತದೆ. ಅದು ಯಾವ ದೊಡ್ಡ ಮಾತು? ''

( ೯ )

ಪ್ರತಿಸ್ಪರ್ಧಿಗಳ ತುರುಸಿನ ಬುದ್ಧಿ ಅವರಿಬ್ಬರ ಆಳುಗಳ ವರೆಗೂ ಬಂದಿತು. ಒಂದು ಸಂಜೆ ಅವರಿಬ್ಬರ ಹುಲ್ಲು ಬಂಡಿಗಳು ಲ್ಯೂಸೆಟಾಳ ಮನೆಯ ಹತ್ತಿರದ ಒಂದು ಇಕ್ಕಟ್ಟಾದ ಓಣಿಯಲ್ಲಿ ಇದಿರಾಗಿ ಬಂದವು. ಹೆಂಚರ್ಡನ ಬಂಡಿ ಉರುಳಿತು. ಆಳುಗಳು ಕಡಿದಾಡಿದರು. ರಾತ್ರಿ ಅದನ್ನು ನೋಡಬಂದ ಹೆಂಚರ್ಡ ಹತ್ತಿರದ ಪೋಲಿಸಿನವನಿಗೆ ಹೇಳಿ ಸರಿಪಡಿಸಿದ ನಂತರ ಹೋಗಿ ಲ್ಯೂಸೆಟಾಳನ್ನು ಯಾಕೆ ನೋಡಬಾರದು ಎಂದುಕೊಂಡು ಆಕೆಯ ಮನೆಯ

ಬಾಗಿಲು ತಟ್ಟಿದ. ಆಕೆಗೆ ಇನ್ನೆಲ್ಲಿಯೋ ಹೋಗ ಬೇಕಾಗಿದೆ ಎಂದು ಉತ್ತರ ಬಂದಿತು. ಎಲ್ಲಿಗೆ ಹೋಗುತ್ತಿರಬಹುದು ಎಂದು ಅಲ್ಲಿಯೆ ಕಾದು ನೋಡುವದೆಂದು ನಿಂತಿದ್ದಂತೆ, ಸರಿಯಾಗಿ ಒಂಬತ್ತು ಗಂಟೆಗೆ ಫಾರ್ಫ್ರೆ ಬಂದ. ಮುಂದೆ ಕೆಲವೇ ನಿಮಿಷಗಳಲ್ಲಿ ಒಳ್ಳೇ ವೇಷಭೂಷಿತ ಳಾಗಿ ಆತನ ಜೊತೆಯಲ್ಲಿ ಲ್ಯೂಸೆಟಾ ಬೆಳುದಿಂಗ ಳಲ್ಲಿ ಹೊರಬಿದ್ದಳು.

ಅವರು ಹೋಗುವದೆಲ್ಲಿಗೆ, ಮಾತನಾಡುವ ದೇನೆಂಬುದನ್ನು ತಿಳಿಯುವ ಕುತೂಹಲವನ್ನು ಹೆಂಚರ್ಡನಿಗೆ ತಡೆಯಲಾಗಲಿಲ್ಲ. ಅವರನ್ನು ನಿಧಾನವಾಗಿ ಹಿಂಬಾಲಿಸಿದ. ಹೂವು ಹಾಸಿದ ಹಾಗೆ ಬೆಳುದಿಂಗಳು ಬೆಳಗಿತ್ತು. ಪ್ರಣಯಿಗಳಿ ಬ್ಬರೂ ಊರ ಹೊರಗಡೆಯಲ್ಲ ಒಂದೆಡೆ ಕುಳಿ ತರು. ಅಡಗಿ ನಿಂತ ಹೆಂಚರ್ಡನಿಗೆ ಅವರ ಮಾತುಗಳು ಕೇಳುತ್ತಿದ್ದವು.

"ನಿನಗೆ ನನ್ನಲ್ಲಿ ಪ್ರೀತಿಯಿಲ್ಲವೆ ?" ಎಂದು ಫಾರ್ಫ್ರೆ ಕೇಳಿದ.

ಆಕೆ, "ನನಗೆ ಇನ್ನಾರಲ್ಲಿಯೂ ಪ್ರೀತಿಯಿಲ್ಲ" ಎಂದು ಹೇಳಿದಳು.

"ಹಾಗಾದರೆ ಮದುವೆಯಾಗುವಿಯಾ ?"

"ಸಂತೋಷವಾಗಿ ಆಗುವೆ. ಆದರೆ ಒಂದು ವಿಷಯ ನಾನು ಹೇಳಿದ ಹಾಗೆ ನಡೆಯಬೇಕು. ಇಂದಿಲ್ಲ ನಾಳೆ ಈ ಊರಲ್ಲಿರುವದು ನನಗೆ ಬೇಡವೆನಿಸಿದರೆ ಹಾಗೆ ಮಾಡಲು ನೀನು ಒಪ್ಪ ಬೇಕು. ಆಗಬಹುದೆ?"

ಕೇಳಬೇಡವಾದದ್ದನ್ನು ಕೇಳಿದ ಹೆಂಚರ್ಡ ಮುಂದಿನ ಮಾತು ಕೇಳಲಿಲ್ಲ. ನೇರವಾಗಿ ಹಿಂತಿ- ರುಗಿ ಲ್ಯೂಸೆಟಾಳ ಮನೆಯಲ್ಲಿ ಬಂದು ಕಾಯುತ್ತ ನಿಂತ. ಕೆಲಹೊತ್ತಿನಮೇಲೆ ಆಕೆಯೂ ಬಂದಳು. ಅಕಸ್ಮಾತ್ತಾಗಿ ಇದಿರಿಗೆ ಬಂದ ಆತನನ್ನು ನೋಡಿ ಬೆಚ್ಚಿದಳು. ಹೆಂಚರ್ಡನಿಗೆ ತಡೆಯದಾಗಿತ್ತು.

ನೇರವಾಗಿ ಹೇಳಿದ: "ನನಗೆ ಒಂದು ವಿಷಯ ಹೇಳಬೇಕಾಗಿದೆ."

"ನನಗೆ ಕೇಳುವ ಇಷ್ಟವಿಲ್ಲ."

"ಅದರ ನಿಷ್ಕರ್ಷೆ ಆಗಲೇಬೇಕು."

"ಒಂದು ಕಾಲಕ್ಕೆ ನಾನಾಗಿ ಮದುವೆಯಾಗು ಎಂದಾಗ ನೀನು ಬೇಡ ಎಂದೆ."

"ಈಗ ನಾನು ಅದಕ್ಕೆಯೆ ಬಂದದ್ದು."

"ಆಗಿನ ಮಾತು ಬೇರೆ, ಈಗಿನ ಮಾತು ಬೇರೆ. ಆಗ ನನಗೆ ಬೇರೆ ಉಪಾಯವಿರಲಿಲ್ಲ. ಈಗ ನನ್ನ ಕೈಯಲ್ಲಿ ದೊಡ್ಡ ಆಸ್ತಿ ಇದೆ. ಸ್ವಂತ ವಾಗಿ ವಿಚಾರ ಮಾಡಬಲ್ಲ ಪರಿಸ್ಥಿತಿಯೂ ಇದೆ."

ಹೆಂಚರ್ಡನ ಮಾತು ಕಠೋರವಾಯಿತು. "ಅದೆಲ್ಲ ನನಗೆ ಗೊತ್ತು. ಯಾವ ವಿಧದಲ್ಲಿ ನನ ಗಿಂತ ಆತ ಒಳ್ಳೆಯವ? ಏನು ಹೆಚ್ಚಳ? ಸಾಧ್ಯವೇ ಇಲ್ಲ. ಈಗಿಂದೀಗ ನೀನು ನನ್ನನ್ನು ಮದುವೆಯಾಗುತ್ತೇನೆಂದು ಮಾತು ಕೊಡಲೇ ಬೇಕು. ಅದು ಕೂಡ ಇನ್ನೊಬ್ಬರ ಎದುರಿಗೆ," ಎಂದವನೆ ಆತ ಎಲಿಝಾಬೆತ್‌ಳನ್ನು ಕೂಗಿ ಕರೆದ. ಆಕೆ ಬಂದಕೂಡಲೆ ಲ್ಯೂಸೆಟಾಳನ್ನು ಕೇಳಿದ:

"ನನ್ನನ್ನು ನೀನು ಮದುವೆಯಾಗುತ್ತೀ ಯಲ್ಲವೆ?"

"ನಿನ್ನಿಷ್ಟವಿದ್ದರೆ ನಾನು ಒಪ್ಪಲೇಬೇಕು."

"ಒಪ್ಪುತ್ತೀಯಾ ?"

"ಹೌದು, ಒಪ್ಪುತ್ತೇನೆ.".

ಯಾವದೂ ತಿಳಿಯದಾಗಿದ್ದ ಎಲಿಝಾಬೆತ್ ತಂದೆಯನ್ನು ಕುರಿತು "ಇದು ಎಂಥ ಒತ್ತಾಯ? ತೀರ ಅನ್ಯಾಯವಲ್ಲವೆ?" ಎಂದುದಕ್ಕೆ ಆತ, "ಎಂಥ ಹುಚ್ಚಿ ನೀನು! ಈಕೆ ನನ್ನನ್ನು ಮದು ವೆಯಾದರೆ ನೀನು ಫಾರ್ಫ್ರೆಯನ್ನು ಮದುವೆ ಯಾಗಬಹುದು" ಎಂದು ಹೇಳಿ ಹೊರಟು ಹೋದ.

(೧೮)

ನಗರಾಧ್ಯಕ್ಷ ಊರಲ್ಲಿರಲಿಲ್ಲವಾದ್ದರಿಂದ ಸ್ಥಾನ ಮಾನದಿಂದ ಎರಡನೆಯವನಾಗಿದ್ದ ಹೆಂಚರ್ಡ ಮರುದಿನ ಒಂದು ವಿಚಾರಣೆಯನ್ನು ನಡಸಬೇ ಕಾಗಿತ್ತು. ಮುದುಕಿಯೊಬ್ಬಳು ಸಾರ್ವಜನಿಕ ಸ್ಥಳದಲ್ಲಿ ಅಸಭ್ಯವಾಗಿ ನಡೆದುಕೊಂಡಿದ್ದಳೆಂ ಬುದು ಆಪಾದನೆಯಾಗಿತ್ತು. ವೇಳೆಗೆ ಸರಿಯಾಗಿ

ವಿಚಾರಣೆಗೆ ಪ್ರಾರಂಭವಾಯಿತು. ಹೇಳಬೇಕಾದುದನ್ನು ಪೋಲೀಸಿನವನು ಹೇಳಿದ. ಆಪಾದಿತಳ ಹೇಳಿಕೆಯ ಸರದಿ ಬಂದಾಗ ಆಕೆ ತನ್ನ ಕತೆಯನ್ನು ಮೊದಲುಮಾಡಿದಳು.

"ಇಪ್ಪತ್ತು ವರ್ಷಗಳ ಹಿಂದೆ ನಾನು ವೆಡನ್ ಪ್ರಾಯರ್ಸ್ ಹಳ್ಳಿಯಲ್ಲಿ ಗೋದಿಯ ಗಂಜಿಯ ಅಂಗಡಿಯನ್ನು ನಡಸುತ್ತಿದ್ದೆ. ಆಗ—"

ಇದಕ್ಕೆ ಕೋರ್ಟಿನ ಗುಮಾಸ್ತ, "ಆ ಹಳೆಯ ಕತೆ ಯಾರಿಗೆ ಬೇಕಾಗಿದೆ? ವಿಚಾರಣೆಗೆ ಅದರ



"ಹೆಂಡತಿಯನ್ನು ಹರಾಜುಮಾಡಿದವನೀತ!"

ದೇನು ಸಂಬಂಧ?" ಎಂದ. ಆಕೆ "ಸಂಬಂಧವಿದೆ. ಅಂದು ನನ್ನ ಅಂಗಡಿಯಲ್ಲಿ ಹೆಂಡತಿಯನ್ನು ಹರಾಜು ಮಾಡಿದ ಮಹಾನುಭಾವನೆ ಇಂದು ಇಲ್ಲಿ ನ್ಯಾಯಾಧೀಶನಾಗಿದ್ದಾನೆ. ನನಗಿಂತ ಆತ ಏನು ಹೆಚ್ಚು ಎಂದು ಆತನೀಗ ನನ್ನ ಬಗೆಯಲ್ಲಿ ತೀರ್ಪು ಹೇಳಬೇಕು?"

ಗುಮಾಸ್ತ, "ಎಲ್ಲಿಯದೊ ಕಟ್ಟುಕತೆ. ಬಾಯಿ ಮುಚ್ಚಬಾರದೆ?" ಎಂದ. ಆದರೆ ಹೆಂಚರ್ಡ ಎದ್ದು ಧೀರನಾಗಿ, "ಅದು ಕಟ್ಟುಕತೆಯಲ್ಲ. ನಿಜವಾಗಿ ನಡೆದದ್ದು. ಆಕೆ ಹೇಳುವದು ಸರಿಯೆ. ತೀರ್ಪುಕೊಡುವ ಯೋಗ್ಯತೆಯುಳ್ಳವ ನಾನಲ್ಲ" ಎಂದು ಹೇಳಿ ನ್ಯಾಯಾಸ್ಥಾನದಿಂದ ಎದ್ದುಬಿಟ್ಟ. ಕೋರ್ಟಿನಲ್ಲಿ ಕೋಲಾಹಲ. ಊರ ತುಂಬ ಸುದ್ದಿ ಹರಡಿತು. ಹೆಂಚರ್ಡನ ಸಾಮಾಜಿಕ ಸ್ಥಾನಮಾನಕ್ಕೆ ಪೂರ್ತಿಯಾಗಿ ಚ್ಯುತಿ ಬಂದಿತು.

ಹೆಂಚರ್ಡನಿಗೆ ಒತ್ತಾಯಕ್ಕಾಗಿ ಕೊಟ್ಟ ವಚನದಿಂದ ನೊಂದ ಲ್ಯೂಸೆಟಾ ಹತ್ತಿರದ ಹಳ್ಳಿಯಲ್ಲಿ ನಾಲ್ಕು ದಿನ ಇದ್ದು ಬರುತ್ತೇನೆಂದು ಹೇಳಿ ಹೊರಟುಹೋದಳು. ಆ ಮಧ್ಯಾಂತರದಲ್ಲಿ ಹೆಂಚರ್ಡ ಎರಡು ಮೂರು ಬಾರಿ ಬಂದು ಹೋದ. ನಾಲ್ಕನೆಯ ದಿನ ಬಂದು ಕೇಳಿದಾಗ ಎಲಿಝಾಬೆತ್, "ಆಕೆ ತಿರುಗಿ ಬಂದಿದ್ದಾಳೆ. ಅಡ್ಡಾಡಲು ಹೋದವಳು ಸಾಯಂಕಾಲ ಹಿಂದಿರುಗುತ್ತಾಳೆ" ಎಂದು ಹೇಳಿದಳು ಅದೇಕೊ ಎಲಿಝಾಬೆತ್ಳಿಗೆ ಆಕೆಯ ಹತ್ತಿರ ಹೋಗಿರಬೇಕೆಂದು ತೋರಿತು. ಸರಸರನೆ ಹೆಜ್ಜೆ ಹಾಕಿ ಲ್ಯೂಸೆಟಾಳನ್ನು ಕೂಡಿದಳು.

ಮಾತನಾಡಬೇಕೆನ್ನುವಷ್ಟರಲ್ಲಿ ತಮ್ಮಿಬ್ಬರನ್ನೂ ಹೊಲದಲ್ಲಿಯ ಒಂದು ಇರುಕಳು ಹೋರಿ ಬೆನ್ನಟ್ಟಿದ್ದು ಕಾಣಿಸಿತು. ಹೆದರಿ ಹತ್ತಿರದಲ್ಲಿಯ ಕಣಜವನ್ನು ಸೇರಿದರು. ಅಲ್ಲಿಯೂ ಅದು ನುಗ್ಗುವದರಲ್ಲಿತ್ತು. ಆದರೆ ಅಡ್ಡಾಡಹೋದ ಲ್ಯೂಸೆಟಾಳನ್ನು ದಾರಿಯಲ್ಲಿ ಸಂಧಿಸಬೇಕೆಂದು ಆ ಕಡೆಗೆ ಬಂದ ಹೆಂಚರ್ಡ ಈ ಸನ್ನಿವೇಶವನ್ನು ಕಂಡು ಧೈರ್ಯವಾಗಿ ಹೋರಿಯ ಮೂಗುದಾರವನ್ನು ಹಿಡಿದು ಕಟ್ಟಿಹಾಕಿ ಅವರಿಬ್ಬರನ್ನೂ ಪಾರು ಮಾಡಿದ. ಮೂವರೂ ಊರ ಕಡೆಗೆ ಹಿಂದಿರುಗುತ್ತಿದ್ದಾಗ ಲ್ಯೂಸೆಟಾಳ ಕೊರಳಬಟ್ಟೆ ಅಲ್ಲಿಯೇ ಉಳಿಯಿತೆಂದು ಅದನ್ನೆತ್ತಿಕೊಂಡು ಬರಲೆಂದು ಎಲಿಝಾಬೆತ್ ಹಿಂದಕ್ಕೆ ಧಾವಿಸಿದಳು.

ಇಬ್ಬರೇ ಉಳಿದೊಡನೆ ಹೆಂಚರ್ಡ ಹಳೆಯ



ಹೆಂಚರ್ಡ ನ್ಯಾಯಾಸ್ಥಾನದಿಂದ ಎದ್ದುಬಿಟ್ಟ

ವಿಷಯವನ್ನು ಪ್ರಸ್ತಾಪಿಸಿದ. "ಈಗಲೇ ನಿನಗೆ ಬೇಡವಾದರೆ ಬಿಡು. ನೀನು ಹೇಳಿದಾಗ ಆಗಲಿ. ಆದರೆ ಸದ್ಯಕ್ಕೆ ಒಂದು ವಿಷಯದಲ್ಲಿ ನೀನು ಸಹಾಯ ಮಾಡಬೇಕು. ವ್ಯಾಪಾರದಲ್ಲಿ ನನಗೆ ತುಂಬ ನಷ್ಟವಾಗಿದೆ. ಗ್ರೋವರ್ ಎನ್ನುವವನಿಗೆ ನಾನು ಹಣ ತೆರಬೇಕು. ನನ್ನನ್ನು ನೀನು ಮದುವೆಯಾಗಲಿರುವೆ ಎಂದು ಗ್ರೋವರ್‌ನಿಗೆ ಒಂದು ಮಾತು ನೀನು ಹೇಳಿದರೆ ಆತ ತಡೆಯುತ್ತಾನೆ. ಇಷ್ಟನ್ನಾದರೂ ನೀನು ಮಾಡಬೇಕು."

ಅದಕ್ಕೆ ಆಕೆ "ನಾನು ಮಾಡಬೇಕು, ನಿಜ. ಆದರೆ ಅದು ಅಸಾಧ್ಯವಾಗಿದೆ" ಎಂದಳು.

"ಯಾಕೆ ಅಸಾಧ್ಯ?" ಎಂದು ಕೇಳಿದ್ದಕ್ಕೆ ಆಕೆ ತಡೆಯಲಾಗದ ಸಂಕಟದ ದನಿಯಲ್ಲಿ ಹೇಳಿದಳು:

"ಯಾಕೆಂದರೆ—ಯಾಕೆಂದರೆ ಗ್ರೋವರ್‌ನೇ ನನ್ನ ಮದುವೆಗೆ ಸಾಕ್ಷಿ ಹಾಕಿದ್ದಾನೆ! ಏನು ಮಾಡಲಿ? ಫಾರ್ಫ್ರೆ ಕೂಡ ಮೊನ್ನೆ ದಿನ ನನಗೆ ಮದುವೆಯಾಯಿತು!"

ಮಾತು ಸಾಲದ ಉದ್ವೇಗದಿಂದ ಹೆಂಚರ್ಡ ನಿಂತಲ್ಲಿಯೆ ನಿಂತ. "ಅಯ್ಯೋ, ವಿಶ್ವಾಸಘಾತಕಿಯಾದ ಹೆಣ್ಣೆ!" ಎಂದು ಕೊನೆಗೆ ಅವನ ಬಾಯಿಂದ ಉದ್ಗಾರ ಹೊರಟಿತು. "ಹಾಗಿದ್ದರೆ ಅವನ ಹೆಂಡತಿಯನ್ನೇ ನಾನು ಇಂದು ಉಳಿಸಿದ್ದು?" ಎಂದು ಸಂತಾಪಗೊಂಡ. ಬೇಕಾದರೆ ಧನಸಹಾಯ ಮಾಡುವೆನೆಂದು ಆಕೆ ಹೇಳಿದಳು. ಆದರೆ ಹೆಂಚರ್ಡ "ನನ್ನ ಪ್ರತಿಸ್ಪರ್ಧಿಯ ಹೆಂಡತಿ ಹಾಕಿದ ಭಿಕ್ಷೆಯಿಂದ ನಾನು ಬದುಕಬೇಕಿಲ್ಲ" ಎಂದು ನಿಷ್ಠುರವಾಗಿ ಹೇಳಿಬಿಟ್ಟ.

ಇತ್ತ ಈ ಮಾತು ನಡೆದಾಗ ಹಿಂದುಳಿದ ಎಲಿಝಾಬೆತ್‌ಳನ್ನು ತನ್ನ ಗಾಡಿಯಲ್ಲಿ ಬರುತ್ತಿದ್ದ ಫಾರ್ಫ್ರೆ ಕಂಡು ಹತ್ತಿರದಲ್ಲಿ ಕೂರಿಸಿಕೊಂಡು ಊರ ಕಡೆಗೆ ಬರುತ್ತಿದ್ದ. ಅದೇ ತಮಗಾದ ಬಿಡುಗಡೆಯನ್ನು ಆಕೆ ವಿವರಿಸಿಯಾಯಿತು. ಆ ವಿಚಿತ್ರ ಸನ್ನಿವೇಶದಲ್ಲಿ ಇಬ್ಬರಿಗೂ ಮಾತನಾಡುವ ವಿಷಯವಿಲ್ಲದಾಗಿದ್ದರೆ ವಿಚಿತ್ರವೇನೂ ಅಲ್ಲ!

( ೧೧ )

ತಾನು ಫಾರ್ಫ್ರೆಯನ್ನು ಮದುವೆಯಾದದ್ದು ಸರಿ ಎಂದು ತನ್ನ ಜೊತೆಗಾತಿಯ ಬಾಯಿಂದ ಹೇಳಿಸಿಕೊಂಡು ಮದುವೆಯಾದ ಸಮಾಚಾರವನ್ನು ಹೇಳಬೇಕೆಂದಿದ್ದ ಲ್ಯೂಸೆಟಾಳಿಗೆ ನಿರಾಶೆಯಾಯಿತು. ಏನಿದ್ದರೂ ಅಂಥ ಪರಿಸ್ಥಿತಿಯಲ್ಲಿ ಆಕೆ ತನ್ನ ತಂದೆಯನ್ನು ಮದುವೆಯಾಗುವದೇ ನ್ಯಾಯವೆಂದು ಎಲಿಝಾಬೆತ್ ಸ್ಪಷ್ಟವಾಗಿ ಹೇಳಿದ್ದಳು. ಫಾರ್ಫ್ರೆಯನ್ನು ಆಕೆ ಮದುವೆಯಾದದ್ದು ತಿಳಿದಾಗ, ಒಂದೆರಡು ದಿನಗಳಲ್ಲಿ ಆತ ಆಕೆಯ ಮನೆಯಲ್ಲಿಯೇ ಇರಬರುವನೆಂಬುದು ಗೊತ್ತಾದಾಗ ತಾನು ಅಲ್ಲಿಂದ ಕಾಲ್ತೆಗೆಯುವದು ಅಗತ್ಯವಲ್ಲದೆ ವಿವೇಕವೂ ಹೌದು, ಎಂದು ಆಕೆ ಬೇರೆಯಾಗಿ ಇರುವ ಏರ್ಪಾಡನ್ನು ಮಾಡಿಕೊಂಡುಬಿಟ್ಟಳು. ದಿನದ ಬೆಳಕನ್ನು ನಿತ್ಯವೂ ಕತ್ತಲು ನುಂಗಿ ಬಿಡುವಷ್ಟು ಅನಿವಾರ್ಯವಾಗಿ ತನ್ನ ಪ್ರತಿಯೊಂದು ಆಸೆಯನ್ನೂ ತನ್ನ ದೈವ ಮುರಿದು ಹಾಕುತ್ತಿದೆ, ಅದಕ್ಕೆ ಉಪಾಯವಿಲ್ಲವೆಂಬ ತಾಳ್ಮೆಯನ್ನು, ತಿಳಿವನ್ನು ಆಕೆ ಪಡೆದ ಹಾಗಿತ್ತು.

ನ್ಯಾಯಾಲಯದಲ್ಲಿ ನಡೆದ ಅವಮಾನದನಂತರದಲ್ಲಿ ಹೆಂಚರ್ಡನ ಬಾಳು ಅವನತಿಯ ದಾರಿಯನ್ನೇ ಹಿಡಿಯಿತು. ಕೊಡಬೇಕಾಗಿದ್ದ ಸಾಲಕ್ಕಾಗಿ ಆಸ್ತಿಪಾಸ್ತಿಯೆಲ್ಲವೂ ಮಾರಾಟವಾಯಿತು. ಎಲ್ಲದರ ವಿಲೇವಾಟು ಮುಗಿದು ಸಾಲಗಾರರ ಸಭೆಯಲ್ಲಿ ಕುಳಿತ ಹೆಂಚರ್ಡ ತನ್ನ ಜೇಬಿನೊಳಗಿನಿಂದ ಒಂದು ಚಿನ್ನದ ಗಡಿಯಾರವನ್ನೂ ಕೆಲವು ನಗದು ನಾಣ್ಯವನ್ನೂ ತೆಗೆದು "ನ್ಯಾಯವಾಗಿ ಇದು ಕೂಡ ನಿಮಗೆ ಸಲ್ಲಬೇಕಾದುದು. ನನ್ನದಲ್ಲದ್ದನ್ನು ನಾನು ಇಟ್ಟುಕೊಳ್ಳಲಾರೆ" ಎಂದಾಗ ಸಾಲ ಬೇಡಬಂದವರ ಹೃದಯಗಳೂ ಹಿಂಡಿಹೋದವು. ಅವರು ಅವನು ತೆಗೆದುಕೊಳ್ಳಲೊಪ್ಪಲಿಲ್ಲ. ಹೆಂಚರ್ಡ ಮಾತ್ರ, ಆ ಗಡಿಯಾರವನ್ನೂ ಮಾರಿಬಿಟ್ಟು ಸಲ್ಲಬೇಕಾಗಿದ್ದ ಯಾರಿಗೋ ಆ ಹಣವನ್ನು ಕೊಟ್ಟುಬಿಟ್ಟ.

ಈಗ ಹೆಂಚರ್ಡ ಪೂರ್ತಿಯಾಗಿ ನಿರ್ಗತಿಕನಾದ. ಆ ಊರನ್ನೇ ಬಿಟ್ಟು ಎಲ್ಲಿಯಾದರೂ ದೇಶಾಂತರ ಹೋಗಿಬಿಡಬೇಕೆಂದು ತೋರಿತು. ತೀರ ವಿಮನಸ್ಕನಾಗಿ, ಹತಾಶನಾಗಿ, ಆ ಊರಲ್ಲಿಯ ನಿರ್ಗತಿಕರು ಸಾಮಾನ್ಯವಾಗಿ ಆಶ್ರಯಿಸುತ್ತಿದ್ದ ಒಂದು ಸೇತುವೆಯ ಹತ್ತಿರ ಒಂದು ದಿನ ಬಂದು ನಿಂತಿದ್ದ. ಅಷ್ಟರಲ್ಲಿ ಜಾಪ್ ಅಲ್ಲಿಗೆ ಬಂದ. ಹೆಂಚರ್ಡನ ಆಸ್ತಿಪಾಸ್ತಿ ಮನೆ-ಮಾರುಗಳೆಲ್ಲವನ್ನು ಫಾರ್ಫ್ರೆ ಕೊಂಡಿದ್ದನೆಂಬ ಸಮಾಚಾರ ಅವನಿಂದ ತಿಳಿಯಿತು. ಆ ದುಃಖವನ್ನು ನುಂಗಿಕೊಂಡು ನಿಂತಿರುವಾಗ ಅದೇ ದಾರಿಯಿಂದ ಫಾರ್ಫ್ರೆ ತನ್ನ ಗಾಡಿಯಲ್ಲಿ ಬಂದು ಹೆಂಚರ್ಡ ನಿಂತಿದ್ದನ್ನು ಕಂಡು ಇಳಿದು ಮಾತನಾಡಿಸಿದ: "ನೀನು ಇಲ್ಲಿಂದ ಹೊರಟುಹೋಗಬೇಕೆಂದಿರುವಿಯಂತೆ. ಒಂದು ಕಾಲಕ್ಕೆ ನಿನ್ನ ಮಾತು ಕೇಳಿ ನಾನು ಇಲ್ಲಿ ಉಳಿದೆ. ನನ್ನಮಾತು ಕೇಳಿ ನೀನಾದರೂ ಉಳಿಯಬೇಕು. ನನ್ನ ಮನೆಯಲ್ಲಿಯೆ ನೀನು ಬಂದಿರಬಹುದು. ಏನು ಬೇಕಾದುದನ್ನು ನಿನಗೆ ಒದಗಿಸಬಲ್ಲೆ."

ಇದನ್ನು ಕೇಳಿ ಹೆಂಚರ್ಡನ ಹೃದಯ ಹಿಂಡಿಹೋಗಿ "ನಿನ್ನ ವಿಚಾರ ತಪ್ಪು ತಿಳಿದುಕೊಂಡು ಅನ್ಯಾಯ ಮಾಡಿದ್ದೇನೆ. ನಿನ್ನ ಸಹಾನುಭೂತಿಗಾಗಿ ನಾನು ಕೃತಜ್ಞ. ಆದರೆ ನನಗೆ ಯಾವದೂ ಬೇಡ" ಎಂದ.

ಇದೆಲ್ಲ ನಡೆದಾಗ ಎಲ್ಲವನ್ನು ಕಳೆದುಕೊಂಡ ಹೆಂಚರ್ಡ ಊರ ಹೊರಗಡೆಯಲ್ಲಿಯ ಜಾಪ್‌ನ ಗುಡಿಸಿಲಲ್ಲಿ ಆಶ್ರಯ ಪಡೆದಿದ್ದ. ಅವನಿದ್ದಲ್ಲಿಗೆ ಹೋಗಿ ಎಲಿಝಾಬೆತ್ ಆತನನ್ನು ನೋಡಬಯಸಿದ್ದರೂ ಸಾಧ್ಯವಾಗಿರಲಿಲ್ಲ. ಕೊನೆಗೆ ಹಟ ಹಿಡಿದು ಆತನನ್ನು ಕಂಡು ಮಾತನಾಡಿಸಿದಳು.

ಅವನು "ಈ ವಿಸನ್ನಾವಸ್ಥೆಯಲ್ಲಿ ನೀನು ನನ್ನನ್ನು ನೋಡಬಾರದು" ಎಂದರೂ ಆಕೆ ಕೇಳದೆ ಆತನಿಗೆ ಸಮಾಧಾನ ಹೇಳಿದಳು. ಉಪಚರಿಸಿ ಆರೈಕೆ ಮಾಡಿದಳು. ಧೈರ್ಯಗೆಡದಂತೆ ನೋಡಿಕೊಂಡಳು. ಇದೆಲ್ಲದರ ಪರಿಣಾಮವೆಂದರೆ ಹೆಂಚರ್ಡನ ಮನಸ್ಸು ತುಸು ಸ್ತಿಮಿತಕ್ಕೆ ಬಂದು ಆತ "ಎಂದಾದರೂ ನಾನು ದುಡಿದು ಬದುಕಿದವ. ಇಂದು ಆತ ಒಡೆಯನಾದರೇನಾಯಿತು? ನನ್ನ ಮಟ್ಟಿಗೆ ನಾನು ದುಡಿದುಕೊಂಡಿದ್ದರೆ ತೀರಿತು'' ಎಂದುಕೊಳ್ಳುವಂತಾಯಿತು. ಮುಂದೆ ಒಂದೆರಡು ದಿನಗಳಲ್ಲಿಯೆ ಹೆಂಚರ್ಡ ಫಾರ್ಫ್ರೆಯಲ್ಲಿಯೆ ಆಳಾಗಿ ದುಡಿಯತೊಡಗಿದ. ಯಾವ ವಿಧದಲ್ಲಿಯೂ ಆತನ ಮನಸ್ಸು ನೋಯಬಾರದೆಂದು ಫಾರ್ಫ್ರೆ ಜಾಗರೂಕನಾಗಿರುತ್ತಿದ್ದ. ಸೇವಕನಾಗಿದ್ದವ ಒಡೆಯನಾಗಿದ್ದ, ಒಡೆಯನಾಗಿದ್ದವ ಸೇವಕನಾಗಿದ್ದ. ಹೆಂಡತಿಯಾಗಬೇಕಿದ್ದವಳು ಯಜಮಾನಿಯಾಗಿದ್ದಳು. ಆದರೆ ಎಲ್ಲವನ್ನು ನುಂಗಿಕೊಂಡು ಹೆಂಚರ್ಡ ದುಡಿಯುತ್ತಿದ್ದ.

(೧೨)

ತೋರಿಕೆಗೆ ಹೆಂಚರ್ಡ ಎಲ್ಲವನ್ನು ನುಂಗಿಕೊಂಡು ದುಡಿಯುತ್ತಿದ್ದನಾದರೂ ಒಳಗಡೆ ರೋಷ ಅಸೂಯೆಗಳು ಕುದಿಯುತ್ತಿದ್ದವು. ಕೆಲವು ದಿನಗಳಲ್ಲಿ ಫಾರ್ಫ್ರೆ ನಗರಾಧ್ಯಕ್ಷನಾಗಬಹುದೆಂಬ ಸಮಾಚಾರ ತಿಳಿದಾಗ ಮಾತ್ರ ಆತನಿಗೆ ತಡೆಯದಾಯಿತು. "ಈ ಹುಡುಗ ನಗರಾಧ್ಯಕ್ಷನಾಗುವದೇ?" ಈ ಯೋಚನೆ ಆತನನ್ನು ತೀರ ವಿಮನಸ್ಕನನ್ನಾಗಿ ಮಾಡತೊಡಗಿತು. ಆಗೀಗ ತನ್ನಷ್ಟಕ್ಕೆಯೆ ''ಹದಿನೈದು ದಿನ ಉಳಿಯಿತು, ಹತ್ತು ದಿನ ಉಳಿಯಿತು'' ಎಂದುಕೊಳ್ಳುತ್ತಿದ್ದ. ಯಾವದಕ್ಕೆಂದು ಸಹೋದ್ಯೋಗಿ ಕೇಳಿದಾಗ. ''ಮದ್ಯ ಕುಡಿಯುವದಿಲ್ಲವೆಂದು ಮಾಡಿದ ಶಪಥವನ್ನು ಇಪ್ಪತ್ತೊಂದು ವರ್ಷ ನಡೆಸಿದ್ದೇನೆ. ಆ ಅವಧಿ ಮುಗಿಯುವುದರಲ್ಲಿದೆ. ಆ ಮೇಲೆ ಈ ಪ್ರಪಂಚವನ್ನೇ ಮದ್ಯದಲ್ಲಿ ಮುಳುಗಿಸಿಬಿಡುತ್ತೇನೆ'' ಎಂದು ಉತ್ತರ ಬಂತು.

ಮುಂದೆ ಕೆಲವು ದಿನಗಳಲ್ಲಿ ಹೆಂಚರ್ಡ ವಿಪರೀತ ಕುಡಿಯುತ್ತಿದ್ದಾನೆಂಬ ಸಮಾಚಾರ ಎಲಿಝಾಬೆತ್‌ಳಿಗೆ ತಿಳಿದಾಗ ಆಕೆ ಅವನ ಹತ್ತಿರ ಹೋದಳು. ಕುಡಿದುಬಿಟ್ಟು ಬಾಯಿಗೆ ಬಂದಹಾಗೆ ಮಾತನಾಡುತ್ತಿದ್ದ. "ನನ್ನ ಎಲ್ಲವನ್ನು ಕಸಿದುಕೊಂಡಿದ್ದಾನಲ್ಲವೆ? .. ಆಗಲಿ, ನನ್ನ ಕೈಗಾದರೂ ಸಿಕ್ಕಲಿ, ನೋಡಿಬಿಡುತ್ತೇನೆ."

ಎಲಿಝಾಬೆತ್‌ಳಿಗೆ ಗಾಬರಿಯಾಯಿತು — ಫಾರ್ಫ್ರೆಗೆ ಎಂಥ ಅಪಾಯವೊ ಎಂದು. ಮರುದಿನ ಹೋಗಿ ಆತನಿಗೆ ಎಚ್ಚರವಾಗಿರಬೇಕೆಂದು ಹೇಳಿದಳು. ಇಂಥದೇ ಮುನ್ನೆಚ್ಚರವನ್ನು ಇನ್ನೂ ಮೂರು ನಾಲ್ಕು ಜನ ಫಾರ್ಫ್ರೆಗೆ ಹೇಳಿದರು. ಇದರ ಪರಿಣಾಮವಾಗಿ ತಾನು ಎಷ್ಟೇ ಸಹಾನುಭೂತಿಯಿಂದ ಆತನನ್ನು ನಡೆಸಿಕೊಂಡರೂ ಹೆಂಚರ್ಡನಲ್ಲಿ ದ್ವೇಷ ಬೆಳೆಯುತ್ತಿದೆ ಎಂದು ಫಾರ್ಫ್ರೆಗೆ ಮನವರಿಕೆಯಾಯಿತು. ನಗರಸಭೆಯ ಸದಸ್ಯರಿಂದ ವಂತಿಗೆಯನ್ನು ಕೂಡಿಸಿ, ತಾನೂ ಹಣ ಹಾಕಿ ಆತನಿಗಾಗಿ ಒಂದು ಅಂಗಡಿಯನ್ನು ಕೊಂಡುಕೊಡಬೇಕೆಂಬ ತನ್ನ ಯೋಜನೆಯನ್ನು ಬಿಟ್ಟುಕೊಟ್ಟ. ಇದು ತಿಳಿದಾಗ ಅಂಗಡಿಯನ್ನು ಮಾಡಬೇಕೆಂದವ ನಿರಾಶನಾಗಿ ಯೋಜನೆಯನ್ನು ತಳ್ಳಿಹಾಕಿದವ ಫಾರ್ಫ್ರೆಯೆ ಎಂದು ಹೆಂಚರ್ಡನೆದುರಿಗೆ ದೂರಿಕೊಂಡ. ಹೆಂಚರ್ಡನ ದ್ವೇಷ ಇಮ್ಮಡಿಸಿತು. ಈತನನ್ನು ನೋಡಿಯೇ ಬಿಡುವದು ಎಂದು ನಿರ್ಧರಿಸಿದ.

ಹೆಂಚರ್ಡ ತನ್ನನ್ನು ದ್ವೇಷಿಸುತ್ತಿರುವದು ಫಾರ್ಫ್ರೆಗೆ ತುಂಬ ಮನಸ್ತಾಪವನ್ನುಂಟು ಮಾಡಿತು. ಹೆಂಡತಿಗೂ ಈ ವಿಷಯವನ್ನು ಹೇಳಿದ. ಇದನ್ನು ಕೇಳಿ ಆಕೆಗೆ ಗಾಬರಿಯಾಯಿತು. ಹಾಗೆಂದೇ ಆಕೆ ''ನಾವು ಈ ಗೊಂದಲದಲ್ಲಿ ಯಾತಕ್ಕೆಂದು ಇರಬೇಕು? ಬೇರೆಡೆ ಎಲ್ಲಿಯಾದರೂ ಹೋಗಿಬಿಟ್ಟರೆ ಆಗದೆ? ಬೇಕಾದಷ್ಟು ದುಡ್ಡಿದೆ. ಸುಖವಾಗಿ ಇದ್ದುಬಿಡಬಹುದು" ಎಂದಳು. ಫಾರ್ಫ್ರೆಯಾದರೂ ಅದನ್ನು ಒಪ್ಪುವ ಮನಃಸ್ಥಿತಿಯಲ್ಲಿದ್ದ. ಅದೇ

ವಿಷಯುವನ್ನು ಅವರಿಬ್ಬರೂ ಚರ್ಚಿಸುವದರಲ್ಲಿ-ದ್ದರು.

ಅಷ್ಟರಲ್ಲಿ ನಗರಸಭೆಯ ಅಧಿಕಾರಿಯೊಬ್ಬನಾದ ವ್ಯಾಟ್ ಬಂದು "ಕಳೆದ ವರ್ಷದಿಂದ ನಗರಾಧ್ಯಕ್ಷರಾಗಿದ್ದ ಚಾಕ್‌ಫೀಲ್ಡರು ನಿಧನ ಹೊಂದಿದರು. ಇಂದೇ ಮಧ್ಯಾಹ್ನ" ಎಂದು ಹೇಳಿ ಸದಸ್ಯರೆಲ್ಲರೂ ಫಾರ್ಫ್ರೆಯನ್ನು ಆ ಸ್ಥಳಕ್ಕೆ ನಿಯೋಜಿಸಬೇಕೆಂದದ್ದನ್ನು ತಿಳಿಸಿದ.

"ಆದರೆ ನಾವು ಇಲ್ಲಿಂದ ಹೊರಟುಹೋಗಬೇಕೆಂದಿದ್ದೇವೆ" ಎಂದಳು ಲ್ಯೂಸೆಟಾ.

ಆದರೆ ಫಾರ್ಫ್ರೆಯ ಮನಸ್ಸು ತಿರುಗಿತ್ತು. "ಬಹುಮತದಿಂದ ನನ್ನನ್ನು ಆರಿಸುವದಾದರೆ ಆಗಬಹುದು" ಎಂದುಬಿಟ್ಟ.

"ಹಾಗಿದ್ದರೆ, ನೀವು ನಗರಾಧ್ಯಕ್ಷರಾದ ಹಾಗೆಯೆ ಎಂದಿಟ್ಟುಕೊಳ್ಳಿ" ಎಂದು ವ್ಯಾಟ್ ಹೇಳಿದ.

ಅವನು ಹೋದ ಮೇಲೆ ಹೆಂಡತಿಗೆ ಫಾರ್ಫ್ರೆ ಹೇಳಿದ: "ನೋಡಿದೆಯಾ ಹೇಗೆ ನಮ್ಮನ್ನು ದೈವ ನಡೆಸುತ್ತದೆ? ನಾವು ಯೋಜನೆ ಮಾಡುವದು ಒಂದು; ನಡೆಯುವದು ಬೇರೊಂದು. ಆಗಲಿ ಇಲ್ಲಿಯೆ ಇರುವಾ. ಹೆಂಚರ್ಡ ಬೇಕಾದಷ್ಟು ಕೂಗಾಡಿಕೊಳ್ಳಲಿ" ಎಂದು.

ತಾವು ಅಲ್ಲಿಯೇ ಉಳಿಯುವದೆಂದು ಗೊತ್ತಾದ ಮೇಲೆ ತನ್ನ ಸುಖವನ್ನು ಕಾಯ್ದುಕೊಳ್ಳಬೇಕಾದರೆ ಹೆಂಚರ್ಡನಿಂದ ತನ್ನ ಪತ್ರಗಳನ್ನು ಮರಳಿ ಪಡೆಯಲೇಬೇಕೆಂದು ಲ್ಯೂಸೆಟಾಳಿಗೆ ತೋರಿತು. ಮುಂದೆ ಒಂದೆರಡು ದಿವಸಗಳಲ್ಲಿ ಆತನನ್ನು ಕಂಡು ಪತ್ರಗಳನ್ನುಕೊಡಬೇಕೆಂದು ಬೇಡಿದಳು. ಹೆಂಚರ್ಡ ಆ ವಿಷಯವನ್ನು ಮರೆತುಬಿಟ್ಟಿದ್ದ. ಆಕೆ ಕೊಟ್ಟ ನೆನಪು ತನ್ನ ಕೈಗೆ ಬಂದ ಹೊಸ ಆಯುಧವೆಂದು ತೋರಿತು ಆತನಿಗೆ. "ಆಗಲಿ ನೋಡುವಾ" ಎಂದು ಹೇಳಿದ.

ಮುಂದೆ ಒಂದೆರಡು ದಿನಗಳಲ್ಲಿ ಊರ ಜನರು ಫಾರ್ಫ್ರೆಯನ್ನು ನಗರಾಧ್ಯಕ್ಷನನ್ನಾಗಿ ಮಾಡಿದರು. ಆತನ ಗೌರವಾರ್ಥವಾಗಿ ಊರಲ್ಲಿ ವಾದ್ಯಗಳು ಮೊಳಗಿದವು. ಇದು ನಡೆದ ಮರುದಿನ ಫಾರ್ಫ್ರೆಯನ್ನು ಹೆಂಚರ್ಡ ಸಂಧಿಸಿ "ನನ್ನ ಕೆಲವು ಕಾಗದಪತ್ರಗಳು ನೀನಿದ್ದ ಮನೆಯಲ್ಲಿ ಉಳಿದಿವೆ, ಅವು ಬೇಕಾಗಿವೆ" ಎಂದು ಹೇಳಿ ಅದಕ್ಕಾಗಿ ರಾತ್ರಿ ಬರುವದಾಗಿ ತಿಳಿಸಿದ.

ಹೇಳಿದ ವೇಳೆಗೆ ಸರಿಯಾಗಿ ಹೆಂಚರ್ಡ ಬಂದ. ಒಂದು ಬಾಗಿಲುಮಾಡದಿಂದ ಪತ್ರಗಳ ಆ ಗಂಟನ್ನು ತೆಗೆದುಕೊಂಡು ಹತ್ತಿರದ ಮೇಜಿನ ಮೇಲೆ ಅದನ್ನು ಬಿಚ್ಚಿ ಫಾರ್ಫ್ರೆಯನ್ನುದ್ದೇಶಿಸಿ, "ಯಾವ ಮಹತ್ವದ ಕಾಗದಗಳೂ ಅಲ್ಲ. ಹಿಂದೆ ನಾನೊಮ್ಮೆ ನನ್ನನ್ನು ಪ್ರೀತಿಸಿದ ಒಂದು ಹೆಂಗಸಿನ ವಿಚಾರ ಹೇಳಿದ್ದಿಲ್ಲವೇ? ಆಕೆ ಬರೆದ ಕಾಗದಗಳಿವು" ಎಂದ.

"ಆಕೆ ಈಗ ಏನಾದಳು?" ಎಂದು ಫಾರ್ಫ್ರೆ ಕೇಳಿದ.

"ಸುಖವಾಗಿ ಮದುವೆ ಮಾಡಿಕೊಂಡು ಇದ್ದಾಳೆ."

"ಸೂಸನ್ ಹೋದ ಮೇಲೆ ನೀನೇ ಆಕೆಯನ್ನು ಮದುವೆಯಾಗಬಹುದಿತ್ತಲ್ಲ?"

"ಆಗಬಹುದಿತ್ತು. ಆದರೆ ಅಷ್ಟರಲ್ಲಿ ಆಕೆ ಬೇರೆಯೊಬ್ಬನನ್ನು ಮದುವೆಯಾಗಿಬಿಟ್ಟಿದ್ದಳು."

"ತುಂಬ ಚಪಲ ಹೃದಯ ಆಕೆಯದು ಎಂದು ಕಾಣುತ್ತದೆ" ಎಂದು ಫಾರ್ಫ್ರೆ ಟೀಕಿಸಿದ.

ಹೆಂಚರ್ಡ ಆ ಕಟ್ಟಿನಿಂದ ಹತ್ತಾರು ಪತ್ರಗಳನ್ನು ಓದಿತೋರಿಸಿದ. ಬರೆದವಳ ಹೆಸರನ್ನೊಂದು ಬಿಟ್ಟು ಓದುತ್ತಿದ್ದ. ಓದುವವನ ಸಂತೋಷವೆಂದು ಕೇಳುವವ ಕೇಳುತ್ತಿದ್ದ. ಕೊನೆಗೆ ಗಂಟನ್ನು ಕಟ್ಟಿಕೊಂಡು ಹೆಂಚರ್ಡ ಹೊರಟುಹೋದ.

ಪತ್ರಗಳನ್ನು ಹೆಂಚರ್ಡ ಓದುತ್ತಿದ್ದಾಗ ಲ್ಯೂಸೆಟಾ ಬದಿಯ ಕೋಣೆಯಲ್ಲಿ ಜೀವದಲ್ಲಿ ಜೀವವಿಲ್ಲದೆ ಕೇಳುತ್ತಿದ್ದಳು. ಉದ್ವೇಗವನ್ನು ತಡೆಯದಾಗಿ ಕೊನೆಗೆ ಹೋಗಿ ಹಾಸಿಗೆಯಲ್ಲಿ ಬಿದ್ದುಕೊಂಡಳು. ಹೊರಟುಹೋಗುವಾಗ ಎಲ್ಲಿ ಬರೆದವಳ ಹೆಸರನ್ನು ಹೇಳಿ ಹೋಗುತ್ತಾನೋ ಎಂಬ ಹೆದರಿಕೆ ಫಾರ್ಫ್ರೆ ಕೋಣೆಯಲ್ಲಿ ಬರುವ

ವರೆಗೂ ಆಕೆಯ ಹೃದಯವನ್ನು ಕುಣಿಸುತ್ತಿತ್ತು. ಆದರೆ ಹೆಂಚರ್ಡ ಹೆಸರು ಹೇಳಿರಲಿಲ್ಲ.

ರಾತ್ರಿಯ ಆ ಉದ್ವೇಗದ ಪರಿಣಾಮವಾಗಿ ಅವಳು ಮರುದಿನ ಹೆಂಚರ್ಡನಿಗೆ ಒಂದು ಸಂಕೇತ ಕೊಟ್ಟು ಆತನನ್ನು ಕಂಡಳು. "ಯಾಕೆ ಈ ಪರಿ ನನ್ನ ಗೋಳು ಹುಯ್ದುಕೊಳ್ಳುತ್ತೀ? ಇದರಿಂದ ಬಾಡಿ, ಬಳಲಿ ಬೆಂಡಾಗಿದ್ದೇನೆ. ಆ ಪತ್ರಗಳನ್ನು ನನಗೆ ತಿರುಗಿ ಕೊಟ್ಟು ನನ್ನನ್ನು ಉಳಿಸಬಾರದೆ?" ಎಂದು ದೀನಳಾಗಿ ಬೇಡಿಕೊಂಡಳು. "ಅಯ್ಯೊ, ಏನು ಹೆಣ್ಣು! ಇಂಥ ಅಯೋಗ್ಯಳನ್ನು ಬೇಟೆಯಾಡುವದು ಯಾವ ಯೋಗ್ಯತೆ? ನನ್ನಿಂದ ತಪ್ಪಿಸಿ ಫಾರ್ಫ್ರೆ ಪಡೆದದ್ದು ಯಾವ ದೊಡ್ಡ ವಸ್ತುವೂ ಅಲ್ಲ" ಎಂದು ಅವನಿಗನಿಸಿತು. ಕಾಗದಗಳನ್ನು ಖಂಡಿತವಾಗಿಯೂ ಹಿಂದಿರುಗಿ ಕೊಡುತ್ತೇನೆಂದು ಹೆಂಚರ್ಡ ಮಾತುಕೊಟ್ಟು ಹೋದ.

( ೧೩ )

ಮಾತು ಕೊಟ್ಟ ಹಾಗೆ ಗುಡಿಸಲಿಗೆ ಹಿಂದಿರುಗಿದ ಕೂಡಲೆ ಪತ್ರದ ಕಟ್ಟನ್ನು ಭದ್ರವಾಗಿ ಕಟ್ಟಿ ಜಾಪ್‌ನನ್ನು ಕೇಳಿಕೊಂಡ— ಕೂಡಲೆ ಅದನ್ನೊಯ್ದು ಫಾರ್ಫ್ರೆಯ ಹೆಂಡತಿಗೆ ಮುಟ್ಟಿಸಬೇಕೆಂದು. ಜಾಪ್‌ನಿಗೆ ಬೇಸರ. ತನ್ನ ಗಂಡನಿಂದ ಒಂದು ಶಿಫಾರಸಿನ ಪತ್ರವನ್ನು ಕೊಡಿಸಬೇಕೆಂದು ಮುನ್ನಾ ರಾತ್ರಿ ಜಾಪ್ ಕೇಳಿಕೊಂಡದ್ದನ್ನು ಆಕೆ ಮನ್ನಿಸಿರಲಿಲ್ಲ. ಆದರೂ ಹೆಂಚರ್ಡನ ಒತ್ತಾಯಕ್ಕಾಗಿ ಕಾಗದಗಳ ಕಟ್ಟನ್ನು ಹಿಡಿದುಕೊಂಡು ಹೊರಬಿದ್ದ.

ದಾರಿಯಲ್ಲಿ ಆಪ್ತ ಸ್ನೇಹಿತರು ಆತನನ್ನು ಊರ ಹೊರಗಿನ ಒಂದು ಗಡಂಗಕ್ಕೆ ಎಳೆದುಕೊಂಡು ಹೋದರು. ಎಲ್ಲ ಬಗೆಯ ಸಂಶಯಾಸ್ಪದ ವ್ಯವಹಾರಗಳಿಗೆ ಆಶ್ರಯಸ್ಥಾನವಾಗಿದ್ದ ಆ ಗಡಂಗದಲ್ಲಿ ಯಾರು ಯಾರೋ ಸೇರಿಕೊಂಡಿದ್ದರು. ಜಾಪ್‌ನ ಕೈಯಲ್ಲಿಯ ಕಾಗದದ ಕಟ್ಟಿನ ಬಗ್ಗೆ ಎಲ್ಲರಿಗೂ ಕುತೂಹಲ. ಅದರಲ್ಲಿ ವಿಶೇಷವಾಗಿ ಅಲ್ಲಿಗೆ ಬಂದು ಸೇರಿದ ಗೋದಿ ಗಂಜಿಯ ಮುದುಕಿಗೆ ತೀರ ಕುತೂಹಲ. "ಏನಯ್ಯಾ, ಆ ಕಟ್ಟು?" ಎಂದು ಕೇಳಿದ್ದಕ್ಕೆ ಜಾಪ್ "ಪ್ರೀತಿ—ದೊಡ್ಡವರ ಪ್ರೀತಿಯ ಕತೆ!" ಎಂದ.

ಇಷ್ಟಕ್ಕೆ ಜಾಪ್‌ನ ಕುತೂಹಲವೂ ಬೆಳೆದಿತ್ತು. ಅಂಟಿಸಿದ ಅರಗನ್ನು ಬಿಡಿಸಿ ಕಾಗದಗಳನ್ನು ಹೊರತೆಗೆದ. ಎಷ್ಟೋ ಕಾಗದಗಳನ್ನು ಬಿಡಿಸಿ ಬಹಿರಂಗವಾಗಿ ಓದಲಾಯಿತು. ಹೆಂಚರ್ಡ-ಲ್ಯೂಸೆಟಾರ ಗುಪ್ತ ಪ್ರಣಯ ಅಲ್ಲಿ ಸೇರಿದ ಅನಾಮಧೇಯರೆಲ್ಲರಿಗೂ ಒಂದು ಚೇಷ್ಟೆಯ ವಿಷಯವಾಯಿತು.

"ಕತ್ತೆ ಮೆರವಣಿಗೆಯಾಟಕ್ಕೆ ಒಂದು ಒಳ್ಳೆಯ ವಿಷಯ ಇದು. ಅಲ್ಲವೆ?" ಎಂದು ಯಾರೋ ಅಂದರು.

"ಹೌದು. ಯಾಕಾಗಬಾರದು?" ಎಂದ ಜಾಪ್.

"ಹೌದು, ಹೌದು" ಎಂದರು ಎಲ್ಲರೂ.

ದಾರಿ ತಪ್ಪಿ ಆ ಗಡಂಗಕ್ಕೆ ಬಂದ ಒಬ್ಬ ನಾವಿಕನೂ ಸೇರಿಕೊಂಡು "ಕತ್ತೆಯ ಮೆರವಣಿಗೆ ಯಾಟ ಎಂದರೇನು ವಿಶೇಷ?" ಎಂದು ವಿಚಾರಿಸಿದ. ಅದಕ್ಕೆ ಅಂಗಡಿಯನ್ನಿಟ್ಟವಳು ವಿವರಿಸಿದಳು: "ಮದುವೆಯಾದ ಹೆಣ್ಣು-ಗಂಡುಗಳ ಗುಪ್ತ ಪ್ರಣಯವನ್ನು ಬಹಿರಂಗಪಡಿಸುವ ನಗೆಯಾಟ ಅದು. ಸಂಬಂಧಿಸಿದ ಇಬ್ಬರ ಪ್ರತಿಮೆಗಳನ್ನು ಕತ್ತೆಯ ಮೇಲೆ ಕೂರಿಸಿ ಮೆರವಣಿಗೆ ಮಾಡುವದು!"

"ಒಳ್ಳೆಯ ಕೆಲಸ. ಅಂಥದೇನನ್ನಾದರೂ ನೀವು ಮಾಡುವ ಹಾಗಿದ್ದರೆ ಇದೋ ನನ್ನ ವಂತಿಗೆ" ಎಂದು ಆ ನಾವಿಕ ಹಣವನ್ನು ಕೊಟ್ಟ. ಅದು ಯಾರಿಗೆ ಸಂಬಂಧಿಸಿದ್ದು ಎಂಬ ಯೋಚನೆಯನ್ನು ಆತ ಮಾಡಲಿಲ್ಲ. ನಡುರಾತ್ರಿಯಾದ ಮೇಲೆ ಎಲ್ಲರೂ ಹೊರಟುಹೋದರು. ಪತ್ರದ ಕಟ್ಟನ್ನು ಮತ್ತೆ ಮೊದಲಿನ ಹಾಗೆ ಭದ್ರವಾಗಿರಿಸಿ ಮರುದಿನ ಮುಂಜಾನೆ ಜಾಪ್ ಲ್ಯೂಸೆಟಾಳಿಗೆ ಮುಟ್ಟಿಸಿದ.

ಮುಂದೆ ಕೆಲವು ದಿನಗಳಲ್ಲಿ ಅರಸುಮನೆತನದ

ಗಣ್ಯವ್ಯಕ್ತಿಯೊಬ್ಬರು ಊರಿಗೆ ಬರಲಿದ್ದರು. ಆಗ ನಗರಾಧ್ಯಕ್ಷನ ಜೊತೆಯಲ್ಲಿ ತನಗೂ ಅಗ್ರಸ್ಥಾನ ಸಿಕ್ಕಬೇಕೆಂದು ಹೆಂಚರ್ಡ ಹಟ ಹಿಡಿದ. ಆತನಿಗೆ ತಲೆ ಸಮನಾಗಿಲ್ಲವೆಂದು ಸದಸ್ಯರು ಆ ಕಡೆಗೆ ವಿಶೇಷ ಲಕ್ಷ್ಯ ಕೊಡಲಿಲ್ಲ. ಆದರೆ ಆ ವ್ಯಕ್ತಿ ಊರಿಗೆ ಬಂದಾಗ ವೈಭವದ ಸ್ವಾಗತ ನಡೆಯಲಿರುವಾಗ ಹೆಂಚರ್ಡ ನುಗ್ಗಿ ಮುಂದಕ್ಕೆ ಬಂದ. ನಗರಾಧ್ಯಕ್ಷನಾದ ಫಾರ್ಫ್ರೆಗೆ ಆತನನ್ನು ಹಿಂದಕ್ಕೆ ತಳ್ಳುವದು ಅನಿವಾರ್ಯವಾಯಿತು. "ಹೀಗೆ ಬಹಿರಂಗವಾಗಿ ನನ್ನನ್ನು ತಳ್ಳಿ ಅವಮಾನ ಮಾಡಿದನೆ?" ಎಂದು ಹೆಂಚರ್ಡನಿಗೆ ಹಿಡಿಸಲಾರದ ಕೋಪಾತಿರೇಕವಾಯಿತು. ಇದಕ್ಕೆ ಸೇಡು ತೀರಿಸುವದೆಂದು ಪಣತೊಟ್ಟ. ಕೂಡಲೆ ಫಾರ್ಫ್ರೆಯ ಮನೆಗೆ ಹೋಗಿ ಆತನನ್ನು ತಾನು ಕಾಣಬೇಕೆಂದು ಕೇಳಿದ. ಆತನಿರಲಿಲ್ಲವಾದ್ದರಿಂದ ತನ್ನನ್ನು ಕಣಜದಲ್ಲಿ ಕೂಡಲೆ ಕಾಣಬೇಕೆಂದು ಚೀಟಿಯನ್ನಿಟ್ಟು ಹೊರಟು ಅಲ್ಲಿಗೆ ಹೋದ.

ಸಾಯಂಕಾಲ ಸಮೀಪಿಸುತ್ತಿತ್ತು. ಫಾರ್ಫ್ರೆಗೆ ಹತ್ತಿರದ ಒಂದು ಹಳ್ಳಿಗೆ ಹೋಗಬೇಕಾಗಿತ್ತು. ಕಣಜದ ಹತ್ತಿರದಲ್ಲಿಯೆ ಹಾದು ಹೋಗಬೇಕಿತ್ತು. ಹೆಂಚರ್ಡ ಬರಹೇಳಿದ್ದು ಯಾತಕ್ಕೆಂದು ತಿಳಿಯದೆ ಸಹಜವಾಗಿ ಬಂದುಬಿಟ್ಟ. ಸುಮಾರು ನಲವತ್ತು ಅಡಿ ಎತ್ತರವಾಗಿದ್ದ ಒಂದು ಅಟ್ಟದ ಮೇಲೆ ಹೆಂಚರ್ಡ ಕಾಯುತ್ತಿದ್ದ. ಫಾರ್ಫ್ರೆ ಬಂದೊಡನೆ ಮೇಲಕ್ಕೇರಿ ಬರುವ ಬಾಗಿಲನ್ನು ಮುಚ್ಚಿಬಿಟ್ಟು ಹೆಂಚರ್ಡ ನೇರವಾಗಿ ಮಾತಿಗಾರಂಭಿಸಿದ. "ಇಲ್ಲಿಗೆ ನಾನು ಯಾತಕ್ಕೆ ಬರಮಾಡಿಕೊಂಡೆ ತಿಳಿಯಿತೆ? ಎಲ್ಲ ಅವಮಾನಗಳ ಲೆಕ್ಕ ಈಗ ಇಲ್ಲಿ ಬಗೆಹರಿಯಬೇಕು—ನನ್ನ ನಿನ್ನ ಕೈಮೈ ಬಲದಿಂದ. ನಿನ್ನ ಹೆಂಡತಿ, ನಿನ್ನ ಹಿರಿತನ, ಇಲ್ಲಿ ಯಾವದೂ ಇಲ್ಲ. ನನ್ನ ಒಂದು ಕೈಕಟ್ಟಿಕೊಂಡಿದ್ದೇನೆ. ನನ್ನ ಒಂದೇ ಕೈ ನಿನಗೆ ಸಾಕು. ಬಾ,'' ಎಂದು ಕುಸ್ತಿಗೆ ಆಹ್ವಾನಿಸಿದ.

ಫಾರ್ಫ್ರೆ ಒಂದು ಕ್ಷಣ ಬೆಚ್ಚಿದನಾದರೂ ಬೇರೆ ಗರ್ವೆ ಇರಲಿಲ್ಲ. ಕುಸ್ತಿಗಾರಂಭವಾಯಿತು. ಕೆಲವು ನಿಮಿಷಗಳಲ್ಲಿ ಹೆಂಚರ್ಡ ಆತನನ್ನು ಅಮುಕಿಹಿಡಿದು ''ಈಗ ನಿನ್ನ ಜೀವ ನನ್ನ ಕೈಯಲ್ಲಿದೆ'' ಎಂದ.

''ಕೊಂದುಬಿಡು. ಎಂದಿನಿಂದಲೂ ಅಷ್ಟು ಮಾಡಬೇಕೆನ್ನುತ್ತಿದ್ದಿಯಲ್ಲವೆ?''

ಫಾರ್ಫ್ರೆಯ ಆ ಒಂದು ಮಾತಿನಿಂದ ಹೆಂಚರ್ಡನ ಕೋಪಾತಿರೇಕವೆಲ್ಲವೂ ಮಾಯವಾಗಿ ಪರಿತಾಪಕ್ಕೆ ಮೊದಲಾಯಿತು. ''ಅಯ್ಯೋ, ಯಾಕೆ ಆ ಮಾತು? ಹಾಗೆನ್ನಬೇಡ ಫಾರ್ಫ್ರೆ. ಒಂದು ಕಾಲಕ್ಕೆ ನಿನ್ನನ್ನು ಎಷ್ಟು ಪ್ರೀತಿಸಿದೆ! ಹೋಗು, ನನ್ನನ್ನು ಪೊಲೀಸರಿಗೆ ಒಪ್ಪಿಸು. ಬೇಕಾದುದನ್ನು ಮಾಡು," ಎಂದು ದುಃಖದ ಉದ್ವೇಗದಿಂದ ನೆಲಕ್ಕೆ ಕುಸಿದ. ಬಟ್ಟೆಗಳನ್ನು ಸರಿಪಡಿಸಿಕೊಂಡು ಫಾರ್ಫ್ರೆ ಕೆಳಗಿಳಿದು ಬಂದ. ಮನೆಗೆ ಹಿಂತಿರುಗಲು ಮನಸ್ಸಾಗಲಿಲ್ಲ. ಹೋಗಬೇಕಾದ ಹಳ್ಳಿಯ ಕಡೆಗೆ ಗಾಡಿ ಹೊಡೆದುಕೊಂಡು ಹೋದ.

ಯೋಚನೆ ಮಾಡಿದ ಹಾಗೆ ಹೆಂಚರ್ಡನಿಗೆ ತಾನು ಮಾಡಿದ್ದು ತೀರ ತಪ್ಪು, ತನಗೆ ಯಾವ ನೇರವಾದ ಅನ್ಯಾಯವನ್ನು ಫಾರ್ಫ್ರೆ ಮಾಡಿದ್ದ? ಆತನಿಗೆ ಅಡ್ಡ ಬಿದ್ದಾದರೂ ಸರಿ, ಕ್ಷಮೆ ಕೇಳಬೇಕು ಎಂದೇ ತೋರತೊಡಗಿತು. ಆ ಮನಃಸ್ಥಿತಿಯಲ್ಲಿಯೆ ದಿಕ್ಕು ಕೆಟ್ಟು ಅಲ್ಲಲ್ಲಿ ಅಲೆದಾಡಿದ. ನಿರ್ಗತಿಕರ ನೆಲೆಯಾಗಿದ್ದ ಆ ಸೇತುವೆಯ ಹತ್ತಿರ ಬಂದು ನಿಂತು ಪರಿತಾಪದಲ್ಲಿ ಮುಳುಗಿದ. ಊರ ಕಡೆಯಿಂದ ಸದ್ದುಗದ್ದಲಗಳು ಕೇಳಿಬಂದಿರದಿದ್ದರೆ ಎಷ್ಟು ಹೊತ್ತು ನಿಲ್ಲುತ್ತಿದ್ದನೊ!

## (೧೪)

ಆ ಗದ್ದಲ ಬಂದದ್ದು ಜಾಪ್ ಏರ್ಪಡಿಸಿದ ಕತ್ತೆ ಮೆರವಣಿಗೆಯಾಟದ ಪರಿಣಾಮವಾಗಿ. ಲ್ಯೂಸೆಟಾ ಆ ದಿನದ ತನ್ನ ವೈಭವವನ್ನು ನೆನೆಯುತ್ತ ವಿರಾಮಾಸನದಲ್ಲಿ ಕುಳಿತಿದ್ದಳು. ತೇಲಿ ಬರುತ್ತಿದ್ದ ಸದ್ದಿನೊಡನೆ ನೆರೆಮನೆಯ ಇದಿರುಮನೆಯ ಹೆಣ್ಣಾಳುಗಳಿಬ್ಬರ ಮಾತುಗಳೂ ಕೇಳಬರುತ್ತಿದ್ದವು. ಅವರಿಬ್ಬರ ಮಾತುಗಳಿಂದ ಮೆರ

ವಣಿಗೆ ಮನೆಯೆದುರಿಗೆ ಬರುತ್ತಿದ್ದುದು, ಅದು ತನಗೆ ಮತ್ತು ಹೆಂಚರ್ಡನಿಗೆ ಸಂಬಂಧವಿದ್ದ ಹಾಗೆ ಸ್ಪಷ್ಟವಾಗತೊಡಗಿತು. ತಟ್ಟನೆ ಎದ್ದು ಹೊರಗೆ ಬರಬೇಕೆನ್ನುವಷ್ಟರಲ್ಲಿ ಎಲಿಝಬೆತ್ ಉಸಿರು ಸಾಲದ ಹಾಗೆ ಓಡಿ ಬಂದು ಆಕೆಯನ್ನು ಒಳಗೆ ಬರಮಾಡಿಕೊಳ್ಳಲು ಯತ್ನಿಸಿದಳು. ಕಿಟಿಕಿಗಳನ್ನು ಮುಚ್ಚಲೆತ್ನಿಸಿದಳು. "ಅಯ್ಯೋ, ನನ್ನನ್ನು ಕುರಿತೇ ಇದು. ಇದೀಗ ಮನೆಗೆ




ಕತ್ತೆ ಮೆರವಣಿಗೆ

ಬರುತ್ತಾನೆ. ಇದನ್ನು ಆತ ನೋಡಿದರೆ ನನ್ನ ಗತಿಯೇನು ?" ಎಂದು ಲ್ಯೂಸೆಟಾ ಗೋಳಾಡಿದಳು.

ಇಷ್ಟರಲ್ಲಿ ಮೆರವಣಿಗೆ ಮನೆಯೆದುರು ಸರಸರನೆ ಹಾದುಹೋಯಿತು. ಆಕೆ ನೋಡಬಾರದೆಂದು ಎಲಿಝಬೆತ್ ಎಷ್ಟು ಯತ್ನಿಸಿದರೂ ಆಕೆ ನೋಡಿಯೇ ಬಿಟ್ಟಳು. ತನ್ನ ಮತ್ತು ಹೆಂಚರ್ಡನ ವಿಗ್ರಹಗಳನ್ನು ಬೆನ್ನಿಗೆ ಬೆನ್ನು ತಾಗಿಸಿ ಕತ್ತೆಯ ಮೇಲೆ ಕೂರಿಸಿದ್ದನ್ನು ಕಂಡಳು. "ಅಯ್ಯೋ-ಅಯ್ಯೋ" ಎಂದವಳೆ ದೊಪ್ಪೆಂದು ನೆಲಕ್ಕೆ ಬಿದ್ದು ಎಚ್ಚರದಪ್ಪಿದಳು.

ಕಾಲೆಳೆಯುತ್ತ ಊರ ಕಡೆಗೆ ಬಂದ ಹೆಂಚರ್ಡನೂ ಮೆರವಣಿಗೆಯನ್ನು ನೋಡಿದ. ನೋಡಿದವನೆ ಎಲಿಝಬೆತ್ಳ ಕೋಣೆಗೆ ಧಾವಿಸಿ ಆಕೆ ಲ್ಯೂಸೆಟಾಳ ಮನೆಗೆ ಹೋಗಿದ್ದಳೆಂದು ತಿಳಿದಾಗ ಅಲ್ಲಿಗೂ ಓಡಿದ. ಡಾಕ್ಟರರ ಸಲಹೆಯ ಮೇರೆಗೆ ಫಾರ್ಫ್ರೆಯನ್ನು ಎಲ್ಲಿದ್ದಲ್ಲಿಂದ ಕರೆತರುವ ಅವಸರದಲ್ಲಿದ್ದರು ಎಲ್ಲರೂ. ಎಲಿಝಬೆತ್ಳಿಂದ ನಡೆದುದೆಲ್ಲವನ್ನೂ ತಿಳಿದು ಫಾರ್ಫ್ರೆ ಹೋದ ದಾರಿಯನ್ನು ತಾನು ಬಲ್ಲವನಾದ್ದರಿಂದ ಅತ್ತ ಕಡೆಗೆ ಧಾವಿಸಿದ. ಆತುರ ಹೆಚ್ಚಾದ ಹಾಗೆ ಓಡಿಯೂ ಓಡಿದ. ಕತ್ತರಿದಾರಿಗೆ ಬಂದು ನಿಂತ. ಫಾರ್ಫ್ರೆಯ ಗಾಡಿ ಬರುತ್ತಿದ್ದ ಹಾಗೆ ಕಂಡಿತು. ಮುಂದಕ್ಕೋಡಿ ಕಾತರದಿಂದ ಹೇಳಿದ, "ಫಾರ್ಫ್ರೆ, ನನ್ನ

ಮನೆಯಲ್ಲಿ ಏನೋ ಅವಾಂತರ ನಡೆದಿದೆ; ನಿನ್ನನ್ನು ಕರೆದುಕೊಂಡು ಹೋಗಲು ಧಾವಿಸಿ ಬಂದಿದ್ದೇನೆ, '' ಎಂದು. ನಾಲ್ಕು ಗಂಟೆ ಮೊದಲು ಪ್ರಾಣಾಂತಿಕವಾಗಿ ಹೋರಾಡಿದವನ ಈ ಮಾತನ್ನು ಆತ ನಂಬುವದು ಹೇಗೆ? ಹೆಂಚರ್ಡ ದೀನನಾಗಿ ಬೇಡಿಕೊಂಡ: '' ನೀನು ನನ್ನನ್ನು ನಂಬದಿರುವದು ಸರಿಯೆ. ಅಯ್ಯೋ, ನೀನು ನಂಬಬೇಕು ನಿನ್ನ ಹೆಂಡತಿ ಗಂಡಾಂತರದಲ್ಲಿದ್ದಾಳೆ. ನಾನೊಬ್ಬ ಕಡುಪಾಪಿ ನಿಜ. ಆದರೆ ಈ ಹೃದಯಸಾಕ್ಷಿಯಾಗಿ ಹೇಳುತ್ತೇನೆ-" ಫಾರ್ಫ್ರೆ ನಂಬಲಿಲ್ಲ. ತಾನು ಹೋಗಬೇಕೆಂದಿದ್ದ ಇನ್ನೊಂದು ಹಳ್ಳಿಯ ದಾರಿಯಗುಂಟ ಕುದುರೆಯನ್ನು ನಡೆಸಿ ಕ್ಷಣಾರ್ಧದಲ್ಲಿ ಕಣ್ಮರೆಯಾದ. ಹತಾಶನಾಗಿ ಹೆಂಚರ್ಡ ಹಿಂದಿರುಗಿದ.

ಫಾರ್ಫ್ರೆ ಬಂದಾಗ ರಾತ್ರಿಯಾಗಿತ್ತು. ಗರ್ಭಪಾತವಾಗಿ ನಿಶ್ಚೇಷ್ಟಳಾಗಿ ಮಲಗಿದ ಹೆಂಡತಿಯ ಬದಿಯಲ್ಲಿ ಆತ ರಾತ್ರಿಯನ್ನು ಕಳೆದ. ಆ ರಾತ್ರಿ ತನ್ನ ಮತ್ತು ಹೆಂಚರ್ಡನ ಸಂಬಂಧಗಳನ್ನು ಕುರಿತು ಲ್ಯೂಸೆಟಾ ತನ್ನ ಗಂಡನಿಗೆ ಎಷ್ಟು ಹೇಳಿದಳೊ, ಏನು ಹೇಳಿದಳೊ! ನಿಧಾನವಾಗಿ ರಾತ್ರಿ ಸರಿಯುತ್ತಿತ್ತು. ಆಕೆಯ ಕ್ಷೇಮಸಮಾಚಾರವನ್ನು ತಿಳಿಯುವ ಕಾತರದಿಂದಾಗಿ ನಿದ್ರೆಬಾರದೆ ಹೆಂಚರ್ಡ ಅದೇ ಬೀದಿಯಲ್ಲಿ ರಾತ್ರಿಯೆಲ್ಲವೂ ಹೆಜ್ಜೆ ಹಾಕುತ್ತಿದ್ದ. ಬೆಳಗಿನ ನಾಲ್ಕು ಗಂಟೆಯ ಸುಮಾರಿಗೆ ಲ್ಯೂಸೆಟಾಳ ಆಳೊಬ್ಬಳು ಬಂದು ಹೊರಬಾಗಿಲಿನ ಗಂಟೆಗೆ ಕಟ್ಟಿದ ಕರವಸ್ತ್ರವನ್ನು ಬಿಚ್ಚಿದಳು. ಯಾಕೆ ಎಂದು ಹೆಂಚರ್ಡ ಕೇಳಿದ್ದಕ್ಕೆ "ಯಾರು ಎಷ್ಟು ಸದ್ದು ಮಾಡಿದರೂ ಇನ್ನು ಆಕ ಕೇಳುವ ಹಾಗಿಲ್ಲ '' ಎಂದು ಹೇಳಿ ಒಳಗೆ ಹೋಗಿಬಿಟ್ಟಳು.

( ೧೫ )

ಲ್ಯೂಸೆಟಾಳ ನಿಧನವಾರ್ತೆಯನ್ನು ಹೊತ್ತುಕೊಂಡು, ನಿದ್ರೆಯಿಲ್ಲದೆ ನಿರ್ವಿಣ್ಣಳಾಗಿ ಹೆಂಚರ್ಡನನ್ನು ನೋಡಿಕೊಂಡು ಹೋಗಲೆಂದು ಎಲಿಝಾಬೆತ್ ಆತನ ಗುಡಿಸಲಿಗೆ ಬಂದಳು. ಇತ್ತೀಚೆ ಆತನನ್ನು ನೋಡಿಕೊಳ್ಳುತ್ತಿದ್ದವಳು ಆಕೆಯೆ. ತೀರ ದಣಿದುಹೋದ ಆಕೆಯನ್ನು ಕಂಡು ತಾನು ಉಪಹಾರವನ್ನು ಸಿದ್ಧಗೊಳಿಸುವದಾಗಿಯೂ ಆ ವರೆಗೆ ಆಕೆ ವಿಶ್ರಮಿಸಬೇಕೆಂದೂ ಹೇಳಿದ. ಒಳಗಿನ ಕೋಣೆಯಲ್ಲಿ ಆಕೆ ನೆಲಮುಟ್ಟಿದ್ದೇ ತಡ; ನಿದ್ರೆ ಹೋದಳು. ಹೆಂಚರ್ಡ ಉಪಹಾರ ಸಿದ್ಧಗೊಳಿಸುತ್ತಿದ್ದ. ಬಾಗಿಲು ಸದ್ದಾಯಿತು. ಬಾಗಿಲು ತೆರೆದಾಗ ಬಂದ ವ್ಯಕ್ತಿ, "ಹೆಂಚರ್ಡ ಎಂದರೆ ನೀವೆಯೆ? '' ಎಂದುದಕ್ಕೆ '' ಹೌದು" ಎಂದ. '' ನಾನು ನ್ಯೂಸನ್ '' ಎಂದಾಗ ಹೆಂಚರ್ಡನಿಗೆ ಜೀವ ಹಾರಿದಂತಾಯಿತು.

ನ್ಯೂಸನ್ ತನ್ನ ಕತೆಯನ್ನು ವಿವರಿಸಿದ. ತಾನು ಸೂಸನ್‌ಳೊಡನೆ ಇದ್ದದ್ದು, ತನ್ನ ಹಡಗ ಬಿರುಗಾಳಿಗೆ ಸಿಕ್ಕು ಹಡಗ ಮುಳುಗಿ ಹೋಯಿತೆಂದು ಬಂದ ವಾರ್ತೆಯನ್ನು ನಂಬಿ ತಾಯಿ ಮಕ್ಕಳಿಬ್ಬರೂ ಹೊರಟುಬಂದದ್ದು ಎಲ್ಲವನ್ನೂ ಹೇಳಿದ. '' ಸೂಸನ್ ಸತ್ತುಹೋದಳೆಂದು ಕೇಳಿದೆ. ಪಾಪ! ಅಂಥ ಸರಳ ಸ್ವಭಾವ ಅಪರೂಪ. ಆದರೆ ಎಲಿಝಾಬೆತ್ ಎಲ್ಲಿ ? " ಎಂದುದಕ್ಕೆ ಹೆಂಚರ್ಡ ತಟಕ್ಕನೆ ಹೇಳಿದ: "ಆಕೆಯೂ ಸತ್ತುಹೋದಳು " ಎಂದು. ನ್ಯೂಸನ್ ಒಂದು ಕ್ಷಣ ನೋವಿನಿಂದ ನರಳಿದ. '' ಬಂದ ದಾರಿಗೆ ಸುಂಕವಿಲ್ಲದಾಯಿತು. ಎಷ್ಟು ದಿನವಾಯಿತು ? ''

'' ಒಂದು ವರ್ಷದ ಮೇಲಾಯಿತು '' ಎಂದ ಹೆಂಚರ್ಡ. ನ್ಯೂಸನ್ ಮಾತನಾಡದೆ ಕಾಲೆಳೆಯುತ್ತ ಹಿಂದಿರುಗಿ ಹೊರಟುಹೋದ.

ಹೇಗಾದರೂ ಆಗಲಿ, ಎಲಿಝಾಬೆತ್‌ಳನ್ನು ಉಳಿಸಿಕೊಳ್ಳಲೆಂದು ಹೇಳಿದ ಸುಳ್ಳು ನಿಲ್ಲಲಾರದು ; ನ್ಯೂಸನ್ ಹಿಂದಿರುಗುವದು ಖಂಡಿತ ; ಎಲಿಝಾಬೆತ್ ಹೊರಟು ಹೋಗುವದೂ ಖಂಡಿತ. ತನ್ನ ತಪ್ಪೊ, ದುರ್ದೈವವೊ ಸೂಸನ್ ಫಾರ್ಫ್ರೆ, ಲ್ಯೂಸೆಟಾ, ಎಲ್ಲರೂ ದೂರವಾದರು. ಭವಿಷ್ಯ ಕಗ್ಗತ್ತಲಾಗಿ ಕಂಡಿತು. ಇನ್ನು ಆಗಬೇಕಾದುದೇನು ? ಹೋಗಬೇಕಾದುದೇನು ? ಎಷ್ಟು ದಿನ ಹೀಗೆ ಬಾಳಬೇಕು ? ಈ ಯೋಚನೆಯ ನೋವು ತಡೆಯಲು ಅಸಾಧ್ಯವಾಯಿತು.

ಒಂದು ಸಲ ಆತ್ಮ ಹತ್ಯೆಮಾಡಿಕೊಳ್ಳಬೇಕೆಂದ. ಎಲಿಝಾಬೆತ್ ಉಳಿಸಿದಳು. ಎಲಿಝಾಬೆತ್‌ಳ ಹೊರತು ಇನ್ನು ತನಗೆ ಯಾರು? ಎಂದುಕೊಂಡ. ಆದರೆ ಆಕೆಯಾದರೂ ಎಷ್ಟು ದಿನದವಳು? ಇಂದಿಲ್ಲ ನಾಳೆ ನ್ಯೂಸನ್ ಬರುತ್ತಾನೆ; ನೋವಿನಲ್ಲಿ, ನಿರಾಶೆಯಲ್ಲಿ, ಎಲಿಝಾಬೆತ್‌ಳ ಆರೈಕೆಯಲ್ಲಿ ದಿನಗಳು ಉರುಳುತ್ತಿದ್ದವು. ಆದರೆ ನಿರೀಕ್ಷಿಸಿದಂತೆ ನ್ಯೂಸನ್ ಬರಲಿಲ್ಲ! ಯಾವ ಶಕ್ತಿಯ ಅಂಕಿತಕ್ಕೆ ಒಳಗಾಗಿ ನಡೆಯುತ್ತಿದೆಯೊ ಬದುಕು, ಎಂದುಕೊಂಡ.

ದಿನಗಳು ಉರುಳಿದವು. ತಿಂಗಳು ಸರಿದವು. ನ್ಯೂಸನ್ ಬರಲೇ ಇಲ್ಲ. ಹೆಂಡತಿಯನ್ನು ಕಳೆದುಕೊಂಡ ಫಾರ್ಫ್ರೆಗೆ ಕಾಲಾವಧಿಯಲ್ಲಿ ಎಲ್ಲವೂ ತಿಳಿಯಿತು. ಹೆಚ್ಚಿಗೆ ಮಾತನಾಡಬಹುದಾದ ವಿಷಯವೂ ಅದಾಗಿರಲಿಲ್ಲ. ಆತನ ದುಃಖವೂ ಕಡಿಮೆಯಾಯಿತು. ವಂತಿಗೆಯನ್ನು ಕೂಡಿಸಿ ಹೆಂಚರ್ಡನಿಗೊಂದು ಚಿಕ್ಕ ಅಂಗಡಿಯನ್ನು ಹಾಕಿಕೊಟ್ಟ. ಎಲಿಝಾಬೆತ್‌ಳ ಸಹಾಯದಿಂದಾಗಿ ನಿಧಾನವಾಗಿ ಅಂಗಡಿ ಬೆಳೆಯುತ್ತಲೂ ಇತ್ತು. ಬದುಕಿನ ಬಣ್ಣ ಬದಲಾಗುತ್ತಿದ್ದ ಹಾಗಿತ್ತು.

ಲ್ಯೂಸೆಟಾ ಹೋಗಿ ವರ್ಷದ ಮೇಲಾಗಿತ್ತು. ಒಂದು ಸಲ ಪೇಟೆಯಲ್ಲಿ ಫಾರ್ಫ್ರೆ-ಎಲಿಝಾಬೆತ್‌ರ ನೋಟ ವಿಚಿತ್ರವಾಗಿ ಬೆರೆಯುತ್ತಿದ್ದುದನ್ನು ಗಮನಿಸಿದ. ಅವನಿಗೆ ಅದು ಬೇಡವಾಗಿತ್ತು. ಆದರೆ ಆಕೆಗೆ ಪ್ರತಿಯಾಗಿ ಏನನ್ನೂ ಹೇಳಲಾರದವನಾಗಿದ್ದ. ದಿನ ಕಳೆದ ಹಾಗೆ ಅವರಿಬ್ಬರು ಇನ್ನೂ ಹತ್ತಿರ ಬರುತ್ತಿದ್ದುದು ಸ್ಪಷ್ಟವಾಯಿತು. ಇನ್ನೊಂದು ದಿನ ಅವರಿಬ್ಬರು ಇನ್ನು ಹತ್ತಿರ ಬಂದು ಮುದ್ದಿಸಿದ್ದನ್ನೂ ನೋಡಿಯಾಯಿತು. ಈಕೆ ತನ್ನ ಮಗಳಲ್ಲ, ಯಾರ ಮಗಳೂ ಅಲ್ಲ ಎಂದು ಹೇಳಿ ಇದನ್ನು ಮುರಿದುಬಿಡಲೆ ಎಂದುಕೊಂಡ. ಹಾಗೆ ಮಾಡಿದರೆ ಆಕೆ ತನ್ನ ಹತ್ತಿರವೆ ಉಳಿಯಬಹುದು ಎಂದುಕೊಂಡ. ಆದರೆ ಮರುಕ್ಷಣದಲ್ಲಿಯೆ, '' ಅಯ್ಯೋ, ಯಾವ ಪಾಪಕ್ಕಾಗಿ ಈ ದುಷ್ಟ ಯೋಚನೆಗಳು ನನ್ನನ್ನು ಕಾಡುತ್ತಿವೆ ?'' ಎಂದು ಸುಮ್ಮನಾದ.

( ೧೬ )

ಹೀಗಿರುವಾಗ ಒಂದು ದಿನ ಊರಲ್ಲಿ ನ್ಯೂಸನ್ ಬಂದುದು ತಿಳಿಯಿತು. ಹೆಂಚರ್ಡ ಎಲಿಝಾಬೆತ್‌ಳನ್ನು ಕುರಿತು '' ನಾನು ಈ ಊರನ್ನು ಬಿಟ್ಟು ಹೋಗಬೇಕೆಂದಿದ್ದೇನೆ, '' ಎಂದುದಕ್ಕೆ ಆಕೆ '' ಯಾಕೆ ತಾತ ? ಆತನನ್ನು ನಾನು ಮದುವೆಯಾಗುವದು ನಿನಗೆ ಇಷ್ಟವಿಲ್ಲವೆ ? '' ಎಂದು ಕೇಳಿದ್ದಳು. '' ನಿನಗೆ ಯಾವದು ಇಷ್ಟವೋ ಅದು ನನಗೆ ಯಾವಾಗಲೂ ಇಷ್ಟ, ಮಗು. ಆದರೆ ನಾನು ಇನ್ನು ಇಲ್ಲಿ ಇರಬಾರದು. ನಾನು ಹೊರಟು ಹೋಗುತ್ತೇನೆ, ನೀನು ಸುಖವಾಗಿರು. ಆದರೆ ಒಂದು ಮಾತು: ನಿನ್ನ ಸುಖದಲ್ಲಿ ನನ್ನನ್ನು ಮಾತ್ರ ಮರೆಯಬಾರದು. ಏನಾದರೂ ನೀನು ನನ್ನನ್ನು ಮರೆಯಬಾರದು '' ಎಂದು ತುಂಬಿದ ಕಂಠದಿಂದ ಬೇಡಿಕೊಂಡ. ಎಲಿಝಾಬೆತ್‌ಳ ಕಣ್ಣೀರು ಧಾರಾಕಾರವಾಗಿ ಹರಿಯಿತು. ಎಷ್ಟೇ ಬೇಡವೆಂದರೂ ಆತ ಕೇಳಲಿಲ್ಲ. ಅಂದು ಸಂಜೆ ಅಲ್ಲಿಂದ ಹೊರಟ. ಊರಹೊರಗಿನವರೆಗೆ ಎಲಿಝಾಬೆತ್ ಬಂದಿದ್ದಳು. ಕಣ್ಣೀರ ತೆರೆಯಾಚೆಯಲ್ಲಿ ಆತ ದೂರವಾಗುತ್ತಿರುವದನ್ನು ನೋಡಿ ಹಿಂದಿರುಗಿದಳು. ಕಾಲು ಶತಮಾನದಾಚೆ ಬಂದಹಾಗೆಯೆ ಹೆಂಚರ್ಡ ಹೊರಟುಹೋದ. ಬಡ ಕೂಲಿಕಾರನಾಗಿ ಬಂದು ನಗರಾಧ್ಯಕ್ಷನಾಗಿ ವೈಭವದಿಂದ ಮೆರೆದು ಬಡ ಕೂಲಿಕಾರನಾಗಿ ಹೊರಟು ಹೋದ.

ಹಿಂದಿರುಗಿ ಬರುತ್ತಿದ್ದಾಗ ಆಕೆಗೆ ದಾರಿಯಲ್ಲಿ ಫಾರ್ಫ್ರೆ ಸಿಕ್ಕ. ಆತ "ನಿನ್ನನ್ನು ಕಾಣಲೆಂದು ಕಾಗದ ಬರೆದವರು ನನ್ನಲ್ಲಿಯೆ ಇದ್ದಾರೆ. ಅಲ್ಲಿಗೇ ಹೋಗುವಾ" ಎಂದು ಮನೆಗೆ ಕರೆದುಕೊಂಡು ಹೋದ. ಕೋಣೆಯಲ್ಲಿ ಆಕೆಗಾಗಿ ಕಾಯುತ್ತ ಕುಳಿತಿದ್ದ ವ್ಯಕ್ತಿ ನ್ಯೂಸನ್. ತಂದೆ-ಮಗಳ ಸಮಾಗಮವಾಯಿತು. ಹೆಂಚರ್ಡ ತಾನು ಆಕೆಯ ತಂದೆ ಎಂದು ಹೇಳಿದ್ದು, ಆಕೆ ಸತ್ತಳೆಂದು

ಹೇಳಿದ್ದು, ಎಲ್ಲವೂ ಎಲಿಝಾಬೆತ್‌ಳಿಗೆ ಅರ್ಧ ಗಂಟೆಯ ಮಾತಿನಲ್ಲಿ ತಿಳಿಯಿತು. ಹೆಂಚರ್ಡನ ಬಗೆಯಲ್ಲಿ ಅದೇ ಆಕೆಯ ಹೃದಯವನ್ನು ಸೂರೆಗೊಂಡಿದ್ದ ಕರುಣೆಯಲ್ಲವೂ ಮಾಯವಾಯಿತು. ಎಂಥ ಮೋಸ ಇದು ಎಂದುಕೊಂಡಳು. ಒಂದು ಗಂಟೆ ಮೊದಲು "ಏನಾದರೂ ಮರೆಯುವದಿಲ್ಲ" ಎಂದು ಹೆಂಚರ್ಡನಿಗೆ ಮಾತು ಕೊಟ್ಟವಳು ಆತನನ್ನು ನೆನೆಯದಿರುವದೇ ಒಳ್ಳೆಯದು ಎಂದುಕೊಳ್ಳುವಂತಾದಳು.

( ೧೭ )

ಹಗಲು ರಾತ್ರಿ ಎನ್ನದೆ ದಾರಿ ತುಳಿದು ಹೆಂಚರ್ಡ ದೂರದೂರ ಹೋದ. ತನ್ನ ಕರ್ಮಕ್ಕೆ



ಹಕ್ಕಿಯ ಪಂಜರವನ್ನು ಬೇಲಿಯ ಬಳಿ ಇಟ್ಟ

ಪ್ರಾಯಶ್ಚಿತ್ತವೆಂಬಂತೆ ಸೂಸನ್‌ಳನ್ನು ಮಾರಿದ ಸ್ಥಳಕ್ಕೆ ಬಂದು ಪರಿತಪಿಸಿದ. ಅಲ್ಲಿಂದ ಮುಂದೆ ಸಾಗಿ ಎಲ್ಲೆಲ್ಲಿಯೋ ಹೋಗಿ ಕೆಲಸ ಸಿಕ್ಕಾಗ ದುಡಿದು, ಊಟ ಸಿಕ್ಕಾಗ ಉಂಡು ಎಲ್ಲಿಯೋ ಒಂದು ಕಡೆ ಉಳಿದ. ಆದರೆ ಎಲ್ಲಿ ಹೋದರೂ ಕ್ಯಾಸ್ಟರ್‌ಬ್ರಿಜ್ ನಗರದತ್ತ ನಿಟ್ಟಿಸುತ್ತ ನಿಲ್ಲುತ್ತಿದ್ದ. ಹಾಗೆ ನೆನೆದಾಗಲೆಲ್ಲವೂ ಎಲಿಝಾಬೆತ್‌ಳ ಸೆನಹು, ಪ್ರೀತಿ ಉಕ್ಕಿಬರುತ್ತಿದ್ದವು. ಹೀಗೆ ದಿನಗಳು ಸರಿಯುತ್ತಿದ್ದಾಗ ಒಂದು ದಿನ ಕಾಸ್ಟರ್‌ಬ್ರಿಜ್‌ದಿಂದ ಬಂದ ಗಾಡಿಯವರಿಂದ ಅಲ್ಲಿಯ ನಗರಾಧ್ಯಕ್ಷ ಅಷ್ಟರಲ್ಲಿಯೆ ಮದುವೆಯಾಗಲಿದ್ದಾನೆ ಎಂಬ ಸಮಾಚಾರ ತಿಳಿಯಿತು. ಎಲಿಝಾಬೆತ್‌ಳ ಮದುವೆಗೆ ತಾನೇಕೆ ಹೋಗಬಾರದು ಎಂದು ಯೋಜನೆಗಾರಂಭವಾಯಿತು. ಮದುವೆ ಮುಖ್ಯವಾಗಿ ಕಾಣಲಿಲ್ಲ. ಆದರೆ ಆ ನೆಪದಿಂದ ಆಕೆಯನ್ನು ತಾನು ಇನ್ನೊಮ್ಮೆ ಕಣ್ಣಾರೆ ನೋಡಬೇಕು ಎಂಬ ಆಸೆ ಬಲವಾಯಿತು. ಕೊನೆಗೆ ಹೊರಡುವದೆಂದು ಇದ್ದುಬಿದ್ದುದರಲ್ಲಿಯೆ ಬಟ್ಟೆಬರೆಗಳ ಸಿದ್ಧತೆಗಳನ್ನು ಮಾಡಿಕೊಂಡು, ಆಕೆಗೆ ಮದುವೆಯ ಕಾಣಿಕೆಯೆಂದು ಒಂದು ಹಾಡುವಕ್ಕಿಯನ್ನು ಪಂಜರದಲ್ಲಿರಿಸಿಕೊಂಡು ಹೊರಟ.

ಕಾಲ್ನಡಿಗೆಯಿಂದಲೊ, ಸಾಧ್ಯವಾದಾಗ ಗಾಡಿಯಲ್ಲಿಯೊ ಪ್ರಯಾಣ ಸಾಗಿಸಿ ಆತ ಕ್ಯಾಸ್ಟರ್‌ಬ್ರಿಜ್ ನಗರವನ್ನು ಮುಚ್ಚಂಜೆಯಾದ ನಂತರ ಬಂದು ಸೇರಿದ. ಫಾರ್ಫ್ರೆಯ ಮನೆ ಭವ್ಯವಾಗಿ ಸಿಂಗಾರವಾಗಿತ್ತು. ಅಂದೇ ಮದುವೆ ನಡೆದಿತ್ತು. ತನ್ನ ಧೂಳು ಮುಸುಕಿದ ವೇಷದಲ್ಲಿ ಮುಂಬಾಗಿಲಿನಿಂದ ಹೋಗುವದು ಬೇಡವೆಂದು ಹಕ್ಕಿಯ ಪಂಜರವನ್ನು ಬೇಲಿಯ ಬಳಿ ಇಟ್ಟು ಹಿತ್ತಿಲ ಬಾಗಿಲಿಂದ ಪ್ರವೇಶಿಸಿದ. ಇಣಿಕಿನೋಡಿದ, ನೃತ್ಯ ನಡೆದಿತ್ತು. ಆಳಿನ ಮುಖಾಂತರ ಎಲಿಝಾಬೆತ್‌ಳಿಗೆ "ಒಬ್ಬ ಹಳೆಯ ಬಡ ಸಂಬಂಧಿಕ ಬಂದಿದ್ದಾನೆ" ಎಂದು ಹೇಳಿಕಳುಹಿದ. ಕುಣಿತದ ಒಂದು ಮಟ್ಟ ಮುಗಿದಾಗ ಎಲಿಝಾಬೆತ್ ಬಂದಳು. ಈತನನ್ನು ನೋಡಿ "ಓ! ನೀನೇ!"

ಎಂದುಬಿಟ್ಟಳು. ಹೆಂಚರ್ಡ ತಟ್ಟನೆ ಆಕೆಯ ಕೈಯನ್ನು ಹಿಡಿದು "ಹಾಗೆನ್ನಬೇಡ, ಎಲಿಝಾಬೆತ್ ನೀನು ನನ್ನನ್ನು ಏನು ಬೇಕಾದರೂ ಹೇಳು. ಆದರೆ ಹಾಗೆಂದು ನನ್ನನ್ನು ದೂರವಾಗಿಸಬೇಡ. ನಿನ್ನ ತಂದೆ ಬಂದಿದ್ದಾನೆಂದಮೇಲೆ ಎಲ್ಲವೂ ನಿನಗೆ ತಿಳಿದಿದೆ. ಆದರೂ ಆದರೂ— ಈ ಬಡಪಾಯಿಗಾಗಿ ಒಂದಿಷ್ಟು ಕರುಣೆ ಇರಲಿ" ಎಂದು ಅಂಗಲಾಚಿದ.

ನಿಧಾನವಾಗಿ ತನ್ನಕೈಯನ್ನು ಬಿಡಿಸಿಕೊಳ್ಳುತ ಆಕೆ ಹೇಳಿದಳು: "ನಿನ್ನನ್ನು ನಾನು ಎಂದೆಂದಿಗೂ ಪ್ರೀತಿಸುತ್ತಿರಬಹುದಾಗಿತ್ತು. ಆದರೆ ಎಂಥ ಮೋಸಮಾಡಿದೆ! ನನ್ನ ತಂದೆ ನಿಜವಾಗಿ ನನ್ನ ತಂದೆಯಲ್ಲ ಎಂದು ಹೇಳಿದೆ. ಆತ ಕೇಳಬಂದಾಗ ನಾನು ಸತ್ತುಹೋದೆ ಎಂದು ಹೇಳಿದೆ. ಈ ಪರಿಯಾಗಿ ನನ್ನನ್ನು ಮೋಸಮಾಡಿದ ನಿನ್ನನ್ನು ನಾನು ಪ್ರೀತಿಸುವದು ಹೇಗೆ?" ಏನನ್ನೋ ಹೇಳಬೇಕೆಂದಿದ್ದ ಹೆಂಚರ್ಡ ತುಟಿ ಎರಡು ಮಾಡಲಿಲ್ಲ. ಒಂದು ಕ್ಷಣ ನಿಂತು, ಆಕೆಯನ್ನು ಕಣ್ತುಂಬ ನೋಡಿದ. ಹೊರಡುವಾಗ ಕೊನೆಯಾಗಿ "ನಾನಿಲ್ಲಿಗೆ ಬರಬಾರದಾಗಿತ್ತು. ನನ್ನದೇ ತಪ್ಪಾಯಿತು. ಏನೋ ಬಂದೆ, ನೀನು ಕ್ಷಮಿಸಬೇಕು. ಇನ್ನು ಬರುವುದಿಲ್ಲ. ಇನ್ನು ಎಂದಿಗೂ ಬರುವುದಿಲ್ಲ, ಎಲಿಝಾಬೆತ್" ಎಂದವನೆ ಹೊರಟುಹೋದ.

## (೧೮)

ಹೊಸ ಮನೆಗೆ ಯಜಮಾನಿತಿಯಾದ ಮೊದಲ ವಾರದಲ್ಲಿ ಮನೆ-ಆವಾರಗಳನ್ನು ನೋಡಿಕೊಳ್ಳುತ್ತಿದಾಗ ಎಲಿಝಾಬೇತಳಿಗೆ ಹೆಂಚರ್ಡ ಬಿಟ್ಟುಹೋಗಿದ್ದ ಹಕ್ಕಿಯ ಪಂಜರ ಕಣ್ಣಿಗೆ ಬಿದ್ದಿತು. ನಾಲ್ಕಾರು ದಿನ ಅದನ್ನು ಯಾರೂ ನೋಡಿರಲಿಲ್ಲ. ಒಳಗಿನ ಹಕ್ಕಿ ಹೊಟ್ಟೆಗಿಲ್ಲದೆ ಸತ್ತುಹೋಗಿತ್ತು. ಅದನ್ನು ತಂದವರು ಯಾರೆಂಬುದು ಯಾರಿಗೂ ಹೊಳೆಯದು. ವಿಚಾರಿಸುತ್ತಿರಲಾಗಿ ಮದುವೆಯ ದಿನ ಸಂಜೆ ಬಂದ ಯಾರೋ ಕೈಯಲ್ಲಿ ಹಿಡಿದುಕೊಂಡು ಬಂದ ಹಾಗಿತ್ತು, ಎಂದು ಆಳೊಬ್ಬಳು ಹೇಳಿದಳು. ಸರಿ; ಎಲಿಝಾಬೆತ್‌ಳಿಗೆ ತಟ್ಟನೆ ಹೊಳೆಯಿತು—ಮದುವೆಯ ಕಾಣಿಕೆಯೆಂದು, ತನ್ನ ಪಶ್ಚಾತ್ತಾಪದ ಕುರುಹೆಂದು ಆತನೇ ತಂದಿರಬೇಕೆಂದು.

ಇದನ್ನು ನೆನೆದ ಹಾಗೆಲ್ಲ ಆಕೆಯ ಹೃದಯದಲ್ಲಿ ಹೆಂಚರ್ಡನ ಬಗೆಯಲ್ಲಿ ಕರುಣೆ ಮೂಡಿತು. ಆತನನ್ನು ಇನ್ನೊಮ್ಮೆ ಕಾಣಬೇಕು ಎಂದೆನಿಸತೊಡಗಿತು. ಗಂಡನಿಗೆ ಹೇಳಿದಾಗ ಆತನೂ ಒಪ್ಪಿದ. ಆತನನ್ನು ಹುಡುಕುವದೆಂದು ಮರುದಿನ ಇಬ್ಬರೂ ಗಾಡಿಯನ್ನೇರಿ ಹೊರಟರು. ಕೇಳಿ ತಿಳಿದ ಸುಳಿವು ಹಿಡಿದು ಮುಂದೆ ಸಾಗಿಯೆ ಸಾಗಿದರು. ಇಪ್ಪತ್ತು ಮೈಲಿಗಳಾಚೆ ಬಂದರೂ ಆತ ಎಲ್ಲಿಯೂ ಕಾಣಲಿಲ್ಲ. ಹೀಗೆಯೆ ಮುಂದೆ ಸಾಗಿದರೆ ಕತ್ತಲಾಗುವದರೊಳಗಾಗಿ ಹಿಂದಿರುಗುವದು ಅಸಾಧ್ಯವೆಂದು ಹುಡುಕುವದನ್ನು ಬಿಟ್ಟುಕೊಡುವದರಲ್ಲಿದ್ದರು. ಅಷ್ಟರಲ್ಲಿ ದೂರದಲ್ಲಿ ಎಲ್ಲಿಯೊ ಯಾರೋ ಒಬ್ಬರು ಕಂಡಹಾಗಾಯಿತು. ಇಬ್ಬರೂ ಆ ಕಡೆ ಸಾಗಿದರು. ಒಂದು ಹರಕು ಮುರುಕ ಗುಡಿಸಲೆಡೆಗೆ ಒಬ್ಬ ನಡೆದಿದ್ದ. ಹತ್ತಿರ ಬಂದ, ಹಾಗೆ "ಆತ ನಮ್ಮಲ್ಲಿ ಕೆಲಸಕ್ಕೆ ಬರುತ್ತಿದ್ದ ಎಬೆಲ್ ಹಾಗಿಲ್ಲವೆ?" ಎಂದು ಇನ್ನೂ ಮುಂದಕ್ಕೆ ಬಂದರು. ವ್ಯಕ್ತಿ ಗುಡಿಸಲಿನೊಳಕ್ಕೆ ಹೋಗಿತ್ತು. ಬಾಗಿಲು ತಟ್ಟಿದಾಗ ಒಳಗಿನಿಂದ ಬಂದವ ಎಬೆಲ್‌ನೇ ಆಗಿದ್ದ. "ಅದೇನು ಎಬೆಲ್, ಇಲ್ಲಿ ಹೇಗೆ ನೀನು?" ಎಂದುದಕ್ಕೆ ಆತ "ನನ್ನ ಬಗೆಯಲ್ಲಿ ಆತ ನಿಷ್ಠುರನಾಗಿದ್ದರೂ ನನ್ನ ತಾಯಿಯನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದ" ಎಂದು ಹೇಳಿದ.

"ಯಾರು? ಏನು ನೀನು ಹೇಳುತ್ತಿರುವದು?"

"ಗೊತ್ತಿಲ್ಲವೆ ನಿಮಗೆ? ಅವನೇ, ಹೆಂಚರ್ಡ. ಅವನೀಗ ಹೋಗಿ ಅರ್ಧ ಗಂಟೆಯಾಯಿತು!"

ತಾನು ಅವರಿಬ್ಬರ ಮದುವೆಯ ರಾತ್ರಿ ಊರ ಬೀದಿಯಲ್ಲಿ ತತ್ತರಿಸುತ್ತ ಹೊರಟಿದ್ದ ಆತನನ್ನು ಕಂಡು ಹಿಂಬಾಲಿಸಿ ಬಂದದ್ದನ್ನು ರಾತ್ರಿಯೆಲ್ಲವೂ ಆತ ನಡೆದು ನಡೆದು ಕಂಗಾಲಾಗಿ

ಕುಸಿದು ಬೀಳುತ್ತಿರುವಾಗ ಆತನನ್ನು ತಾನು ಅಲ್ಲಿಗೆ ಸಾಗಿಸಿದ್ದನ್ನು, ಇತ್ತೀಚಿನ ಮೂರು ದಿನ ಅನ್ನ ನೀರು ಎಲ್ಲವನ್ನೂ ತೊರೆದು ಆತ ಅದೇ ಪ್ರಾಣ ಬಿಟ್ಟದ್ದನ್ನು ಎಬೆಲ್ ವಿವರಿಸಿದ. "ತಲೆ ದಿಂಬಿನ ಹತ್ತಿರ ಏನನ್ನೋ ಬರೆದಿಟ್ಟಿದ್ದಾನೆ. ನನಗೆ ಓದುಬಾರದು" ಎಂದು ಒಳಗೆ ಹೋಗಿ ಮುದ್ದೆಯಾಗಿದ್ದ ಒಂದು ಕಾಗದವನ್ನು ತಂದು ಕೊಟ್ಟ. ಅದರಲ್ಲಿ ಹೀಗೆ ಬರೆದಿತ್ತು: "ಹೆಂಚರ್ಡನ ಮರಣಶಾಸನ—ನನ್ನ ಸಾವಿನ ಸಮಾಚಾರವನ್ನು ಎಲಿಝಾಬೆತ್‌ಳಿಗೆ ತಿಳಿಸಿ ಆಕೆಯನ್ನು ನೋಯಿಸಬಾರದು; ಯಾವ ಪುಣ್ಯ ಭೂಮಿಯಲ್ಲಿಯೂ ನನ್ನನ್ನು ಹೂಳಬಾರದು; ನನ್ನ ಮೃತದೇಹವನ್ನು ಯಾರೂ ನೋಡಬಾರದು; ನನ್ನಗೋರಿಯ ಮೇಲೆ ಯಾರೂ ಹೂವುಗಳನ್ನಿರಿಸಬಾರದು. ನನ್ನನ್ನು ಯಾರೂ ಎಂದಿಗೂ ನೆನೆಯಬಾರದು" ಇತ್ಯಾದಿ.

ಶೋಕಾಕುಲರಾಗಿ ಇಬ್ಬರೂ ಆ ಲೇಖವನ್ನೋದಿದರು. ಸಾಧ್ಯವಿದ್ದ ಮಟ್ಟಿಗೆ ಆತನ ಮಾತನ್ನು ನಡೆಸಿದರು. ತಾನು ಕೊನೆಯಾಗಿ ಆತನಿಗಾಡಿದ ಮಾತೇ ಇಷ್ಟಕ್ಕೆ ಕಾರಣವಾಯಿತು ಎಂದು ಎಲಿಝಾಬೆತ್ ಪರಿತಪಿಸಿದಳು. ದಿನ ಕಳೆದ ಹಾಗೆ ಆಕೆಯ ದುಃಖದ ಉದ್ವೇಗ ಕಡಿಮೆಯಾದರೂ ಒಟ್ಟಿನಲ್ಲಿ ಬದುಕು ಕಷ್ಟ ಎಂದು ತೋರಿತು. ಕಷ್ಟ ತುಂಬಿದ ಪ್ರಪಂಚದಲ್ಲಿಯ ನಾಲ್ಕು ದಿನದ ಇರವಿನ ಬಗೆಯಲ್ಲಿ ಇಲ್ಲದ ಉತ್ಸಾಹ ಯಾರಿಗೂ ಸಲ್ಲದು ಎಂದು ತೋರಿತು. ತನ್ನ ಹಾಗೆ ಯೋಗ್ಯತೆಗೆ ಮೀರಿದ ಸುಖವನ್ನು ಕೆಲವರು ಪಡೆಯಬಹುದಾದರೂ ಯೋಗ್ಯತೆಗೆ ತಕ್ಕ ಸುಖವನ್ನು ಪಡೆಯದವರು ಹಲವರಿರಬಹುದು ಎಂದೆನಿಸಿತು. ತನ್ನ ಬಾಳು ಸುಖದಲ್ಲಿಯೆ ಪರ್ಯವಸಾನವಾಗಿದ್ದರೂ ಬಾಳು ಬೆಳೆಯುವದು ಅನಿರೀಕ್ಷಿತವಾಗಿಯೆ ಎಂಬುದನ್ನಾಗಲಿ, ಈ ಬಾಳುವೆಯೆಂಬ ಶೋಕಸಂಕೀರ್ತನೆಯಲ್ಲಿ ಸುಖವೆಂಬುದೊಂದು ಅಡ್ಡ ಕತೆಮಾತ್ರ ಎಂಬುದನ್ನಾಗಲಿ ಆಕೆ ಮರೆಯುವದು ಸಾಧ್ಯವಿರಲಿಲ್ಲ.

ಂದುಬಿಟ್ಟಳು. ಹೆಂಚರ್ಡ ತಟ್ಟನೆ ಆಕೆಯ ಕೈ ಯನ್ನು ಹಿಡಿದು "ಹಾಗೆನ್ನಬೇಡ, ಎಲಿಝಾ-ಬೆತ್ ನೀನು ನನ್ನನ್ನು ಏನು ಬೇಕಾದರೂ ಹೇಳು. ...ದರೆ ಹಾಗೆಂದು ನನ್ನನ್ನು ದೂರವಾಗಿಸಬೇಡ. ...ನ್ನ ತಂದೆ ಬಂದಿದ್ದಾನೆಂದಮೇಲೆ ಎಲ್ಲವೂ ನಿನಗೆ ...ರಿದಿದೆ. ಆದರೂ ಆದರೂ— ಈ ಬಡಪಾಯಿ ...ಾಗಿ ಒಂದಿಷ್ಟು ಕರುಣೆ ಇರಲಿ" ಎಂದು ಅಂಗ ...ಾಚಿದ.

...ನಿಧಾನವಾಗಿ ತನ್ನ ಕೈಯನ್ನು ಬಿಡಿಸಿಕೊಳ್ಳುತ ...ಕೆ ಹೇಳಿದಳು: "ನಿನ್ನನ್ನು ನಾನು ಎಂದೆಂದಿಗೂ ...ೀತಿಸುತ್ತಿರಬಹುದಾಗಿತ್ತು. ಆದರೆ ಎಂಥ ...ೋಸಮಾಡಿದೆ! ನನ್ನ ತಂದೆ ನಿಜವಾಗಿ ನನ್ನ ...ಂದೆಯಲ್ಲ ಎಂದು ಹೇಳಿದೆ. ಆತ ಕೇಳಬಂದಾಗ ...ಾನು ಸತ್ತುಹೋದೆ ಎಂದು ಹೇಳಿದೆ. ಈ ಪರಿ-...ಾಗಿ ನನ್ನನ್ನು ಮೋಸಮಾಡಿದ ನಿನ್ನನ್ನು ...ಾನು ಪ್ರೀತಿಸುವದು ಹೇಗೆ?" ಏನನ್ನೋ ...ೇಳಬೇಕೆಂದಿದ್ದ ಹೆಂಚರ್ಡ ತುಟಿ ಎರಡು ...ಾಡಲಿಲ್ಲ. ಒಂದು ಕ್ಷಣ ನಿಂತು, ಆಕೆಯನ್ನು ...ಣ್ತುಂಬ ನೋಡಿದ. ಹೊರಡುವಾಗ ಕೊನೆ ...ಾಗಿ "ನಾನಿಲ್ಲಿಗೆ ಬರಬಾರದಾಗಿತ್ತು. ನನ್ನದೇ ...ಪ್ಪಾಯಿತು. ಏನೋ ಬಂದೆ, ನೀನು ಕ್ಷಮಿಸ ...ೇಕು. ಇನ್ನು ಬರುವುದಿಲ್ಲ. ಇನ್ನು ಎಂದಿಗೂ ...ರುವುದಿಲ್ಲ, ಎಲಿಝಾಬೆತ್" ಎಂದವನೆ ...ೂರಟುಹೋದ.

(೧೮)

...ಹೊಸ ಮನೆಗೆ ಯಜಮಾನಿತಿಯಾದ ಮೊದಲ ...ರದಲ್ಲಿ ಮನೆ-ಆವಾರಗಳನ್ನು ನೋಡಿಕೊಳ್ಳು ...ದಾಗ ಎಲಿಝಾಬೇತಳಿಗೆ ಹೆಂಚರ್ಡ ಬಿಟ್ಟು ...ಹೋಗಿದ್ದ ಹಕ್ಕಿಯ ಪಂಜರ ಕಣ್ಣಿಗೆ ಬಿದ್ದಿತು. ...ಕ್ಕರು ದಿನ ಅದನ್ನು ಯಾರೂ ನೋಡಿರಲಿಲ್ಲ. ...ಳಗಿನ ಹಕ್ಕಿ ಹೊಟ್ಟೆಗಿಲ್ಲದೆ ಸತ್ತುಹೋಗಿತ್ತು. ...ದನ್ನು ತಂದವರು ಯಾರೆಂಬುದು ಯಾರಿಗೂ ...ಳಿಯದು. ವಿಚಾರಿಸುತ್ತಿರಲಾಗಿ ಮದುವೆಯ ...ಸಂಜೆ ಬಂದ ಯಾರೋ ಕೈಯಲ್ಲಿ ಹಿಡಿದು ಕೊಂಡು ಬಂದ ಹಾಗಿತ್ತು, ಎಂದು ಆಳೊಬ್ಬಳು ಹೇಳಿದಳು. ಸರಿ; ಎಲಿಝಾಬೆತ್‌ಳಿಗೆ ತಟ್ಟನೆ ಹೊಳೆಯಿತು—ಮದುವೆಯ ಕಾಣಿಕೆಯೆಂದು, ತನ್ನ ಪಶ್ಚಾತ್ತಾಪದ ಕುರುಹೆಂದು ಆತನೇ ತಂದಿರಬೇಕೆಂದು.

ಇದನ್ನು ನೆನೆದ ಹಾಗೆಲ್ಲ ಆಕೆಯ ಹೃದಯದಲ್ಲಿ ಹೆಂಚರ್ಡನ ಬಗೆಯಲ್ಲಿ ಕರುಣೆ ಮೂಡಿತು. ಆತನನ್ನು ಇನ್ನೊಮ್ಮೆ ಕಾಣಬೇಕು ಎಂದೆನಿಸತೊಡಗಿತು. ಗಂಡನಿಗೆ ಹೇಳಿದಾಗ ಆತನೂ ಒಪ್ಪಿದ. ಆತನನ್ನು ಹುಡುಕುವದೆಂದು ಮರುದಿನ ಇಬ್ಬರೂ ಗಾಡಿಯನ್ನೇರಿ ಹೊರಟರು. ಕೇಳಿ ತಿಳಿದ ಸುಳಿವು ಹಿಡಿದು ಮುಂದೆ ಸಾಗಿಯೆ ಸಾಗಿದರು. ಇಪ್ಪತ್ತು ಮೈಲಿಗಳಾಚೆ ಬಂದರೂ ಆತ ಎಲ್ಲಿಯೂ ಕಾಣಲಿಲ್ಲ. ಹೀಗೆಯೆ ಮುಂದೆ ಸಾಗಿದರೆ ಕತ್ತಲಾಗುವದರೊಳಗಾಗಿ ಹಿಂದಿರುಗುವದು ಅಸಾಧ್ಯವೆಂದು ಹುಡುಕುವದನ್ನು ಬಿಟ್ಟುಕೊಡುವದರಲ್ಲಿದ್ದರು. ಅಷ್ಟರಲ್ಲಿ ದೂರದಲ್ಲಿ ಎಲ್ಲಿಯೊ ಯಾರೋ ಒಬ್ಬರು ಕಂಡಹಾಗಾಯಿತು. ಇಬ್ಬರೂ ಆ ಕಡೆ ಸಾಗಿದರು. ಒಂದು ಹರಕು ಮುರುಕ ಗುಡಿಸಲೆಡೆಗೆ ಒಬ್ಬ ನಡೆದಿದ್ದ. ಹತ್ತಿರ ಬಂದ, ಹಾಗೆ "ಆತ ನಮ್ಮಲ್ಲಿ ಕೆಲಸಕ್ಕೆ ಬರುತ್ತಿದ್ದ ಎಬೆಲ್ ಹಾಗಿಲ್ಲವೆ?" ಎಂದು ಇನ್ನೂ ಮುಂದಕ್ಕೆ ಬಂದರು. ವ್ಯಕ್ತಿ ಗುಡಿಸಲಿನೊಳಕ್ಕೆ ಹೋಗಿತ್ತು. ಬಾಗಿಲು ತಟ್ಟಿದಾಗ ಒಳಗಿನಿಂದ ಬಂದವ ಎಬೆಲ್‌ನೇ ಆಗಿದ್ದ. "ಅದೇನು ಎಬೆಲ್, ಇಲ್ಲಿ ಹೇಗೆ ನೀನು?" ಎಂದುದಕ್ಕೆ ಆತ "ನನ್ನ ಬಗೆಯಲ್ಲಿ ಆತ ನಿಷ್ಠುರನಾಗಿದ್ದರೂ ನನ್ನ ತಾಯಿಯನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದ" ಎಂದು ಹೇಳಿದ.

"ಯಾರು? ಏನು ನೀನು ಹೇಳುತ್ತಿರುವದು?"

"ಗೊತ್ತಿಲ್ಲವೆ ನಿಮಗೆ? ಅವನೇ, ಹೆಂಚರ್ಡ. ಅವನೀಗ ಹೋಗಿ ಅರ್ಧ ಗಂಟೆಯಾಯಿತು!"

ತಾನು ಅವರಿಬ್ಬರ ಮದುವೆಯ ರಾತ್ರಿ ಊರ ಬೀದಿಯಲ್ಲಿ ತತ್ತರಿಸುತ್ತ ಹೊರಟಿದ್ದ ಆತನನ್ನು ಕಂಡು ಹಿಂಬಾಲಿಸಿ ಬಂದದ್ದನ್ನು ರಾತ್ರಿಯೆಲ್ಲವೂ ಆತ ನಡೆದು ನಡೆದು ಕಂಗಾಲಾಗಿ

ಕುಸಿದು ಬೀಳುತ್ತಿರುವಾಗ ಆತನನ್ನು ತಾನು ಅಲ್ಲಿಗೆ ಸಾಗಿಸಿದ್ದನ್ನು, ಇತ್ತೀಚಿನ ಮೂರು ದಿನ ಅನ್ನ ನೀರು ಎಲ್ಲವನ್ನೂ ತೊರೆದು ಆತ ಅದೇ ಪ್ರಾಣ ಬಿಟ್ಟದ್ದನ್ನು ಎಬೆಲ್ ವಿವರಿಸಿದ. "ತಲೆ ದಿಂಬಿನ ಹತ್ತಿರ ಏನನ್ನೋ ಬರೆದಿಟ್ಟಿದ್ದಾನೆ. ನನಗೆ ಓದುಬಾರದು" ಎಂದು ಒಳಗೆ ಹೋಗಿ ಮುದ್ದೆಯಾಗಿದ್ದ ಒಂದು ಕಾಗದವನ್ನು ತಂದು ಕೊಟ್ಟ. ಅದರಲ್ಲಿ ಹೀಗೆ ಬರೆದಿತ್ತು: "ಹೆಂಚರ್ಡನ ಮರಣಶಾಸನ—ನನ್ನ ಸಾವಿನ ಸಮಾಚಾರವನ್ನು ಎಲಿಝಾಬೆತ್‌ಳಿಗೆ ತಿಳಿಸಿ ಆಕೆಯನ್ನು ನೋಯಿಸಬಾರದು; ಯಾವ ಪುಣ್ಯ ಭೂಮಿಯಲ್ಲಿಯೂ ನನ್ನನ್ನು ಹೂಳಬಾರದು; ನನ್ನ ಮೃತದೇಹವನ್ನು ಯಾರೂ ನೋಡಬಾರದು; ನನ್ನಗೋರಿಯ ಮೇಲೆ ಯಾರೂ ಹೂವುಗಳನ್ನಿರಿಸಬಾರದು. ನನ್ನನ್ನು ಯಾರೂ ಎಂದಿಗೂ ನೆನೆಯಬಾರದು" ಇತ್ಯಾದಿ.

ಶೋಕಾಕುಲರಾಗಿ ಇಬ್ಬರೂ ಆ ಲೇಖವನ್ನೋದಿದರು. ಸಾಧ್ಯವಿದ್ದ ಮಟ್ಟಿಗೆ ಆತನ ಮಾತನ್ನು ನಡೆಸಿದರು. ತಾನು ಕೊ… ಆತನಿಗಾಡಿದ ಮಾತೇ ಇಷ್ಟಕ್ಕೆ ಕಾ… ಯಿತು ಎಂದು ಎಲಿಝಾಬೆತ್ ಪರಿತಪಿ… ದಿನ ಕಳೆದ ಹಾಗೆ ಆಕೆಯ ದುಃಖದ … ಕಡಿಮೆಯಾದರೂ ಒಟ್ಟಿನಲ್ಲಿ ಬದು… ಎಂದು ತೋರಿತು. ಕಷ್ಟ ತುಂಬಿದ … ದಲ್ಲಿಯ ನಾಲ್ಕು ದಿನದ ಇರವಿನ … ಇಲ್ಲದ ಉತ್ಸಾಹ ಯಾರಿಗೂ ಸಲ್ಲದು … ತೋರಿತು. ತನ್ನ ಹಾಗೆ ಯೋಗ್ಯತೆಗೆ … ಸುಖವನ್ನು ಕೆಲವರು ಪಡೆಯಬಹು… ಯೋಗ್ಯತೆಗೆ ತಕ್ಕ ಸುಖವನ್ನು ಪಡೆಯ… ಹಲವರಿರಬಹುದು ಎಂದೆನಿಸಿತು. ತನ್ನ… ಸುಖದಲ್ಲಿಯೆ ಪರ್ಯವಸಾನವಾಗಿದ್ದರು… ಬೆಳೆಯುವದು ಅನಿರೀಕ್ಷಿತವಾಗಿಯೆ ಎಂ… ಗಲಿ, ಈ ಬಾಳುವೆಯೆಂಬ ಶೋಕಸಂ… ಯಲ್ಲಿ ಸುಖವೆಂಬುದೊಂದು ಅಡ್ಡ ಕ… ಎಂಬುದನ್ನಾಗಲಿ ಆಕೆ ಮರೆಯುವದು… ವಿರಲಿಲ್ಲ.



# ಅಧ್ಯಾತ್ಮ ಕಾರ್ಯಾಲಯದ ಪ್ರಕಟನೆಗಳು

## ಶ್ರೀ ದಿವಾಕರ ರಂಗನಾಥರ ಅಮೂಲ್ಯ ಗ್ರಂಥಗಳು

| | | ರೂ. | ಆ. | ಪೈ. |
|---|---|---|---|---|
| ೧. | ಅಂತರಾತ್ಮನಿಗೆ (೪ ನೆಯ ಆವೃತ್ತಿ) | ೧ | ೦ | ೦ |
| ೨. | ಗೀತೆಯ ಗುಟ್ಟು (೪ ನೆಯ ಆವೃತ್ತಿ) | ೨ | ೧೨ | ೦ |
| ೩. | ಗೀತಾ ನಿತ್ಯಪಾಠ (೨ ನೆಯ ಆವೃತ್ತಿ) | ೦ | ೬ | ೦ |
| ೪. | ಉಪನಿಷತ್ಪ್ರಕಾಶ (೫ ನೆಯ ಆವೃತ್ತಿ) | ೩ | ೮ | ೦ |
| ೫. | ಛಾಂದೋಗ್ಯೋಪನಿಷತ್ತು (೧ ನೆಯ ಆವೃತ್ತಿ) | ೩ | ೮ | ೦ |
| ೬. | ಬೃಹದಾರಣ್ಯಕೋಪನಿಷತ್ತು (೧ ನೆಯ ಆವೃತ್ತಿ) | ೩ | ೮ | ೦ |
| ೭. | ಉಪನಿಷತ್ ರಹಸ್ಯ (೨ ನೆಯ ಆವೃತ್ತಿ) | ೩ | ೮ | ೦ |
| ೮. | ಉಪನಿಷತ್ಕಥಾವಲಿ (೩ ನೆಯ ಆವೃತ್ತಿ) | ೧ | ೬ | ೦ |
| ೯. | ಭಕ್ತಿಸೂತ್ರಗಳು (೨ ನೆಯ ಆವೃತ್ತಿ) | ೦ | ೧೦ | ೦ |
| ೧೦. | ಕರ್ಮಯೋಗ (೨ ನೆಯ ಆವೃತ್ತಿ) | ೧ | ೮ | ೦ |
| ೧೧. | ಹರಿಭಕ್ತಿ ಸುಧೆ (೩ ನೆಯ ಆವೃತ್ತಿ) | ೨ | ೮ | ೦ |
| ೧೨. | ರಾಮಕೃಷ್ಣ ಚರಿತಾಮೃತ (೩ ನೆಯ ಆವೃತ್ತಿ) | ೩ | ೦ | ೦ |
| ೧೩. | ಬಾಪೂ (೩ ನೆಯ ಆವೃತ್ತಿ) | ೨ | ೦ | ೦ |
| ೧೪. | ಗಾಂಧೀಜಿ (ನಾನು ಕಂಡಂತೆ) (೧ ನೆಯ ಆವೃತ್ತಿ) | ೧ | ೪ | ೦ |
| ೧೫. | ಸತ್ಯಾಗ್ರಹ (೨ ನೆಯ ಆವೃತ್ತಿ) | ೩ | ೮ | ೦ |
| ೧೬. | ಮಹಾತ್ಮರ ಮನೋರಂಗ (೨ ನೆಯ ಆವೃತ್ತಿ) | ೩ | ೮ | ೦ |
| ೧೭. | ಸೆರೆಯ ಮರೆಯಲ್ಲಿ (೨ ನೆಯ ಆವೃತ್ತಿ) | ೨ | ೮ | ೦ |
| ೧೮. | ವಚನಶಾಸ್ತ್ರ ರಹಸ್ಯ (೩ ನೆಯ ಆವೃತ್ತಿ) | ೬ | ೦ | ೦ |
| ೧೯. | ಮಹಾಯೋಗಿ (ಮಹರ್ಷಿ ಅರವಿಂದರು) (೧ ನೆಯ ಆವೃತ್ತಿ) | ೨ | ೮ | ೦ |
| ೨೦. | ಯಾತ್ರಿಕ (ಮನೋಹರ ಗ್ರಂಥ ಪ್ರಕಾಶನ) | ೨ | ೦ | ೦ |

ದೊರೆಯುವ ಸ್ಥಳ: **ಅಧ್ಯಾತ್ಮ ಕಾರ್ಯಾಲಯ, ಹುಬ್ಬಳ್ಳಿ.**

KASTURI Register No. B 7487

A comprehensive Kannada Monthly Digest which circulates throughout the New Mysore State and commands the highest number of readers. It caters to all tastes and is appreciated by all alike.

# ಈ ಸಂಚಿಕೆಯಲ್ಲಿ

ಓದದೆ ಬಿಡಲಾರದ ಲೇಖಗಳಲ್ಲಿ ಕೆಲವು . . .

ಅಂಬೇಡಕರರ ಕರುಣ ಕಥೆ

ಭಾರತದ ಹಾಕೀ ಸಾಧನೆ

ಪೌರಸ್ತ್ಯ ಮಾಯಾವಿನಿ ಕ್ಲಿಯೋಪಾತ್ರಾ

ನಾನು ಗಳಿಸಿದ ಮೊದಲನೇ ರೂಪಾಯಿ

ಭೂಮಿಯ ಮಹಾ ಪ್ರಾಣಿಗಳು

ಪರಶುರಾಮರು ಗಂಟು ಅಗೆದಾಗ

ಇಡಲಿಯ ಕಥೆ

ಮಕ್ಕಳ ಗಂಟಲುಬೇನೆ ಡಿಪ್ತೀರಿಯಾ

ನವಾಬಸಾಹೇಬರ ಕೋಳಿಗಳು

ಸಿಡಿಲಿನಿಂದ ಹೇಗೆ ತಪ್ಪಿಸಿಕೊಳ್ಳಬೇಕು ?

ಪುಸ್ತಕ ವಿಭಾಗ

ಥಾಮಸ್ ಹಾರ್ಡಿಯ ಕಾದಂಬರಿ

ಕ್ಯಾಸ್ಟಬ್ರಿಜ್ ನಗರಾಧ್ಯಕ್ಷ

. . . ಇತ್ಯಾದಿ

January, 1



As. 12

ಲೋಕಶಿಕ್ಷಣ